॥ ಶ್ರೀಃ ॥

# ಶ್ರೀಮದನುವ್ಯಾಖ್ಯಾನವು.



## ಮೂರನೇ ಅಧ್ಯಾಯವು.

### ಒಂದನೇ ಪಾದವು

ಓಂ ॥ ವೈರಾಗ್ಯಭಕ್ತಿ ಶ್ರವಣಮನನಧ್ಯಾನಯೋಗತಃ ।
ಸದ್ಭಿರ್ಜ್ಞೇಯಂ ಭಜೇ ಮಧ್ವವಲ್ಲಭಂ ಕಮಲಾಪತಿಂ ॥
ನಮೋ ವೇದಾಂತರಾದ್ಧಾಂತ ಸೂಕ್ತಿರತ್ನಾಕರಾತ್ಮನೇ ।
ಶ್ರೀಮದಾನಂದತೀರ್ಥಾಖ್ಯಭಗವದ್ದುಗ್ಧಸಿಂಧವೇ ॥
ಅನುವ್ಯಾಖ್ಯಾಸುಧಾಗ್ರಂಥತೃತೀಯಾಧ್ಯಾಯಮಾದರಾತ್ ।
ಭಾಷಾಟೀಕಾಯುತಂ ಕುರ್ವೇ ತಂತ್ರಿನಾರಾಯಣಾಭಿದಃ ॥

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂ ॥ ಸ್ವಾಭಾವಿಕಾನ್ಯಥಾನಾಮ ಸಹಾಭಾವಾನ್ಯಥೋಕ್ತಯಃ ।
ಅವಿಶೇಷವಿಶೇಷೌ ಚ ಸಹಭಾವೋ ವಿಮಿಶ್ರತಾ ॥ ೧ ॥
ವಿರುದ್ಧೋಕ್ತಿಃ ಸಹಸ್ಥಾನಂ ವೈಯರ್ಥ್ಯಂ ಚಾನ್ಯಥಾಗತಿಃ ।
ಯುಕ್ತಯಃ ಪೂರ್ವಪಕ್ಷಸ್ಯ ಗುಣಾಧಿಕ್ಯಾರ್ಥತೋ ಭವೌ ॥ ೨ ॥
ಉಪಪತ್ತಿರ್ದ್ವಿರೂಪತ್ವಮಾಧಿಕ್ಯಮನುರೂಪತಾ ।
ಯೋಗ್ಯತಾ ಬಲವತ್ತ್ವಂ(ಪ್ರಬಲತ್ವಂ)ಚ ವಿಭಾಗಃ ಕಾರಣಾಭವಃ॥೩॥
ಕ್ಲಪ್ತಿರನ್ಯಾಗತಿಶ್ಚೈವ ಸಿದ್ಧಾಂತಸ್ಯೈವ ಸಾಧಿಕಾಃ ॥ ೪ ॥

ಅ ॥ ಸ್ವಾಭಾವಿಕಾನ್ಯಥಾನಾಮಸಹಾಭಾವಾನ್ಯಥೋಕ್ತಯಃ, (೧) ಸ್ವಾಭಾವಿಕ=ಸ್ವಾಭಾವಿಕಮರಣವು, (೨) ಅನ್ಯಥಾ ನಾಮ=ಸಾಮಾನ್ಯ ನಾಮಕ್ಕಿಂತ ವಿಶೇಷ ನಾಮವು. (೩) ಸಹಾಭಾವ=ಜೀವನಿಂದ ಕೂಡಿಕೊಂಡು ಗತ್ಯುಕ್ತಿಯಿಲ್ಲದಿರುವುದು, (೪) ಅನ್ಯಥೋಕ್ತಯಃ=ಜೀವನಿಂದ ಕೂಡಿಕೊಂಡು ಗತ್ಯುಕ್ತಿಗಿಂತ ವ್ಯತ್ಯಾಸವಾಗಿ ವಾಗಾದಿಗಳಿಗೆ ಅಗ್ನ್ಯಾದಿಗಳಲ್ಲಿ ಗಮನೋಕ್ತಿಯು ಇವುಗಳು, (೫) ಅವಿಶೇಷವಿಶೇಷೌ ಚ, ಅವಿಶೇಷ=ವಿಶೇಷೋಕ್ತಿಯಿಲ್ಲದಿರುವುದು,(೬)ಅಥವಾ ಅವಿಶೇಷ=ವಿಶೇಷಾಶ್ರವಣವೂ, (೭)ವಿಶೇಷೌ ಚ=ವಚನವಿಶೇಷವೂ ಇವುಗಳು, (೮) ಸಹಭಾವಃ=ಕರ್ಮಿಗಳಿಗೆ ಸ್ವರ್ಗಕ್ಕೆ ಜೀವನಿಂದ ಕೂಡಿ ಇರುವಿಕೆಯು, (೯) ಅಥವಾ ಸಹಭಾವಃ=ಮಾರ್ಗಕ್ಕೆ ಜೀವನ ಮನಸ್ಸಿನಲ್ಲಿ ಇರುವಿಕೆಯು, (೧೦) ಅಥವಾ ಸಹಭಾವಃ=ಯಾಗಾದಿಗಳಿಂದ ಆಚಾರಕ್ಕೆ ಸಹಪಾಠವು, ಸ್ವರ್ಗದಿಂದ ಗಮನಾಗಮನಕ್ಕೆ ಸಹೋಕ್ತಿಯು, (೧೧) ವಿಮಿಶ್ರತಾ = ಯಜ್ಞಾದಿಕರ್ತೃಗಳಿಗೆ ವಿಮಿಶ್ರ [illegible]ವು, (೧೨) ವಿರುದ್ಧೋಕ್ತಿಃ=(ನರಕಕ್ಕೆ ನಿತ್ಯತ್ವೋಕ್ತಿಯು) ವಿರುದ್ಧವಾದ ಉಕ್ತಿಯು, (೧೩ ಸಹ ಸ್ಥಾನಂ=ಈಶನಿಗೂ

ಒಟ್ಟು ಇರುವಿಕೆಯು, (೧೪) ಅಥವಾ ಸಹಸ್ಥಾನಂ=ವಿದ್ಯೆಷ್ವಾದಿ ಸಾಧನದಿಂದ ಕೂಡಿಕೊಂಡು ಫಲಕ್ಕೆ ಸ್ಥಿತಿಕಥನವು, (೧೫) ಅಥವಾ ಸಹಸ್ಥಾನಂ=ದುಃಖಕ್ಕೆ ಸುಖದಿಂದ ಕೂಡಿಕೊಂಡು ಇರುವಿಕೆಯು, (೧೬) ಅಥವಾ ಸಹಸ್ಥಾನಂ=ಕರ್ಮಿಗಳಿಗೆ ಧೂಮಾದಿದೇವತೆಗಳಿಂದ ಕೂಡಿ ಕೊಂಡು ಇರುವಿಕೆಯು, (೧೭) ಅಥವಾ ಸಹಸ್ಥಾನಂ=ದೂಮಾದಿದೇವತೆಗಳಿಂದ ಕೂಡಿ ಇರುವಿಕೆಯು. (೧೮) ಅಥವಾ ಸಹಸ್ಥಾನಂ = ವ್ರೀಹ್ಯಾದಿಜೀವರಿಂದ ಒಟ್ಟು ಇರುವಿಕೆಯು, (೧೯) ವೈಯರ್ಥ್ಯಂ ಚ=ಪಿತೃಪ್ರವೇಶಕ್ಕೆ ವೈಯರ್ಥ್ಯವು, (೨೦) ಅನ್ಯಥಾಗತಿಃ=ಬೇರೆಪ್ರಕಾರ ಮಾತೃ ಶರೀರ ಪ್ರಾಪ್ತಿಯು, ಇವುಗಳು, ಪೂರ್ವಪಕ್ಷಸ್ಯ=ಪೂರ್ವಪಕ್ಷದ, ಯುಕ್ತಯಃ=ಯುಕ್ತಿಗಳು. (೧) ಗುಣಾಧಿಕ್ಯಾರ್ಥತೋ ಭವೌ, ಗುಣಾಧಿಕ್ಯ=ಮುಕ್ತಿಗಾಗಿ ಅಪರೋಕ್ಷಜ್ಞಾನಾದಿರೂಪವಾದ ಗುಣಾಧಿಕ್ಯೋಪದೇಶವು, (೨) ಅರ್ಥತೋ ಭವೌ=ಸರ್ವಭೂತಗತಿಗೆ ಅರ್ಥಾತ್ ಪ್ರಾಪ್ತಿಯು, (೩) ಉಪಪತ್ತಿಃ = ಪ್ರಾಣಗತಿರೂಪವಾದ ಉಪಪತ್ತಿಯು (ವಸ್ತುತಃ ಸಿದ್ಧವಾಗಿದೆ.) (೪) ದ್ವಿರೂಪತ್ವಂ = ಇಂದ್ರಿಯಗಳಿಗೆ ದ್ವಿರೂಪತ್ವವಿರುವಿಕೆಯು, (೫) ಆಧಿಕ್ಯಂ=**'ಆಪಃ ಪುರುಷ ವಚಸೋ ಭವಂತಿ'** ಎಂದು ಉಪಸಂಹಾರಕ್ಕೆ ಆಧಿಕ್ಯವು, (೬) ಅನುರೂಪತಾ=ಸ್ಥಾನಾಂತರದಲ್ಲಿ ಜೀವನಿಂದ ಕೂಡಿಕೊಂಡು ಭೂತಗಳ ಗತಿ ಶ್ರವಣಕ್ಕೂ ಆರ್ಥಿಕಶ್ರವಣಾನುಕೂಲತ್ವವು, (೭) ಯೋಗ್ಯತಾ=ಅಮೃತಶಬ್ದಕ್ಕೆ ಯೋಗ್ಯಗಳಾದ ಅನೇಕಾರ್ಥಗಳ ಇರುವಿಕೆಯು, (೮) ಯೋಗ್ಯತಾ=ಯೋಗ್ಯತಾನುಸಾರವಾಗಿ ಫಲವನ್ನು ಕೊಡುವಿಕೆಯು, (೯) ಯೋಗ್ಯತಾ= ಯೋಗ್ಯತಾನುಸಾರವಾಗಿಯೇ ಆಗಮನವು, (೧೦)ಯೋಗ್ಯತಾ=ಚರಣಶಬ್ದದಿಂದಲೇ ಕರ್ಮಕ್ಕೂ ಉಕ್ತಿಯೋಗ್ಯತ್ವವು, (೧೧) ಬಲವತ್ವಂ ಚ=ದೋಷಗಳಿಗೆ ಪ್ರಾಬಲ್ಯವು, (೧೨) ವಿಭಾಗಃ= ನರಕಗಳಿಗೆ ನಿತ್ಯತ್ವ—ಅನಿತ್ಯತ್ವಗಳಿಂದ ವಿಭಾಗವು. (೧೩) ಕಾರಣಾಭವಃ=ಅಜ್ಞಾನಾದಿದುಃಖ ಕಾರಣವಿಲ್ಲದಿರುವಿಕೆಯು, (೧೪) ಕಾರಣಾಭವಃ = ವಿಹಿತತ್ವರೂಪಕಾರಣವಿಲ್ಲದಿರುವಿಕೆಯು, (೧೫) ಕಾರಣಾಭವಃ = ಈಶ್ವರೇಚ್ಛಾರೂಪಕಾರಣವಿಲ್ಲದಿರುವಿಕೆಯು, (೧೬) ಕಾರಣಾಭವಃ= ವಿದ್ಯಾದಿಕಾರಣವಿಲ್ಲದಿರುವಿಕೆಯು, (೧೭) ಕಾರಣಾಭವಃ=ಪ್ರಮಾಣವಿಶೇಷದಿಂದ ಕ್ಲೃಪ್ತವಾದ ಕಾಲಕ್ಕಿಂತ ಹೆಚ್ಚು ಕಾಲ ಇರಲಿಕ್ಕೆ ಕಾರಣವಿಲ್ಲದಿರುವಿಕೆಯು, (೧೮) ಕಾರಣಾಭವಃ=ಪಾಪಾಖ್ಯಕಾರಣವಿಲ್ಲದಿರುವಿಕೆಯು, (೧೯) ಕ್ಲೃಪ್ತಿಃ=ಈಶನ ಸಂಕಲ್ಪವು, (೨೦) ಅನ್ಯಾಗತಿಶ್ಚೈವ=ಬೇರೆ ಪ್ರಕಾರದಿಂದ ಗತ್ಯಭಾವವು. (ಗತ್ಯಂತರಾಭಾವವು) ಇವುಗಳು, ಸಿದ್ಧಾಂತಸ್ಯೈವ=ಸಿದ್ಧಾಂತಕ್ಕೇನೇ, ಸಾಧಕಾಃ=ಸಾಧಕಗಳಾದ ಯುಕ್ತಿಗಳು.

**ತಾ ||** ೧ನೇ ತದಂತರಾಧಿಕರಣದಲ್ಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎನ್ನುವ ಸೂತ್ರದಲ್ಲಿರತಕ್ಕ ಅಥ ಶಬ್ದದಿಂದ ವೈರಾಗ್ಯಾದಿಗಳು ಮೋಕ್ಷಸಾಧನಗಳೆಂದು ಹೇಳಿದರಿಂದ ವೈರಾಗ್ಯಾದಿಗಳು ಇದ್ದರೆ ಮುಕ್ತಿಯು, ಇಲ್ಲದಿದ್ದರೆ ಮುಕ್ತಿಯಿಲ್ಲ, ಎಂದು ಅನ್ವಯ ವ್ಯತಿರೇಕಗಳು ಕಂಡು ಬಂದುದರಿಂದ ವೈರಾಗ್ಯಾದಿಗಳನ್ನು ಮೋಕ್ಷವನ್ನು ಇಚ್ಛಿಸುವವನು ಸಂಪಾದಿಸಬೇಕೋ ಬೇಡವೋ ಎಂದು ಸಂದೇಹವು ಬಂದರೆ ಮೋಕ್ಷವನ್ನು ಇಚ್ಛಿಸುವವನು ವೈರಾಗ್ಯಾದಿಗಳನ್ನು ಸಂಪಾದಿಸ ಬೇಕಾಗಿಲ್ಲ ಎಂದು ಪೂರ್ವಪಕ್ಷವು. ವೈರಾಗ್ಯಾದಿ ಸಾಧನಗಳನ್ನು ಸಂಪಾದಿಸಲೇಬೇಕೆಂದು ಸಿದ್ಧಾಂತವು. ಅದರಲ್ಲಿ ಸ್ವಾಭಾವಿಕವೆನ್ನುವುದು ಪೂರ್ವಪಕ್ಷ ನ್ಯಾಯವು. ಗುಣಾಧಿಕ್ಯವೆನ್ನುವುದು ಸಿದ್ಧಾಂತ ನ್ಯಾಯವು. ಅಂದರೆ **'ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ'** ಎನ್ನುವ ವಚನದ್ದೆಶೆಯಿಂದ ಸ್ವಾಭಾವಿಕ ಮರಣವೇ ಮುಕ್ತಿಯು. ಏವಂಚ ಭೂತ ವಿಯೋಗರೂಪ ಮರಣವೇ ಮೋಕ್ಷವಾಗಿರುವುದರಿಂದ ಮರಣವು ಸ್ವಾಭಾವಿಕವಾಗಿರುವುದರಿಂದ ಇಂತಹ ಮೋಕ್ಷಕ್ಕೆ ವೈರಾಗ್ಯಾಪೇಕ್ಷೆಯಿಲ್ಲದಿರುವುದರಿಂದ ಮೋಕ್ಷಕ್ಕಾಗಿ ವೈರಾಗ್ಯಾದಿ ಸಾಧನ

ಗಳನ್ನು ಪ್ರತಿಪಾದಿಸತಕ್ಕ ಜಿಜ್ಞಾಸಾ ಸೂತ್ರವು ಕೂಡಲಾರದು, ಎಂದರೆ ಹೀಗೆ ಹೇಳಕೂಡದು. ಮುಕ್ತಿಗೆ ಸಾಧನವಾಗಿ ಅಪರೋಕ್ಷಜ್ಞಾನಾದಿಗುಣಗಳನ್ನುಪದೇಶಮಾಡಿರುವುದರಿಂದ ಮರಣದಲ್ಲಿ ಸಂಪೂರ್ಣ ಭೂತವಿಯೋಗವೇ ಇಲ್ಲ. '**ಭೂತಯುಕ್ತಃ ಪರಂ ಲೋಕಮಿಮಂ ಲೋಕಂ ಚ ಗಚ್ಛತಿ**' ಇತ್ಯಾದಿ ವಚನಗಳದ್ದೆಶೆಯಿಂದಲೂ ಸರ್ವಾತ್ಮನಾ ಭೂತವಿಯೋಗವಿಲ್ಲವೆಂದೇ ತಿಳಿದು ಬರುತ್ತದೆ. ಆದುದರಿಂದ ಮರಣಕಾಲದಲ್ಲಿ ಸಂಪೂರ್ಣ ಭೂತವಿಯೋಗವೇ ಇಲ್ಲದಿರುವುದರಿಂದ ಮುಕ್ತಿಗೋಸ್ಕರ ಗುಣಾಧಿಕ್ಯವನ್ನುಪದೇಶಮಾಡಿರುವುದರಿಂದ ಸ್ವಾಭಾವಿಕ ಮರಣಕ್ಕೆ ಮುಕ್ತಿತ್ವ ವಿಲ್ಲದಿರುವ ಪ್ರಯುಕ್ತ ಮೋಕ್ಷವನ್ನು ಇಚ್ಛಿಸುವವನು ವೈರಾಗ್ಯಾದಿಗಳನ್ನು ಸಂಪಾದಿಸಲೇಬೇಕು. ಆದ ಪ್ರಯುಕ್ತ ಜಿಜ್ಞಾಸಾಸೂತ್ರವು ಕೂಡುವುದಿಲ್ಲ, ಎಂದು ಹೇಳಕೂಡದು. (೨) ೨ನೇ ತ್ರ್ಯಾತ್ಮಕತ್ವಾಧಿಕರಣದಲ್ಲಿ '**ಭೂತಪರಿಷ್ವಕ್ತೋ ರಂಹತಿ**' ಎನ್ನುವ ಸಾಧಾರಣ ವಚನವು ಉಭಯ ಥಾಪಿ ಕೂಡುವ ಪ್ರಯುಕ್ತ ಮರಣದಲ್ಲಿ ಸರ್ವ ಭೂತಗಳೂ ಜೀವನೊಟ್ಟಿಗೆ ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ— ಎಲ್ಲಾ ಭೂತಗಳೂ ಜೀವನೊಟ್ಟಿಗೆ ಹೋಗುವುದಿಲ್ಲ ವೆಂದು ಪೂರ್ವಪಕ್ಷವು. ಎಲ್ಲಾ ಭೂತಗಳೂ ಒಟ್ಟಿಗೆ ಹೋಗುತ್ತವೆಂದು ಸಿದ್ಧಾಂತವು ಅದ ರಲ್ಲಿ ಅನ್ಯಥಾನಾಮ ಎನ್ನುವುದು ಪೂರ್ವಪಕ್ಷ ನ್ಯಾಯವು. 'ಅರ್ಥತೋ ಭವಃ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ-'**ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ**' ಎನ್ನುವಲ್ಲಿ 'ಭೂತಾನಿ' ಎಂದು ಸಾಮಾನ್ಯನಾಮವನ್ನುಹೇಳದೆ 'ಆಪಃ' ಎಂದು ವಿಶೇಷ ನಾಮವನ್ನು ಹೇಳಿದ್ದರಿಂದ ಜಲಗಳಿಗೇನೇ ಸಹಗಮನವು. ಸರ್ವ ಭೂತಗಳಿಗೆ ಜೀವನಿಂದ ಸಹಗಮನವಿಲ್ಲ. ಏವಂ ಚ ಶ್ರುತಿಯಲ್ಲಿ 'ಆಪಃ' ಎಂದು ಅನ್ಯಥಾನಾಮವನ್ನು ಹೇಳಿದ್ದರಿಂದ ಸಮಸ್ತ ಭೂತಗಳ ಸಂಬಂಧವಿಲ್ಲದಿರುವುದರಿಂದ ಕೇವಲ ಜಲರೂಪ ಭೂತ ಒಂದಕ್ಕೆ ಶರೀರಾ ರಂಭಕತ್ವವೇ ಇಲ್ಲದಿರುವುದರಿಂದ ಮರಣದಲ್ಲಿಯೇ ಮುಕ್ತಿಯು ಸಿದ್ಧವಾಗುವ ಪ್ರಯುಕ್ತ ವೈರಾಗ್ಯಾದಿಗಳು ವ್ಯರ್ಥವು, ಎಂದರೆ— ಹಾಗೆ ಹೇಳಕೂಡದು. ಜಲಗಳಿಗೆ ತ್ರ್ಯಾತ್ಮಕತ್ವ ವಿದ್ದ ಪ್ರಯುಕ್ತ ಅರ್ಥಾತ್ ಸರ್ವ ಭೂತಗಳಿಗೂ ಗತಿಯು ಪ್ರಾಪ್ತವಾಯಿತು. ಏವಂಚ ಸರ್ವಭೂತಗಳ ಗತಿಯೂ ಅರ್ಥಾತ್ ಪ್ರಾಪ್ತವಾಗುವುದರಿಂದ ಮರಣಕ್ಕೇನೇ ಮುಕ್ತಿತ್ವವಿಲ್ಲದಿರು ವುದರಿಂದ ವೈರಾಗ್ಯಾದಿಗಳನ್ನು ಸಂಪಾದಿಸಲೇಬೇಕು. (3) ೩ನೇ ಪ್ರಾಣಗತ್ಯಧಿಕರಣದಲ್ಲಿ ಸಾಧಕಬಾಧಕಪ್ರಮಾಣವಿಲ್ಲದಿರುವುದರಿಂದ ಭೂತಗಳಿಗೆ ಜೀವನಿಂದ ಸಹಗಮನಾಗಮನಗಳು ಕೂಡುವುದರಿಂದ ಭೂತಗಳು ಮರಣದಲ್ಲಿ ಜೀವನಿಂದೊಡಗೂಡಿ ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ— ಹೋಗುವುದಿಲ್ಲವೆಂದು ಪೂರ್ವಪಕ್ಷವು. ಹೋಗುತ್ತವೆಂದು ಸಿದ್ಧಾಂತವು. ಅದರಲ್ಲಿ ಸಹಾಭಾವ ಎನ್ನುವುದು ಪೂರ್ವಪಕ್ಷನ್ಯಾಯವು. ಉಪಪತ್ತೇಃ ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ಭೂತಗಳು ಜೀವನಿಂದ ಕೂಡಿಕೊಂಡೇ ಹೋಗುತ್ತವೆ ಎಂದು ಸಹಗಮನೋಕ್ತಿಯು ಇಲ್ಲದಿರುವುದರಿಂದ ಭೂತಗಳಿಗೆ ಜೀವನಿಂದ ಕೂಡಿಕೊಂಡು ಗಮನವಿಲ್ಲ. ಎಂದರೆ— ಹಾಗೆ ಹೇಳಕೂಡದು. ಪ್ರಾಣಗತಿರೂಪವಾದ ಉಪಪತ್ತಿಯದೆಶೆಯಿಂದ ಭೂತ ಗತಿಯು ಸಿದ್ಧವಾಗಿದೆ. ಅಂದರೆ—'**ಯತ್ರ ವಾವ ಭೂತಾನಿ ತತ್ರ ಕರಣಾನಿ**' ಎನ್ನುವ ಶ್ರುತಿ ಯುದ್ದೆಶೆಯಿಂದ ಭೂತಗಳಿಗೆ ಇಂದ್ರಿಯಗಳಿಂದ ವ್ಯಾಪ್ತಿಯಿದೆ. ಆದಕಾರಣ ವ್ಯಾಪಕವಾದ ಪ್ರಾಣಗತಿಯದ್ದೆಶೆಯಿಂದ ತದ್ವ್ಯಾಪ್ಯಭೂತಗಳಿಗೂ ಜೀವನಿಂದ ಸಹಗಮನವಿದೆ. ತಥಾಚ 'ಭೂತಾನಿ ಜೀವೇನ ಸಹಗಮನವಂತಿ ತತ್ಸಹಗಂತೃಪ್ರಾಣಾವಿನಾಭೂತತ್ವಾತ್ ಯದ್ಯೇನ ಸಹ ಗಂತ್ರಾವಿನಾಭೂತಂ ತತ್ತೇನ ಸಹ ಗಚ್ಛತಿ ಯಥಾ ರಾಜ್ಞಾಸಹ ಗಂತ್ರಮಾತ್ಯಾವಿನಾಭೂತ ಭೃತ್ಯಃ' ಭೂತಗಳು ಜೀವನಿಂದ ಕೂಡಿ ಗಮನವುಳ್ಳವುಗಳು; ಭೂತಗಳೊಟ್ಟಿಗೆ ಇರುವ ಪ್ರಾಣ

ಗಳಿಂದ ವ್ಯಾಪ್ತಗಳಾದಪ್ರಯುಕ್ತ ಯಾವುದು ಯಾವುದರಿಂದ ಕೂಡಿ ವ್ಯಾಪ್ತವಾಗಿದೆಯೋ ಅದು ಅದರಿಂದ ಕೂಡಿಕೊಂಡು ಹೋಗುತ್ತದೆ. ರಾಜನಿಂದ ಕೂಡಿಕೊಂಡು ಹೋಗತಕ್ಕ ಮಂತ್ರಿಯಿಂದ ವ್ಯಾಪ್ತನಾದ ಭೃತ್ಯನಂತೆ. ತಥಾಚ ಉಪಪತ್ತಿಯುದೆಶೆಯಿಂದ ಭೂತಗಳ ಗತಿಯು ಸಿದ್ಧಿಸುವಪ್ರಯುಕ್ತ ಹಿಂದೆ ಹೇಳಿದ್ದು ಯುಕ್ತವು. (4) ಆನೇ ಅಗ್ನ್ಯಧಿಕರಣದಲ್ಲಿ ನಿರ್ಣಾಯಕ ಪ್ರಮಾಣವಿಲ್ಲದಿರುವುದರಿಂದ ಮರಣದಲ್ಲಿ ಪ್ರಾಣಗಳು ಜೀವನಿಂದ ಕೂಡಿಕೊಂಡು ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ— ಹೋಗುವುದಿಲ್ಲವೆಂದು ಪೂರ್ವಪಕ್ಷವು, ಹೋಗುತ್ತವೆ ಎಂದು ಸಿದ್ಧಾಂತವು. ಅದರಲ್ಲಿ ಅನ್ಯಥೋಕ್ತಿ ಎಂದು ಪೂರ್ವಪಕ್ಷನ್ಯಾಯವು, ದ್ವಿರೂಪತ್ವಂ ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— **'ಅಗ್ನಿಂ ವಾಗಪ್ಯೇತಿ ವಾತಂ ಪ್ರಾಣಶ್ಚಕ್ಷುರಾದಿತ್ಯಂ ಮನಶ್ಚಂದ್ರಮುಸಂ ದಿಶಃ ಶ್ರೋತ್ರಂ'** ಇತ್ಯಾದಿಪ್ರಕಾರ ಜೀವನಿಂದ ಸಹಗಮನೋಕ್ತಿಗಿಂತ ವಾಗಾದಿಗಳಿಗೆ ಅಗ್ನ್ಯಾದಿಗತಿಯನ್ನು ಹೇಳಿದರಿಂದ ಪ್ರಾಣಗಳಿಗೂ, ಪ್ರಾಣಾವಿನಾಭೂತಗಳಾದ ಭೂತಗಳಿಗೂ ಜೀವನಿಂದ ಸಹಗಮನವಿಲ್ಲ. ಏವಂಚ ಇಂದ್ರಿಯಗತಿಗೆ ಅನ್ಯಥೋಕ್ತಿಯಿದ್ದಪ್ರಯುಕ್ತ ಪ್ರಾಣಗಳಿಗೆ ಜೀವನಿಂದ ಸಹಗಮನವಿಲ್ಲದಿರುವಪ್ರಯುಕ್ತ ತದ್ವ್ಯಾಪ್ತಗಳಾದ ಭೂತಗಳಿಗೂ ಸಹಗತಿಯಿಲ್ಲದಿರುವಪ್ರಯುಕ್ತ ಮರಣವೇ ಮೋಕ್ಷವು. ಆದಕಾರಣ ವೈರಾಗ್ಯಾದಿಗಳು ವ್ಯರ್ಥವೇ, ಎಂದರೆ— ಹೀಗೆ ಹೇಳಕೂಡದು. ಪ್ರಾಣಗಳಿಗೆ ದ್ವಿರೂಪತ್ವವಿದೆ. **'ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು । ಅಧಿಷ್ಠೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಂ'** ॥ ಎನ್ನುವ ಪ್ರಮಾಣಬಲದಿಂದ ಇಂದ್ರಿಯಗಳು ಒಂದು ಅಂಶದಿಂದ ಅಗ್ನ್ಯಾದಿಗಳನ್ನು ಹೊಂದುತ್ತವೆ, ಒಂದು ಅಂಶದಿಂದ ಜೀವನೊಟ್ಟಿಗೆ ಇರುತವೆ. ಆದಪ್ರಯುಕ್ತ 'ಯತ್ರಾಸ್ಯ **ಮೃತಸ್ಯ'** ಎನ್ನುವ ಶ್ರುತಿಯು ಒಂದು ಅಂಶದಿಂದ ಇಂದ್ರಿಯಗಳಿಗೆ ಅಗ್ನ್ಯಾದಿಗತಿಯನ್ನು ಪ್ರತಿಪಾದಿಸುತ್ತದೆ. ಏವಂಚ ಪ್ರಾಣಗಳಿಗೆ ದ್ವಿರೂಪತ್ವವಿದ್ದಪ್ರಯುಕ್ತ ಒಂದು ರೂಪದಿಂದ ಜೀವನೊಟ್ಟಿಗೂ, ಗಮನವಿದ್ದಪ್ರಯುಕ್ತ ಇಂದ್ರಿಯಗಳಿಂದ ವ್ಯಾಪ್ತಗಳಾದ ಭೂತಗಳಿಗೂ ಜೀವನಿಂದ ಸಹಗಮನವಿದೆ. ಆದಕಾರಣ ವೈರಾಗ್ಯಾದಿಗಳು ವ್ಯರ್ಥಗಳಲ್ಲ. (5) ಆನೇ ಪ್ರಥಮೇಶ್ರವಣಾಧಿಕರಣದಲ್ಲಿ ಮರಣಕಾಲದಲ್ಲಿ ಜೀವನಿಂದ ಸಹಗಮನವುಳ್ಳ ಪ್ರಾಣಗಳೂ, ಸಹಗಮನವಿಲ್ಲದಿರುವ ವಸ್ತುಗಳೂ ಕಂಡಿರುವುದರಿಂದ ಭೂತಗಳು ಜೀವನಿಂದ ಕೂಡಿಕೊಂಡು ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ— ಇಲ್ಲವೆಂದು ಪೂರ್ವಪಕ್ಷವು, ಹೋಗುತ್ತವೆಂದು ಸಿದ್ಧಾಂತವು. ಅದರಲ್ಲಿ ಅವಿಶೇಷವೆನ್ನುವುದು ಪೂರ್ವಪಕ್ಷನ್ಯಾಯವು, 'ಆಧಿಕ್ಯಂ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ಉಪಕ್ರಮದಲ್ಲಿ ದ್ಯು, ಪರ್ಜನ್ಯ, ಧರಾ, ಪುಂ, ಸ್ತ್ರೀ ಎನ್ನುವ ಐದು ಅಗ್ನಿಗಳ ಮಧ್ಯದಲ್ಲಿ ಪ್ರಥಮಾಗ್ನಿಯಲ್ಲಿ 'ಭೂತಾನಿ ಜುಹ್ವತಿ' ಎಂದು ವಿಶೇಷೋಕ್ತಿಯಿಲ್ಲದಿರುವುದರಿಂದ ಭೂತಗಳಿಗೆ ಸಹಗಮನವಿಲ್ಲ ಅಂದರೆ ಭೂತಗಳಿಗೆ ಮರಣಕಾಲದಲ್ಲಿ ಜೀವನಿಂದ ಸಹಗಮನವಿದ್ದರೆ **'ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ'** ಎನ್ನುವ ಉಪಕ್ರಮವಾಕ್ಯದಲ್ಲಿ ದ್ಯ್ವಾಖ್ಯಪ್ರಥಮಾಗ್ನಿಯಲ್ಲಿ ಶ್ರದ್ಧೆಯಿಂದ ಯಾಗಮಾಡಿದ ಉತ್ಕ್ರಾಂತಪುರುಷನಿಗೆ 'ಶ್ರದ್ಧಾಂ ಜುಹ್ವತಿ' ಎಂದು ಶ್ರದ್ಧಾಸಾಹಿತ್ಯದಿಂದ ಹೋಮವು ಶ್ರುತವಾದ ಹಾಗೆ 'ಭೂತಾನಿ ಜುಹ್ವತಿ' ಎಂದು ಭೂತಸಾಹಿತ್ಯದಿಂದ ಹೋಮವು ಶ್ರುತವಾಗಬೇಕಾಗುವುದು. ಏವಂಚ 'ಶ್ರದ್ಧಾಂ ಜುಹ್ವತಿ' ಎನ್ನುವುದರಂತೆ 'ಭೂತಾನಿ ಜುಹ್ವತಿ' ಎಂದು ವಿಶೇಷೋಕ್ತಿಯು ಇಲ್ಲದಿರುವುದರಿಂದ, ಭೂತಗಳಿಗೆ ಸಹಗತಿಯು ಇಲ್ಲದಿರುವುದರಿಂದ, ಮರಣವೇ ಮೋಕ್ಷವಾಗಿರುವುದರಿಂದ ವೈರಾಗ್ಯಾದಿಗಳು ವ್ಯರ್ಥವು, ಎಂದರೆ— ಹೀಗೆ ಹೇಳಕೂಡದು. **'ಶ್ರದ್ಧಾಂ ಜುಹ್ವತಿ'** ಎನ್ನುವ ಉಪಕ್ರಮವಾಕ್ಯದ್ದೆಶೆಯಿಂದಲೂ **'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ**

**ಭವಂತಿ**' ಎನ್ನುವ ಉಪಸಂಹಾರ ವಾಕ್ಯವು ಶ್ರೇಷ್ಠವಾಗಿರುವುದರಿಂದ ಅದನ್ನು ಅನುಸರಿಸಿ ಉಪಕ್ರಮದಲ್ಲಿ ಹೇಳಿದ ಶ್ರದ್ಧಾಶಬ್ದಕ್ಕೆ ಅಮುಖ್ಯವೃತ್ತಿಯಿಂದ ಶ್ರದ್ಧೆಯು ಜಲಗಳು ಎಂದು ಅರ್ಥವು ದುರ್ಬಲವಾದ ಉಪಕ್ರಮ ವಿರೋಧದಿಂದ ಪ್ರಬಲವಾದ ಉಪಸಂಹಾರಕ್ಕೆ ಅರ್ಥಾಂತರಕಲ್ಪನವು ಅನುಪಪನ್ನವು ಉಪಸಂಹಾರವು ಉಪಕ್ರಮವ್ಯಾಖ್ಯಾನರೂಪವಾಗಿರುವುದರಿಂದ ಪ್ರಬಲವಾಗಿರುವ ಪ್ರಯುಕ್ತ ಉಪಕ್ರಮಕ್ಕೆ ಪ್ರಾಮಾಣ್ಯವು ಕೂಡುವುದಕ್ಕಾಗಿಯೇ ಉಪಸಂಹಾರಾನುಸಾರಿತ್ವವನ್ನು ಅವಶ್ಯವಾಗಿ ಅಂಗೀಕರಿಸತಕ್ಕದ್ದು. ಆದ ಕಾರಣ ಉಪಕ್ರಮಕ್ಕಿಂತ ಉಪಸಂಹಾರವೇ ಶ್ರೇಷ್ಠವಾಗಿರುವುದರಿಂದ ಅದನ್ನು ಅನುಸರಿಸಿ ಉಪಕ್ರಮವಾಕ್ಯದಲ್ಲಿಯೂ ಭೂತಗತಿಯು ಸಿದ್ಧಿಸುವ ಪ್ರಯುಕ್ತ ವೈರಾಗ್ಯವು ವ್ಯರ್ಥವಲ್ಲ. (6) ೬ನೇ ಅಶ್ರುತತ್ವಾಧಿಕರಣದಲ್ಲಿ, ಮರಣದಲ್ಲಿ ಭೂತಗಳು ಜೀವನಿಂದ ಕೂಡಿಕೊಂಡು ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ-ಹೋಗುವುದಿಲ್ಲವೆಂದು ಪೂರ್ವಪಕ್ಷವು, ಹೋಗುತ್ತವೆಂದು ಸಿದ್ಧಾಂತವು. ಅದರಲ್ಲಿ 'ಅವಿಶೇಷಃ' ಎನ್ನುವುದು ಪೂರ್ವಪಕ್ಷನ್ಯಾಯವು, 'ಅನುರೂಪತಾ' ಎಂದು ಸಿದ್ಧಾಂತನ್ಯಾಯವು. ಅಂದರೆ'**ಯತ್ರಾಸ್ಯ ಪುರುಷಸ್ಯ ಮೃತಸ್ಯ ವಾಗಗ್ನಿಮಪ್ಯೇತಿ**' ಎಂದು ಪ್ರಾಣಗಳಿಗೆ ಅಗ್ನ್ಯಾದಿಗಳನ್ನು ಕುರಿತು ಗತಿಪ್ರತಿಪಾದಕಪ್ರತ್ಯಕ್ಷಶ್ರುತಿಯಂತೆ ಭೂತಗಳಿಗೆ ಜೀವನಿಂದ ಕೂಡಿಕೊಂಡು ಗತಿಪ್ರತಿಪಾದಕ ಪ್ರತ್ಯಕ್ಷಶ್ರುತ್ಯಭಾವನಿಯಮವೇ ಬಲವುಳ್ಳದ್ದು. ಏವಂಚ ವಿಶೇಷಾಶ್ರವಣರೂಪವಾದ ಅವಿಶೇಷದ್ದೆಶೆಯಿಂದ ಭೂತಗಳಿಗೆ ಸಹಗಮನವಿಲ್ಲ, ವೈರಾಗ್ಯಾದಿಗಳು ವ್ಯರ್ಥಗಳೇ. ಎಂದರೆ— ಹೀಗೆ ಹೇಳಕೂಡದು. ಏಕೆಂದರೆ – '**ಅಥೈನಂ ಯಜಮಾನಂ ಕಿಂ ನ ಜಹಾತಿ ಭೂತಾನ್ಯೇವ ಭೂತೈರೇವ ಗಚ್ಛತಿ**'ಎಂದು ಸ್ಥಾನಾಂತರದಲ್ಲಿ ಜೀವನಿಂದ ಕೂಡಿಕೊಂಡು ಭೂತಗಳಿಗೆ ಗತಿಶ್ರವಣವೂ ಆರ್ಥಿಕಶ್ರವಣಕ್ಕೆ ಅನುಕೂಲವಾಗಿದೆ. ಆರ್ಥಿಕಶ್ರವಣವೇ ಅಶ್ರವಣನಿಯಮಕ್ಕಿಂತ ಪ್ರಬಲವು. ಏವಂಚ ಸ್ಥಾನಾಂತರ ಶ್ರವಣವೂ ಆರ್ಥಿಕಶ್ರವಣಾನುರೂಪವಾಗಿರುವುದರಿಂದ ಭೂತಗಳಿಗೆ ಸಹಗತಿಯು ಯುಕ್ತವೇ. ಆದಕಾರಣ ವೈರಾಗ್ಯಾದಿಗಳು ವ್ಯರ್ಥಗಳಲ್ಲ. (7) ೭ನೇ ಭಾಕ್ತಾಧಿಕರಣದಲ್ಲಿ ಫಲಕ್ಕಾಗಿ ಅವಶ್ಯವಾಗಿ ಅನುಷ್ಠೇಯ ಅನನುಷ್ಠೇಯ ಸಾಧನಗಳು ಕಂಡದರಿಂದ ವೈರಾಗ್ಯಸಾಧನವನ್ನು ಮುಮುಕ್ಷುವು ಅವಶ್ಯವಾಗಿ ಮಾಡಬೇಕೋ ಬೇಡವೋ ಎಂದು ಸಂದೇಹವು ಬಂದರೆ ಅವಶ್ಯವಾಗಿ ಅನುಷ್ಠೇಯವಲ್ಲವೆಂದು ಪೂರ್ವಪಕ್ಷವು, ಅವಶ್ಯವಾಗಿ ಅನುಷ್ಠೇಯವೆಂದು ಸಿದ್ಧಾಂತವು. ಅವರಲ್ಲಿ 'ವಿಶೇಷ' ಎಂದು ಪೂರ್ವಪಕ್ಷನ್ಯಾಯವು, ಯೋಗ್ಯತಾ ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ '**ಅಪಾಮ ಸೋಮಂ ಮೃತಾ ಅಭೂಮ**' ಎಂದು ವಿಶೇಷಾಕಾರವಾಗಿ ಮೋಕ್ಷರೂಪ ಫಲಕ್ಕೆ ಸಾಕ್ಷಾತ್ಕರ್ಮಸಾಧ್ಯತ್ವವನ್ನು ಹೇಳಿರುವುದರಿಂದ ಕರ್ಮವೇ ಮೋಕ್ಷಸಾಧನವು. ವೈರಾಗ್ಯಾದಿಗಳು ವ್ಯರ್ಥಗಳೇ,ಎಂದರೆ ಹೀಗೆ ಹೇಳಕೂಡದು. ಏಕೆಂದರೆ— '**ನಾನ್ಯಃ ಪಂಥಾ ಅಯನಾಯ ವಿದ್ಯತೇ ಸ ಯ ಆತ್ಮಾನಮೇವ ಲೋಕಮುಪಾಸ್ತೆ**' '**ಯಾವದಿಂದ್ರೋ ಯಾವನ್ಮನಃ**' ಇತ್ಯಾದಿ ಶ್ರುತಿಗಳ ಬಲದ್ದೆಶೆಯಿಂದ ಕಾಮ್ಯಕರ್ಮದಿಂದುಂಟಾಗತಕ್ಕ ಅಮೃತತ್ವವೆಂದರೆ—ಬಹುಕಾಲೀನ ಸ್ವರ್ಗಸುಖವೆನ್ನುವ ಗೌಣಾಮೃತತ್ವವೇ ಅಲ್ಲದೆ ಮುಖ್ಯವಾದ ಮೋಕ್ಷವಲ್ಲ. ಜ್ಞಾನೇಚ್ಛಾವುಳ್ಳ ಪುರುಷನಿಂದ ಮಾಡಲ್ಪಟ್ಟ ಕರ್ಮದಿಂದುಂಟಾಗತಕ್ಕ ಅಮೃತತ್ವವು ಸಾಕ್ಷಾತ್ತಲ್ಲ. ಜ್ಞಾನದ್ವಾರಾ ಪರಂಪರೆಯಿಂದ ಮುಖ್ಯಾಮೃತತ್ವವು ಜ್ಞಾನಿಮಾಡಿದ ಕರ್ಮದಿಂದುಂಟಾಗತಕ್ಕ ಅಮೃತತ್ವವು ಮುಕ್ತಿಯಲ್ಲಿ ಆಗತಕ್ಕ ಆನಂದಾತಿಶಯರೂಪವಾದುದು. ಹೀಗೆ ಅಮೃತಶಬ್ದಕ್ಕೆ ಯಥಾಯೋಗ್ಯವಾಗಿಯೇ ಅರ್ಥವನ್ನು ಕಲ್ಪಿಸಬೇಕು. (8) ೮ನೇ ಕೃತಾತ್ಯಯಾಧಿಕರಣದಲ್ಲಿ ವೈರಾಗ್ಯಾದಿಗಳನ್ನು ಮೋಕ್ಷವನ್ನು ಇಚ್ಛಿಸುವವನು ಅವಶ್ಯವಾಗಿ ಮಾಡಬೇಕೋ ಬೇಡವೋ ಎಂದು ಸಂದೇಹವು ಬಂದರೆ ಮಾಡ

ಬಾರದೆಂದು ಪೂರ್ವಪಕ್ಷವು, ಅವಶ್ಯವಾಗಿ ಅನುಷ್ಠಾನಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ 'ಸಹಭಾವಃ' ಎನ್ನುವುದು ಪೂರ್ವಪಕ್ಷನ್ಯಾಯವು,' ಯೋಗ್ಯತಾ' ಎನ್ನುವುದು ಸಿದ್ಧಾಂತನ್ಯಾಯವು ಅಂದರೆ ಭುಕ್ತವಾದ ಕರ್ಮಶೇಷಕ್ಕೆ ಸ್ವರ್ಗಕ್ಕೆ ಹೋಗತಕ್ಕ ಜೀವನಿಂದ ಸಹಭಾವವಿದ್ದ ಪ್ರಯುಕ್ತ ಸ್ವರ್ಗದಲ್ಲಿಯೇ ಆ ಕರ್ಮವು ಫಲವನ್ನು ಕೊಡುತ್ತದೆ. ಅಲ್ಲಿ ಕರ್ಮಾಂತರವನ್ನು ಮಾಡುವುದಿಲ್ಲ. ಕರ್ಮವಿಲ್ಲದಿದ್ದಮೇಲೆ ಕರ್ಮಮೂಲಕವಾದ ಸಂಸಾರೋಚ್ಛೇದವು ತನ್ನಷ್ಟಕ್ಕೇನೇ ಆಗುತ್ತದೆ. ಆದಕಾರಣ ಮುಮುಕ್ಷುವು ಅವಶ್ಯವಾಗಿ ವೈರಾಗ್ಯಾದಿಗಳನ್ನು ಅನುಷ್ಠಾನ ಮಾಡಬೇಕಾಗಿಲ್ಲ. ಎಂದರೆ ಹೀಗೆ ಹೇಳಕೂಡದು. **'ಭುಕ್ತಶೇಷಾನುಶಯವಾನ್'** ಇತ್ಯಾದಿ ವಚನಗಳದೃಷ್ಟಿಯಿಂದ ಕರ್ಮವು ಯಥಾಯೋಗ್ಯವಾಗಿಯೇ ಫಲವನ್ನು ಕೊಡುವುದು. ಅಂದರೆ ಸ್ವರ್ಗದಿಂದ ಬರುವಾಗ ಕರ್ಮಶೇಷವುಳ್ಳವನಾಗಿಯೇ ಬರುತ್ತಾನೆ. ಏವಂಚ ಕರ್ಮವು ಒಟ್ಟಿಗೆ ಇದ್ದರೂ ಸರ್ವಕರ್ಮಕ್ಷಯವಾಗುವುದಿಲ್ಲ. ಆದುದರಿಂದ ವೈರಾಗ್ಯಾದಿಗಳು ಆವಶ್ಯಕವೇ. (9) ೯ನೇ ಯಥೇತಾಧಿಕರಣದಲ್ಲಿ ಲೋಕದಲ್ಲಿ ಹೋದದಾರಿಯಿಂದಲೂ ಬೇರೆ ದಾರಿಯಿಂದಲೂ ಆಗಮನವು ಕಂಡಿರುವುದರಿಂದ ಸ್ವರ್ಗಕ್ಕೆ ಹೋದವನು ಹೋದ ಮಾರ್ಗದಿಂದಲೇ ಬರುತ್ತಾನೋ ಬೇರೆ ಮಾರ್ಗದಿಂದಲೋ ಎಂದು ಸಂದೇಹವು ಬಂದರೆ— ಹೋದಮಾರ್ಗದಿಂದಲೇ ಎಂದು ಪೂರ್ವಪಕ್ಷವು, ಬೇರೆ ಮಾರ್ಗದಿಂದಲೇ ಎಂದು ಸಿದ್ಧಾಂತವು. ಅದರಲ್ಲಿ 'ಸಹಭಾವಃ' ಎಂದು ಪೂರ್ವಪಕ್ಷನ್ಯಾಯವು, 'ಯೋಗ್ಯತಾ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ ಹೋದ ಮಾರ್ಗವೂ ಮನಸ್ಸಿನಲ್ಲಿಯೇ ಇದ್ದಪ್ರಯುಕ್ತ ಯಾವ ಮಾರ್ಗದಿಂದ ಹೋಗಿರುತ್ತಾನೋ ಅದರಿಂದಲೇ ಬರುವಿಕೆಯೂ ಇರುವುದರಿಂದ ಸ್ವರ್ಗಫಲಕ್ಕೂ ಬಹಳ ಕ್ಲೇಶಸಂಬಂಧವಿಲ್ಲದಿರುವ ಪ್ರಯುಕ್ತ ವೈರಾಗ್ಯಾದಿಗಳು ವ್ಯರ್ಥವು, ಎಂದರೆ— ಹೀಗೆ ಹೇಳಕೂಡದು. **'ಧೂಮಾದಭ್ರಂ'** ಎನ್ನುವ ವಿಶೇಷವಚನಬಲದೃಷ್ಟಿಯಿಂದ ಯೋಗ್ಯವಾದ ಮಾರ್ಗವನ್ನು ಅತಿಕ್ರಮಿಸದೇನೇ ಬರೋಣವು ಕೂಡುತ್ತದೆ. ಅಂದರೆ ಹೋದ ಮಾರ್ಗದಿಂದಲೇ ಬರುವುದಲ್ಲ. ಬರಲಿಕ್ಕೆ ಬೇರೆ ಮಾರ್ಗವೂ ಇದೆ. ಆದುದರಿಂದ ಸ್ವರ್ಗದಿಂದ ಬರಲಿಕ್ಕೆ ಅತಿಕ್ಲೇಶವಿರುವುದರಿಂದ ವೈರಾಗ್ಯಾದಿಗಳು ಆವಶ್ಯಕವೇ. (10) ೧೦ನೇ ಚರಣಾಧಿಕರಣದಲ್ಲಿ ಗಮನಾಗಮನ ನಿಮಿತ್ತಗಳೆರಡಕ್ಕೂ ಸಹಭಾವವು ಕಂಡದರಿಂದ ಯಜ್ಞಾದಿಗಳು ಗಮನಾಗಮನಗಳಿಗೆ ಸಾಧನವೋ ಅಲ್ಲವೋ ಎಂದು ಸಂದೇಹವು ಬಂದರೆ— ಅಲ್ಲವೆಂದು ಪೂರ್ವಪಕ್ಷವು, ಸಾಧನವೆಂದು ಸಿದ್ಧಾಂತವು. ಇಲ್ಲಿಯೂ 'ಸಹಭಾವಃ' ಎನ್ನುವುದು ಪೂರ್ವಪಕ್ಷನ್ಯಾಯವು, 'ಯೋಗ್ಯತಾ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ಗಮನಾಗಮನವು ಯಜ್ಞಾದಿ ಕರ್ಮಫಲವಲ್ಲ, ಮತ್ತೆ ಆಚಾರಫಲವೇ. **'ರಮಣೀಯಚರಣಾಃ'** ಇತ್ಯಾದಿ ಶ್ರುತಿಯಿದ್ದುದರಿಂದ. ಎಂದರೆ— ಹೀಗೆ ಹೇಳಕೂಡದು. ಏಕೆಂದರೆ — ಚರಣಶಬ್ದದಿಂದ ಯಜ್ಞಾದಿಕರ್ಮವನ್ನೇ ತೆಗೆದುಕೊಳ್ಳಬೇಕು. ಏವಂಚ ಗಮನಾಗಮನವು ಕರ್ಮಫಲವಾಗಿರುವುದರಿಂದ ಕ್ಲೇಶಸಾಧನವಾದ ಕರ್ಮದಲ್ಲಿಯೂ ಕರ್ಮಸಾಧ್ಯವಾದ ಸ್ವರ್ಗದಲ್ಲಿಯೂ ವೈರಾಗ್ಯವನ್ನು ಹೊಂದಬೇಕು.(11)೧೧ನೇ ಅನಿಷ್ಟಾಧಿಕರಣದಲ್ಲಿ ಗಮನಾಗಮನವು ಯಾಗಾದಿಗಳನ್ನು ಮಾಡುವವರಿಗೆ ಮಾತ್ರವೋ ಎಲ್ಲಾ ಅಜ್ಞಾನಿಗಳಿಗೂ ಇದೆಯೋ ಎಂದು ಸಂದೇಹವು ಬಂದರೆ—ಯಜ್ಞಾದಿಕಾರಿಗಳಿಗೆ ಮಾತ್ರ ಎಂದು ಪೂರ್ವಪಕ್ಷವು, ಎಲ್ಲಾ ಅಜ್ಞಾನಿಗಳಿಗೂ ಎಂದು ಸಿದ್ಧಾಂತವು. ಅದರಲ್ಲಿ 'ವಿಮಿಶ್ರತಾ' ಎಂದು ಪೂರ್ವಪಕ್ಷನ್ಯಾಯವು, 'ಬಲವತ್ವಂ' ಎಂದು ಸಿದ್ಧಾಂತನ್ಯಾಯವು. ಅದರಲ್ಲಿ ಭಯ, ಫಲದಲ್ಲಿ ಇಚ್ಛೆ ಇವುಗಳಿಂದ ಮಿಶ್ರವಾದ ಬುದ್ಧಿಯುಳ್ಳವರಾದ ಪ್ರಯುಕ್ತ ಯಾಗಾದಿಗಳನ್ನು ಮಾಡುವವರಿಗೆ ಸಂಸಾರವು ಯಾಗಾದಿಗಳನ್ನು ಮಾಡದೆ ಇರುವ ಅಜ್ಞಾನಿಗಳಿಗೆ ಹಿಂದೆ ಹೇಳಿದ ಮಿಶ್ರಬುದ್ಧಿಯಿಲ್ಲದೆ

ಇರುವಪ್ರಯುಕ್ತ ಮುಕ್ತಿಯು ಎಂದು ಹೇಳಕೂಡದು. ಏಕೆಂದರೆ— ವಿಮಿಶ್ರಬುದ್ಧಿಯುಳ್ಳವ ರಾದಪ್ರಯುಕ್ತ ಯಜ್ಞಾದಿಗಳನ್ನು ಮಾಡುವವರಿಗೇನೇ ಗಮನಾಗಮನವು ಎನ್ನುವ ನಿಯಮವಿಲ್ಲ. ಏಕೆಂದರೆ— ಅಜ್ಞಾನಿಗಳಿಗೆ ಬಲವದ್ದ್ವೇಷವು ಶ್ರುತವಾಗಿರುವುದರಿಂದ ಎಲ್ಲಾ ಅಜ್ಞಾನಿಗಳಿಗೂ ಗಮನಾಗಮನಾದಿ ದುಃಖಗಳು ಇವೆ. (12) ೧೨ನೇ ಅಪಿಸಪ್ತಾಧಿಕರಣದಲ್ಲಿ ನರಕವು ನಿತ್ಯದುಃಖ ವನ್ನು ಕೊಡುತ್ತದೋ ಇಲ್ಲವೋ ಎಂದು ಸಂದೇಹವು ಬಂದರೆ— ನರಕದಿಂದ ಪುನರಾವೃತ್ತಿ ಇದೆ ಯೆಂದು ಪೂರ್ವಪಕ್ಷವು, ಅದರಲ್ಲಿ ಕೆಲವು ನರಕವು ನಿತ್ಯದಲ್ಲಿಯೂ ದುಃಖವನ್ನೇ ಕೊಡ ತಕ್ಕದು ಎಂದು ಸಿದ್ಧಾಂತವು. ಅದರಲ್ಲಿ 'ವಿರುದ್ಧೋಕ್ತಿಃ' ಎನ್ನುವುದು ಪೂರ್ವಪಕ್ಷನ್ಯಾಯವು, 'ವಿಭಾಗಃ' ಎನ್ನುವುದು ಸಿದ್ಧಾಂತನ್ಯಾಯವು. ಅದರಲ್ಲಿ ನರಕಭೋಗಕ್ಕೆ **'ಯಾವದಿಂದ್ರಾ ಶ್ಚತುರ್ದಶ । ಚಕಾರ ನರಕಂ ಶೂನ್ಯಂ'** ಇತ್ಯಾದಿಗಳಲ್ಲಿ ಅನಿತ್ಯತ್ವವನ್ನು ಹೇಳಿದರಿಂದ ನರ ಕಕ್ಕೆ ನಿತ್ಯತ್ವೋಕ್ತಿಯು ವಿರುದ್ಧವು. ಎಂದರೆ— ಹೀಗೆಹೇಳಕೂಡದು. **'ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀತಥಾ । ಕುಂಭೀಪಾಕ ಇತಿಪ್ರೋಕ್ತಾನ್ಯನಿತ್ಯನರಕಾ ಣಿತು । ತಾಮಿಸ್ರಶ್ಚಾಂಧತಾಮಿಸ್ರೋದ್ವೌನಿತ್ಯೌ ಸಂಪ್ರಕೀರ್ತಿತೌ'** । ಎಂದು ನರಕ ಗಳನ್ನು ನಿತ್ಯ ಅನಿತ್ಯಗಳೆಂದು ವಿಭಾಗಮಾಡಿ ಹೇಳಿರುವುದರಿಂದ ನರಕಕ್ಕೆ ನಿತ್ಯತ್ವೋ ಕ್ತಿಯೂ ವಿರುದ್ಧವಲ್ಲ. (13) ೧೩ನೇ ತತ್ರಾಪ್ಯಧಿಕರಣದಲ್ಲಿ ದುಃಖಯುಕ್ತ ಮತ್ತು ದುಃಖ ರಹಿತ ಜಾಗ್ರದಾದಿ ದ್ವಿವಿಧ ಅವಸ್ಥೆಗಳನ್ನು ಕಂಡುದರಿಂದ ನರಕದಲ್ಲಿ ದುಃಖವಿದೆಯೋ ಇಲ್ಲವೋ ಎಂದು ಸಂದೇಹವು ಬಂದರೆ— ಇಲ್ಲವೆಂದು ಪೂರ್ವಪಕ್ಷವು, ದುಃಖವದೆ ಎಂದು ಸಿಂದ್ಧಾಂತವು. ಅದರಲ್ಲಿ 'ಸಹಸ್ಥಾನಂ' ಎಂದು ಪೂರ್ವಪಕ್ಷನ್ಯಾಯವು, 'ಕಾರಣಾಭವಃ' ಎಂದು ಸಿದ್ಧಾಂತನ್ಯಾಯವು. ಅಂದರೆ 'ಸರ್ವಂನಿಯಮಯತಿ' ಎನ್ನುವ ಶ್ರುತಿಬಲದಿಂದ ನರಕ ದಲ್ಲಿಯೂ ನಾರಕಿ ಜನರನ್ನು ನಿಯಮಿಸುವುದಕ್ಕಾಗಿ ಈಶನೂ ಅಲ್ಲಿ ಇರಬೇಕಾಗುವುದರಿಂದ ಅವನಿಗೂ ನರಕದುಃಖವು ಪ್ರಾಪ್ತಿಯಾಗಬೇಕಾಗುವುದು, ಎಂದು ಹೇಳಕೂಡದು. ಈಶ್ವರನಿಗೆ ಸ್ವಾತಂತ್ರ್ಯವೇ ಇದ್ದಪ್ರಯುಕ್ತ ಸರ್ವಜ್ಞನಾಗಿರುವುದರಿಂದ ಅಜ್ಞಾನವೊದಲಾದ ದುಃಖಕಾರಣ ವಿಲ್ಲದಿರುವುದರಿಂದ ದುಃಖವಿಲ್ಲ. ಏವಂಚ ಈಶ್ವರನು ನರಕದಲ್ಲಿ ದುಃಖಿಗಳ ಒಟ್ಟಿಗೆ ಇದ್ದರೂ ದುಃಖಕಾರಣವಿಲ್ಲದಿರುವುದರಿಂದ ಆತನಿಗೆ ಜೀವರಂತೆ ದುಃಖಪ್ರಾಪ್ತಿಯಾಗುವುದಿಲ್ಲ. (14) ೧೪ನೇ ವಿದ್ಯಾಧಿಕರಣದಲ್ಲಿ, ಲೌಕಿಕಮಾರ್ಗದಲ್ಲಿ ಸ್ವಾತಂತ್ರ್ಯವು ದೃಷ್ಟವಾಗಿರುವುದರಿಂದ ಇವುಗಳು ಅಲೌಕಿಕಗಳಾಗಿರುವುದರಿಂದ ಪಿತೃಯಾನ, ದೇವಯಾನಗಳನ್ನು ಭೂತಗಳು ಸ್ವತಂ ತ್ರವಾಗಿ ಹೋಗುತ್ತವೋ ಇಲ್ಲವೋ ಎಂದು ಸಂದೇಹವು ಬಂದರೆ— ಸ್ವತಂತ್ರವಾಗಿ ಆ ಮಾರ್ಗ ಗಳು ಗಮ್ಯಗಳೆಂದು ಪೂರ್ವಪಕ್ಷವು, ಅಲ್ಲವೆಂದು ಸಿದ್ಧಾಂತವು. ಅದರಲ್ಲಿ 'ಸಹಸ್ಥಾನಂ' ಎನ್ನು ವುದು ಪೂರ್ವಪಕ್ಷನ್ಯಾಯವು, 'ಕಾರಣಾಭವಃ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— **'ತದ್ಯ ಇತ್ಥಂ ವಿದುರ್ಯೇಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ' 'ತೇಽರ್ಚಿಷ ಮಭಿ ಸಂಭವಂತಿ ಅಥ ಯ ಇಮೇ ಗ್ರಾಮಾ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ'** ಎನ್ನುವ ಶ್ರುತಿಯಲ್ಲಿ ವಿದ್ಯಾದಿಸಾಧನಗಳಿಂದ ಕೂಡಿ ಕೊಂಡು ಅರ್ಚಿರಾದಿ ಧೂಮಾದಿಭಾವರೂಪವಾದ ಫಲವು ಶ್ರುತವಾಗಿದೆ. ಸಾಧನದಲ್ಲಿದ್ದಂತೆಯೇ ಫಲದಲ್ಲಿಯೂ ಸ್ವಾತಂತ್ರ್ಯವನ್ನು ಅಂಗೀಕರಿಸತಕ್ಕದು. ಸಾಧನದಲ್ಲಿ ಸ್ವಾತಂತ್ರ್ಯವಿಲ್ಲವಾದರೆ ವೈರಾಗ್ಯಾದಿ ಸಾಧನಗಳನ್ನೂ ಹುಟ್ಟಿಸಲಿಕ್ಕೆ ಶಕ್ಯವಾಗಲಾರದು. ಆದಕಾರಣ ಆ ವಿಧಿಗೆ ವೈಯರ್ಥ್ಯವು ಬರಬೇಕಾಗುವುದು. ಏವಂಚ ಫಲವನ್ನೇ ಸಾಧಿಸಲಿಕ್ಕೆ ಶಕ್ಯವಾದುದರಿಂದ ಫಲ ಕ್ಕಾಗಿ ವೈರಾಗ್ಯಾದಿಗಳನ್ನು ಹೊಂದಬೇಕಾಗಿಲ್ಲ. ಎಂದರೆ— ಹೀಗೆಹೇಳಕೂಡದು. ವಿಹಿತತ್ವ

ರೂಪಕಾರಣವಿಲ್ಲದಿರುವುದರಿಂದ ಫಲದಲ್ಲಿ ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಅದಕ್ಕಾಗಿ ವೈರಾಗ್ಯಾದಿಗಳನ್ನು ಹೊಂದಲೇಬೇಕು. (15) ೧೫ನೇ ನ ತೃತೀಯಾದಿಕರಣದಲ್ಲಿ ದುಃಖವುಳ್ಳವನಿಗೆ ಸುಖವು ಕಂಡುದರಿಂದ ಅಂಧಂತಮಸ್ಸು ಅಲೌಕಿಕವಾಗಿರುವುದರಿಂದ ಸುಖದಿಂದ 'ಯುಕ್ತ'ವಾಗಿದೆಯೋ ಇಲ್ಲವೋ ಎಂದು ಸಂದೇಹವುಬಂದರೆ— ಸುಖದಿಂದ ಯುಕ್ತವೇ ಆಗಿದೆ ಎಂದು ಪೂರ್ವಪಕ್ಷವು, ಅಲ್ಲವೆಂದು ಸಿದ್ಧಾಂತವು. ಇಲ್ಲಿಯೂ 'ಸಹಸ್ಥಾನ'ವೆನ್ನುವುದೇ ಪೂರ್ವಪಕ್ಷನ್ಯಾಯವು, 'ಕಾರಣಾಭವಃ' ಎನ್ನುವುದೇ ಸಿದ್ಧಾಂತನ್ಯಾಯವು. ಅಂದರೆ— **'ಯತ್ರ ದುಃಖಂ ಸುಖಂ ತತ್ರ'** ಎನ್ನುವ ಆಗಮದಿಂದ ದುಃಖವು ಸುಖದಿಂದ ವ್ಯಾಪ್ತವಾದಪ್ರಯುಕ್ತ ಅಂಧಂತಮಸ್ಸನ್ನು ಹೊಂದಿದವರಿಗೂ ಸುಖವು ಕೂಡುವಪ್ರಯುಕ್ತ ತಮಸ್ಸಾಧನವಾದ ಭಗವದ್ದ್ವೇಷಾದಿಗಳಲ್ಲಿ ಅತಿಶಯವಾಗಿ ವೈರಾಗ್ಯವನ್ನು ಹೊಂದಬೇಕಾಗಿಲ್ಲ. ಎಂದರೆ— ಹೀಗೆ ಹೇಳಕೂಡದು. ಅಂಧಂತಮಸ್ಸನ್ನು ಹೊಂದಿದವರು ಈಶನಿಗೆ ಅತ್ಯಂತ ದ್ವೇಷಿಗಳಾಗಿರುವುದರಿಂದಲೇ ಅವರಿಗೆ ಸುಖವಾಗಲಿ ಎನ್ನುವ ಈಶೇಚ್ಛಾವಿಲ್ಲದಿರುವುದರಿಂದ ಸುಖಲೇಶವೂ ಇಲ್ಲ. ತಥಾಚ (೧) 'ವಿಪ್ರತಿಪನ್ನಾ ನ ಸುಖವಂತಃ ತಥಾತ್ವೇನೇಶ್ವರಾನಿಷ್ಟತ್ವಾತ್ ಯದ್ಯಥಾ ಈಶ್ವರಾನಿಷ್ಟಂ ತತ್ತಥಾ ನ ಭವತಿ ಯಥಾ ಶಶೋವಿಷಾಣಿತ್ವೇನ' ವಿಪ್ರತಿಪನ್ನರು ಸುಖವುಳ್ಳವರಲ್ಲ, ಸುಖಿಗಳಾಗಲಿ ಎಂದು ಈಶ್ವರೇಚ್ಛೆಗೆ ವಿಷಯವಾಗದಿರುವುದರಿಂದ ಯಾವುದು ಹೇಗೆ ಆಗಲಿ ಎನ್ನುವ ಈಶ್ವರೇಚ್ಛೆಗೆ ವಿಷಯವಾಗದಿರುವುದೋ ಅದು ಹಾಗೆ ಆಗುವುದಿಲ್ಲ. ಶಶವು ವಿಷಾಣವುಳ್ಳದ್ದು ಆಗಲಿ ಎಂದು ಈಶ್ವರೇಚ್ಛೆಗೆ ವಿಷಯವಾಗದಿರುವುದರಿಂದ, (೨) 'ನೈತೇ ಸುಖಿತ್ವೇನೇಶ್ವರೇಷ್ಟಾಃ ತದಪ್ರಿಯತ್ವಾತ್ ಯೋ ಯಸ್ಯಾಪ್ರಿಯಃ ನ ಸುಖಿತ್ವೇನ ನ ತದಿಷ್ಟಃ ಯಥಾರಾಜವಿರೋಧೀ ರಾಜ್ಞಃ' ಇವರು ಸುಖಿಗಳಾಗಲಿ ಎಂದು ಈಶ್ವರೇಷ್ಟರಲ್ಲ, ಈಶ್ವರನಿಗೆ ಅಪ್ರಿಯರಾದುದರಿಂದ ಯಾರು ಯಾರಿಗೆ ಅಪ್ರಿಯರೋ ಅವರು ಸುಖಿಗಳಾಗಲಿ ಎನ್ನುವ ಅವರ ಇಚ್ಛೆಗೆ ವಿಷಯರಾಗುವುದಿಲ್ಲ. ರಾಜವಿರೋಧಿಯು ಸುಖಿಯಾಗಲಿ ಎಂದುರಾಜನ ಇಚ್ಛೆಗೆ ವಿಷಯನಾಗುವುದಿಲ್ಲ. (16) ೧೬ನೇ ತತ್ಸ್ವಾಭಾವ್ಯಾಧಿಕರಣದಲ್ಲಿ ಕರ್ಮಿಗೆ ಧೂಮಾದಿ ದೇವತೆಗಳಿಂದ ಕೂಡಿಕೊಂಡು ಅವಸ್ಥಿತಿಯಿದ್ದಪ್ರಯುಕ್ತ ಕಲ್ಪಸಮಾಪ್ತಿ ಪರ್ಯಂತ ಪರಮ ಸುಖಸಾಧನವಾದ ಆ ಪದಪ್ರಾಪ್ತಿಯು ಕೂಡುವುದರಿಂದ ಅಂತಹ ಸುಖಸಾಧನಕರ್ಮದಲ್ಲಿ ವೈರಾಗ್ಯವು ಯುಕ್ತವಲ್ಲ, ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— ವಿದ್ಯಾದಿ ಸಾಧನವಿಲ್ಲದಿರುವುದರಿಂದ ಕರ್ಮಿಗಳಿಗೆ ವಿದ್ಯಾ ಸಾಧ್ಯವಾದ ಆ ಪದಪ್ರಾಪ್ತಿಯೇ ಆಗುವುದಿಲ್ಲ. ಆದುದರಿಂದ ಕರ್ಮವು ಮಹಾಸುಖಸಾಧನವಾಗದಿರುವುದರಿಂದ ವೈರಾಗ್ಯಾದಿಗಳನ್ನು ಹೊಂದಲೇಬೇಕು. (17) ೧೭ನೇ ನಾತಿಚಿರೇಣಾಧಿಕರಣದಲ್ಲಿ ಲೋಕದಲ್ಲಿ ಮಾರ್ಗಸ್ಥರು ಸಾವಕಾಶದಿಂದಲೇ ಬರುವವರು, ಬೇಗನೇ ಬರುವವರು, ಎಂದು ಎರಡುವಿಧವಾಗಿ ಕಂಡುಬರುವುದರಿಂದ ಕರ್ಮಿಗಳು ಸ್ವರ್ಗದಿಂದ ಹೊರಟು ಸಾವಕಾಶವಾಗಿ ಗರ್ಭವಾಸವನ್ನು ಹೊಂದುತ್ತಾರೋ ಶೀಘ್ರದಲ್ಲಿ ಹೊಂದುತ್ತಾರೋ, ಎಂದು ಸಂದೇಹವು ಬಂದರೆ— ಸಾವಕಾಶವಾಗಿ ಎಂದು ಪೂರ್ವಪಕ್ಷವು, ಶೀಘ್ರದಲ್ಲಿ ಎಂದು ಸಿದ್ಧಾಂತವು. ಇಲ್ಲಿಯೂ 'ಸಹಸ್ಥಾನಂ' ಎಂದು ಪೂರ್ವಪಕ್ಷನ್ಯಾಯವು, 'ಕಾರಣಾಭವಃ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ಧೂಮಾದಿ ದೇವತೆಗಳಿಂದ ಕೂಡಿಕೊಂಡು ಇದ್ದಪ್ರಯುಕ್ತ ಕರ್ಮಿಗೆ ಆ ಲೋಕದಿಂದ ಬರಲಿಕ್ಕೆ ಅತಿ ಸಾವಕಾಶವಿದ್ದಪ್ರಯುಕ್ತ ಅಲ್ಲಿಯೇ ಮಹಾಸುಖವು ಕೂಡುವುದರಿಂದ ಕರ್ಮದಲ್ಲಿ ವೈರಾಗ್ಯವನ್ನು ಹೊಂದಬೇಕಾಗಿಲ್ಲ. ಎಂದರೆ— ಹೀಗೆ ಹೇಳಕೂಡದು. **'ವತ್ಸರಾತ್ಪೂರ್ವಮೇವ ತು'** ಎಂದು ಕ್ಷಪಕಾಲಕ್ಕಿಂತ ಹೆಚ್ಚುಇರಲಿಕ್ಕೆ ಕಾರಣವಿಲ್ಲ. ಆದುದರಿಂದ ಬೇಗನೇ ಬಂದು ಗರ್ಭವಾಸಾದಿ

ದುಃಖವನ್ನು ಅನುಭವಿಸುತ್ತಾನೆ. ಆದುದರಿಂದ ಕರ್ಮದಲ್ಲಿ ವೈರಾಗ್ಯವು ಯುಕ್ತವೇ. (18) ೧೮ನೇ ಅನ್ಯಾಧಿಕರಣದಲ್ಲಿ ಲೋಕದಲ್ಲಿ ಗ್ರಾಮಾಂತರ ಗಮನವು ದುಃಖಕಾರಣವಾಗಿ ಕಂಡುಬಂದುದರಿಂದ, ಈ ಸ್ವರ್ಗಮಾರ್ಗವೂ ಪುರುಷಾರ್ಥವಾಗಿರುವುದರಿಂದ ಕರ್ಮಿಗಳಿಗೆ ಸ್ವರ್ಗದಿಂದ ಬರಲಿಕ್ಕೆ ದುಃಖವಿದೆಯೋ ಇಲ್ಲವೋ? ಎಂದು ಸಂದೇಹವು ಬಂದರೆ, ದುಃಖವಿದೆಯೆಂದು ಪೂರ್ವಪಕ್ಷವು, ಇಲ್ಲವೆಂದು ಸಿದ್ಧಾಂತವು. ಇಲ್ಲಿಯೂ 'ಸಹಸ್ಥಾನಂ' ಎಂದು ಪೂರ್ವಪಕ್ಷನ್ಯಾಯವು, 'ಕಾರಣಾಭವಃ' ಎಂದು ಸಿದ್ಧಾಂತನ್ಯಾಯವು. ಅಂದರೆ— **'ತ ಇಹ ವ್ರೀಹಿಯವಾಃ ಓಷಧಿ ವನಸ್ಪತಯೋ ಜಾಯಂತೇ'** ಇತ್ಯಾದಿ ಶ್ರುತಿಗಳಿಂದ ಕರ್ಮಿಗಳಿಗೆ ವ್ರೀಹ್ಯಾದಿ ಭಾವವು ದೃಷ್ಟವಾಗಿದೆ. ವ್ರೀಹ್ಯಾದಿಗಳೊಟ್ಟಿಗೆ ಇದ್ದಮೇಲೆ ವ್ರೀಹ್ಯಾದಿಗಳ ಛೇದನಾದಿಗಳಿಂದ ದುಃಖವು ನಿಯತವಾಗಿದೆ. ದುಃಖಿಯ ಒಟ್ಟಿಗೆ ಇದ್ದರೂ ದುಃಖವು ಪ್ರಾಪ್ತಿಯಾಗದಿರಲಿಕ್ಕೆ ಈಶ್ವರನಂತೆ ಸ್ವಾತಂತ್ರ್ಯರೂಪಕಾರಣವು ಪ್ರಮಿತವಾಗಲಿಲ್ಲ. ಆ ದುಃಖವು ಯಜ್ಞಾದಿಗಳ ಫಲವೆಂದೇ ಹೇಳಬೇಕಾಗುತ್ತದೆ. ಆಗಮನಾದಿಗಳು ಯಜ್ಞಾದಿಗಳ ಫಲವೆಂದು ಪ್ರತಿಪಾದಿತವಾಗಿದೆ. ಯಜ್ಞಗಳಲ್ಲಿ ಹಿಂಸೆಯು ಇದ್ದುದರಿಂದ ಅದರಿಂದ ಪಾಪವೂ ಕೂಡಬಹುದು. ಏವಂಚ ಸುಖಸಾಧನವೆಂದು ವೇದದಲ್ಲಿ ಹೇಳಿದ ಕರ್ಮವು ಹೇಗೆ ದುಃಖಸಾಧನವೋ ಹಾಗೆಯೇ ವೈರಾಗ್ಯವು ದುಃಖಸಾಧನವೇ ಆಗಬೇಕಾಗುವುದು. ಆದುದರಿಂದ ವೈರಾಗ್ಯವನ್ನು ಸಂಪಾದಿಸಬೇಕಾಗಿಲ್ಲ. ಎಂದರೆ- ಹಾಗೆ ಹೇಳಕೂಡದು. ಯಾಜ್ಞಾದಿಗಳು ಹಿಂಸೆಯಿಂದ ಕೂಡಿದವುಗಳಾದಾಗ್ಯೂ ಪಾಪಕ್ಕೆ ಕಾರಣಗಳಾಗಿಲ್ಲ. ನಿಷಿದ್ಧ ಹಿಂಸೆಯೇ ಪಾಪಕ್ಕೆ ಕಾರಣವು. ಯಜ್ಞದಲ್ಲಿ ಮಾಡತಕ್ಕ ಹಿಂಸೆಯು **'ಅಗ್ನೀಷೋಮೀಯಂ ಪಶುಮಾಲಭೇತ'** ಎಂದು ಶ್ರುತಿವಿಹಿತವಾಗಿರುವುದರಿಂದ ಪಾಪಸಾಧನವಾಗುವುದಿಲ್ಲ. ಏವಂಚ ಸುಖಸಾಧನವಾಗಿ ಹೇಳಲ್ಪಟ್ಟ ಕರ್ಮಕ್ಕೆ ದುಃಖಸಾಧನವಾಗದಿರುವುದರಿಂದ ಮುಕ್ತಿಗೆ ಸಾಧನವಾದ ವೈರಾಗ್ಯವನ್ನು ಹೊಂದಲೇ ಬೇಕು. (19) ೧೯ನೇ ರೇತೋಧಿಕರಣದಲ್ಲಿ **'ಯೋ ವಾ ರೇತಸ್ಸಿಂಚತಿ ತಮೇವಾನುವಿಶತಿ'** ಎನ್ನುವ ಶ್ರುತಿಯಿಂದಲೂ ಪಿತೃಪ್ರವೇಶದಲ್ಲಿ ಪ್ರಯೋಜನವು ಕಾಣದಿರುವುದರಿಂದಲೂ ಕರ್ಮಿಯು ತಂದೆಯನ್ನು ಪ್ರವೇಶಿಸುತ್ತಾನೋ ಇಲ್ಲವೋ ಎಂದು ಸಂಶಯವು ಬಂದಗೆ ಪ್ರವೇಶಿಸುವುದಿಲ್ಲವೆಂದು ಪೂರ್ವಪಕ್ಷವು; ಪ್ರವೇಶಿಸುತ್ತಾನೆಂದು ಸಿದ್ಧಾಂತವು. ಅದರಲ್ಲಿ ವೈಯರ್ಥ್ಯಂ ಎನ್ನುವುದು ಪೂರ್ವಪಕ್ಷನ್ಯಾಯವು; ಕ್ಲಪ್ತಿಃ ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ- ಪಿತೃಶರೀರ ಪ್ರವೇಶವು ವ್ಯರ್ಥವಾದಪ್ರಯುಕ್ತ ಆಗಮನದಲ್ಲಿ ಮಹಾಪ್ರಯಾಸವಿಲ್ಲದಿರುವುದರಿಂದ ಕರ್ಮಾದಿಗಳಲ್ಲಿ ಅತಿ ವೈರಾಗ್ಯವನ್ನು ಹೊಂದಬೇಕಾಗಿಲ್ಲ. ಎಂದರೆ- ಹಾಗೆ ಹೇಳಕೂಡದು. ಶರೀರವು ಹುಟ್ಟುವುದಕ್ಕಾಗಿ ರೇತಸ್ಸು ಆವಶ್ಯಕವಾಗಿರುವುದರಿಂದ ಪಿತೃಶರೀರ ಪ್ರವೇಶವು ಆವಶ್ಯಕವಾಗಿದೆ. **'ಈಶಕ್ಲೃಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಂ'** ಎಂದು ಪಿತೃ ಪ್ರವೇಶವು ಈಶನಿಂದ ಕ್ಲೃಪ್ತವಾಗಿದೆ ಎನ್ನುವ ಪ್ರಮಾಣದ್ದೆಶೆಯಿಂದ ಪಿತೃಪ್ರವೇಶವಿದ್ದುದರಿಂದ ಆಗಮನಕ್ಕೆ ಮಹಾಪ್ರಯಾಸವಿದ್ದುದರಿಂದ ವೈರಾಗ್ಯವನ್ನು ಹೊಂದಲೇಬೇಕು. (20) ೨೦ನೇ ಯೋನ್ಯಧಿಕರಣದಲ್ಲಿ ಪಿತೃ ದ್ವಾರಾ ಮಾತೃಯೋನಿಪ್ರವೇಶ ಅಪ್ರವೇಶಗಳಲ್ಲಿ ಅನುಪಪತ್ತಿಯು ತೋರದೆಯಿರುವುದರಿಂದ ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿ ಆ ಮೇಲೆ ಶರೀರವನ್ನು ಹೊಂದುತ್ತಾನೋ ಇಲ್ಲವೋ ಎಂದು ಸಂದೇಹವು ಬಂದರೆ— ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿಯೇ ಶರೀರವನ್ನು ಹೊಂದುತ್ತಾನೆ ಎನ್ನುವ ನಿಯಮವಿಲ್ಲವೆಂದು ಪೂರ್ವಪಕ್ಷವು; ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿಯೇ ಶರೀರವನ್ನು ಹೊಂದುತ್ತಾನೆಂದು ಸಿದ್ಧಾಂತವು. ಅದರಲ್ಲಿ 'ಅನ್ಯಥಾಗತಿಃ' ಎಂದು ಪೂರ್ವಪಕ್ಷನ್ಯಾಯವು; 'ಅನ್ಯಾಗತಿಃ' ಎಂದು ಸಿದ್ಧಾಂತನ್ಯಾಯವು. ಅಂದರೆ ಪಿತೃಸಕಾಶದ್ದೆಶೆಯಿಂದಲಾಗ್ಗಲೀ ಮತ್ತೊಬ್ಬ

ನಿಂದಲಾಗಲೀ ಉದರದಲ್ಲಿರತಕ್ಕ ಗರ್ಭಗತ ಶರೀರವನ್ನೇ ಪ್ರವೇಶಿಸುವುದು ಕೂಡುವುದರಿಂದ ಯೋನಿಪ್ರವೇಶವು ಕೂಡಲಾರದು. ಏವಂಚ ಶರೀರಪ್ರಾಪ್ತಿಗೆ ಅತಿಪ್ರಯಾಸವಿಲ್ಲದಿರುವುದರಿಂದ ವೈರಾಗ್ಯವನ್ನು ಹೊಂದಬೇಕಾಗಿಲ್ಲ ಎಂದರೆ— ಹೀಗೆ ಹೇಳಕೂಡದು. **'ಯೋನಿದ್ವಾರೇಣ ದೇಹಂ ಚ ಪ್ರಾಪ್ನೋತಿ ಪ್ರಾಯಶೋ ನರಃ'** ಎನ್ನುವ ವಚನದ್ದೆಶೆಯಿಂದ ಸಾಮಾನ್ಯವಾಗಿ ಅನ್ನದ್ವಾರಾದಿರೂಪವಾದ ಪ್ರಕಾರಾಂತರದಿಂದ ದೇಹಪ್ರಾಪ್ತಿಯಾಗುವುದಿಲ್ಲ. ಏವಂಚ ಬೇರೆ ಪ್ರಕಾರ ಕೂಡದಿರುವುದರಿಂದ ಪಿತೃದ್ವಾರಾ ಮಾತೃಯೋನಿಪ್ರವೇಶದಿಂದ ಅಸಿದ್ಧ ಶರೀರ ಪ್ರಾಪ್ತಿಯು; ಹೀಗೆ ಶರೀರಪ್ರಾಪ್ತಿಯಾಗಲಿಕ್ಕೆ ಮಹಾದುಃಖವಿದ್ದ ಪ್ರಯುಕ್ತ ವೈರಾಗ್ಯವನ್ನು ಹೊಂದಲೇ ಬೇಕು.

**ಪೂರ್ವಪಕ್ಷ ಸಿದ್ಧಾಂತಯುಕ್ತಿಯು ಸಮಾಪ್ತವಾಯಿತು.**

---

# ತದಂತರಾಧಿಕರಣವು

೧ನೇ ೨ನೇ ಅಧ್ಯಾಯಗಳಲ್ಲಿ ಸಮನ್ವಯ ಅವಿರೋಧಗಳಿಂದ ಬ್ರಹ್ಮ ಪದಾರ್ಥವನ್ನು ವಿಚಾರಮಾಡಿದರು. ಈ ಅಧ್ಯಾಯದಲ್ಲಿ ಅಥ ಜಿಜ್ಞಾಸಾ ಪದಗಳಿಂದ ಹೇಳಲ್ಪಟ್ಟ ವೈರಾಗ್ಯ-ಭಕ್ತಿ-ಉಪಾಸನಾ-ಜ್ಞಾನರೂಪಸಾಧನಗಳನ್ನು ವಿಚಾರಮಾಡುತ್ತಾರೆ. ಅದರಲ್ಲಿ ೧ನೇ ಪಾದ ದಲ್ಲಿ ಜ್ಞಾನಕ್ಕೆ ಕಾರಣವಾದ ಉಪಾಸನಕ್ಕೆ ಅಂಗಭೂತವಾದ ಭಕ್ತಿಗೆ ದಾರ್ಢ್ಯವನ್ನು ಹೊಂದಿಸಿ ಕೊಡತಕ್ಕ ವಿಷಯಗಳಲ್ಲಿ ವೈರಾಗ್ಯಹುಟ್ಟುವುದಕ್ಕಾಗಿ ಗಮನ-ಆಗಮನ-ಸ್ವರ್ಗ-ನರಕ-ಗರ್ಭ ವಾಸಾದಿಗಳ ಸ್ವರೂಪವನ್ನು ನಿರೂಪಿಸುತ್ತಾರೆ.

**'ಓಂ ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಂ ಓಂ'** ॥ ಸೂ. ೧ ॥

ಮೊದಲಿನ ಶರೀರವನ್ನು ಬಿಟ್ಟುಹೋಗತಕ್ಕ ಜೀವನು ದೇಹಾಂತರ ಪ್ರಾಪ್ತಿಗಾಗಿ ಭೂತ ಗಳಿಂದ ಸಂಬದ್ಧನಾಗಿಯೇ ಹೋಗುತ್ತಾನೆ. **'ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ'** ಎನ್ನುವ ಪ್ರಶ್ನವಾಕ್ಯದಿಂದಲೂ, **'ಇತಿ ತು ಪಂಚಮ್ಯಾಮಾ ಹುತಾವಾಪಃ ಪುರುಷವಚಸೋ ಭವಂತಿ'** ಎನ್ನುವ ಪರಿಹಾರವಾಕ್ಯದಿಂದಲೂ ಮರಣಾನಂತರ ದಲ್ಲಿಯೇ ಭೂತ ಸಂಬಂಧವು ಉಂಟೆಂದು ತಿಳಿದು ಬರುತ್ತದೆ. ॥ ಸೂ. ॥ ೧ ॥ ಅಧಿ ॥ ೧ ॥

**ತದಂತರಾಧಿಕರಣವು ಸಮಾಪ್ತವಾಯಿತು.**

---

# ತ್ರ್ಯಾತ್ಮಕತ್ವಾಧಿಕರಣವು

**'ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ'** ॥ ಸೂ. ೨ ॥

ಜಲಗಳಿಗೆ ಭೂ-ಜಲ-ಅಗ್ನ್ಯಾತ್ಮಕತ್ವವಿದ್ದುದರಿಂದಲೂ, ದೇಹಾರಂಭಕವಾದ ಪೃಥಿವ್ಯಾದಿ ಗಳ ಮಧ್ಯದಲ್ಲಿ ಜಲಭಾಗಕ್ಕೆ ಆಧಿಕ್ಯವಿದ್ದುದರಿಂದಲೂ **'ಆಪಃ ಪುರುಷವಚಸೋ ಭವಂತಿ'**

ಎನ್ನುವಲ್ಲಿದ್ದ ಆಪಃ ಎನ್ನುವ ವಿಶೇಷೋಕ್ತಿಯು ಕೂಡುವುದರಿಂದ ಸರ್ವಭೂತಸಂಬದ್ಧನಾಗಿಯೇ ಜೀವನು ಹೋಗುತ್ತಾನೆ. ॥ಸೂ. ॥ ೨ ॥ ಅಧಿ ॥ ೨ ॥

**ತ್ರ್ಯಾತ್ಮಕತ್ವಾಧಿಕರಣವು ಸಮಾಪ್ತವಾಯಿತು.**

---

## ಪ್ರಾಣಗತ್ಯಧಿಕರಣವು

### ' ಓಂ ಪ್ರಾಣಗತೇಶ್ಚ ಓಂ ' ॥ ಸೂ. ೩ ॥

**' ಕರಣೈರ್ವಾ ವ ನ ವಿಯುಜ್ಯತೇ '** ಎನ್ನುವ ಶ್ರುತಿಯುದ್ದೇಶೆಯಿಂದ ಜೀವನಿಂದ ಕೂಡಿಕೊಂಡು ಇಂದ್ರಿಯಗಳಿಗೆ ಗತಿಯು ಶ್ರುತವಾಗಿದೆ. ಆದುದರಿಂದ **' ಯತ್ರ ವಾ ವ ಭೂತಾನಿ ತತ್ರ ಕರಣಾನಿ '** ಎನ್ನುವ ಶ್ರುತಿಯಿಂದ ಭೂತಗಳು ಪ್ರಾಣಗಳಿಂದ ವ್ಯಾಪ್ತಗಳಾಗಿರುವುದರಿಂದ ಭೂತಗಳಿಂದ ಸಂಬದ್ಧನಾಗಿಯೇ ಜೀವನು ಹೋಗುತ್ತಾನೆ. ॥ ಸೂ. ॥ ೩ ॥ ಅಧಿ ॥ ೩ ॥

**ಪ್ರಾಣಗತ್ಯಧಿಕರಣವು ಸಮಾಪ್ತವಾಯಿತು.**

---

## ಅಗ್ನ್ಯಾಧಿಕರಣವು

### ' ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನಭಾಕ್ತತ್ವಾತ್ ಓಂ ' ॥ಸೂ. ೪ ॥

**' ಅಗ್ನಿಂ ವಾಗಪ್ಯೇತಿ ವಾತಂ ಪ್ರಾಣಶ್ಚಕ್ಷುರಾದಿತ್ಯಂ ಮನಶ್ಚಂದ್ರಮಸಂ ದಿಶಃ ಶ್ರೋತ್ರಂ '** ಎಂದು ಮರಣಕಾಲದಲ್ಲಿ ಜೀವನ ಇಂದ್ರಿಯಗಳಿಗೆ ಅಗ್ನ್ಯಾದಿಗಳನ್ನು ಕುರಿತು ಗಮನವು ಶ್ರುತವಾದುದರಿಂದ ಜೀವನಿಂದ ಕೂಡಿಕೊಂಡು ಇಂದ್ರಿಯಗಳಿಗೆ ಗಮನವಿಲ್ಲ, ಎಂದು ಹೇಳಕೂಡದು. ಅಗ್ನ್ಯಾದಿಗಳನ್ನು ಕುರಿತು ಗಮನಬೋಧಕ ಶ್ರುತಿಯು ಒಂದು ಅಂಶದಿಂದ ಅಗ್ನ್ಯಾದಿಗಳಲ್ಲಿ ಇಂದ್ರಿಯಗಳಿಗೆ ಗಮನವನ್ನು ಹೇಳುತ್ತದೆ. ಮತ್ತೊಂದು ಅಂಶದಿಂದ ಜೀವನಿಂದ ಕೂಡಿಕೊಂಡು ಗಮನವನ್ನು ಹೇಳುತ್ತದೆ. ॥ ಸೂ ॥ ೪ ॥ ಅಧಿ ॥ ೪ ॥

**ಅಗ್ನ್ಯಾಧಿಕರಣವು ಸಮಾಪ್ತವಾಯಿತು.**

---

## ಪ್ರಥಮೋ ಶ್ರವಣಾಧಿಕರಣವು

### ' ಓಂ ಪ್ರಥಮೋ ಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ ' ॥ ಸೂ ೫ ॥

**'ಏತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ'** ಎಂದು ದ್ವ್ಯಾಖ್ಯಾವಾದ ಪ್ರಥಮಾಗ್ನಿಯಲ್ಲಿ ಶ್ರದ್ಧಾಯುಕ್ತ ಜೀವನಿಗೆ ಹೋಮವು ಶ್ರುತವಾದುದರಿಂದ ಉಪಕ್ರಮ ವಾಕ್ಯದಲ್ಲಿ ಭೂತ ಸಾಹಿತ್ಯವು ಶ್ರುತವಾಗದಿರುವುದರಿಂದ ಜೀವನು ಭೂತಗಳಿಂದ ಸಂಬದ್ಧನಾಗಿ ಹೋಗುವುದಿಲ್ಲ ಎಂದರೆ— ಹಾಗೆ ಹೇಳಕೂಡದು. ಏಕೆಂದರೆ— ಪ್ರಸ್ತುತಗಳಾದ (ಆಪಃ ಏವ) ಜಲಗಳೇ ಶ್ರದ್ಧಾ ಶಬ್ದದಿಂದ ಹೇಳಿಸಿಕೊಳ್ಳಲ್ಪಡುತ್ತವೆ. ಏಕೆಂದರೆ— ಹಾಗೆ ಇದ್ದರೇನೇ 'ಆಪಃ ಪುರುಷ ವಚಸೋ ಭವಂತಿ' ಎನ್ನುವ ಉಪಸಂಹಾರವಾಕ್ಯವು ಕೂಡುತ್ತದೆ. ಇಲ್ಲವಾದರೆ ಪ್ರಬಲವಾದ ಉಪಸಂಹಾರವಾಕ್ಯವಿರೋಧವು ಬರುವುದರಿಂದ ಉಪಕ್ರಮ ವಾಕ್ಯಕ್ಕೆ ಅಪ್ರಾಮಾಣ್ಯವು ಬರಬೇಕಾಗುವುದು. ॥ ಸೂ. ೫ ॥ ಅಧಿ. ೫ ॥

**ಪ್ರಥಮೇಶ್ರವಣಾಧಿಕರಣವು ಸಮಾಪ್ತವಾಯಿತು.**

---

# ಅಶ್ರುತತ್ವಾಧಿಕರಣವು.

## 'ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ'

॥ ಸೂ. ೬ ॥

**'ಅಗ್ನಿಂ ವಾಗಪ್ಯೇತಿ'** ಇತ್ಯಾದಿಗಳಂತೆಯೇ ವಿಶೇಷವಾಗಿ ಜೀವನಿಂದ ಕೂಡಿಕೊಂಡು ಭೂತಗಳಿಗೆ ಗತಿಯು ಶ್ರುತವಾಗದಿರುವುದರಿಂದ ಭೂತಗಳಿಂದ ಕೂಡಿಕೊಂಡು ಹೋಗುವುದಿಲ್ಲ. ಎಂದರೆ— ಹಾಗೆ ಹೇಳಕೂಡದು. **'ಅಥ ಹೈನಂ ಯುಜಮಾನಂ ಕಿಂ ನ ಜಹಾತಿ ಭೂತಾನ್ಯೇವ ಭೂತೈರೇವ ಗಚ್ಛತಿ'** ಎನ್ನುವ ಪ್ರತ್ಯಕ್ಷ ಶ್ರುತಿಯಿಂದ ಇಷ್ಟಾಪೂರ್ತಾದಿಕಾರಿಗಳಿಗೆ ಭೂತಗಳಿಂದ ಕೂಡಿಕೊಂಡು ಗತಿಯು ತೋರುತ್ತದೆ. ॥ ಸೂ. ೬ ॥ ಅಧಿ. ೬ ॥

**ಅಶ್ರುತತ್ವಾಧಿಕರಣವು ಸಮಾಪ್ತವಾಯಿತು.**

---

# ಭಾಕ್ತಾಧಿಕರಣವು.

## 'ಓಂ ಭಾಕ್ತಂ ವಾಽನಾತ್ಮವಿತ್ವಾತ್ತಥಾ ಹಿ ದರ್ಶಯತಿ ಓಂ'

॥ ಸೂ. ೭ ॥

ಆತ್ಮಜ್ಞಾನವಿಲ್ಲದಿರುವುದರಿಂದ, **'ಅಪಾಮ ಸೋಮಮಮೃತಾ ಅಭೂಮ'** ಎಂದು ಕರ್ಮದಿಂದ ಕಾಮ್ಯ ಕರ್ಮಿಗೆ ಶ್ರುತವಾದ ಅಮೃತತ್ವವು ಕೆಲವು ಕಾಲದಲ್ಲಿ ಆಗತಕ್ಕ ಸ್ವರ್ಗ ಸುಖವೇ; ಮುಕ್ತಿಯಲ್ಲ. ಏಕೆಂದರೆ— **'ತಮೇವಂ ವಿದ್ವಾನ್ ಸ ಏವಮವಿದಿತೋ ನ ಭುನಕ್ತಿ'** ಇತ್ಯಾದಿ ಶ್ರುತಿಯು ಹಾಗೆ ತೋರಿಸುತ್ತದೆ. ಹಾಗೆಯೇ **'ಅಮೃತೋ ವಾವ ಸೋಮಪೋ ಭವತಿ, ಯಾವದಿಂದ್ರಃ'** ಇತ್ಯಾದಿ ಶ್ರುತಿಗಳು ಅಕಾಮ್ಯಕರ್ಮವನ್ನು ಮಾಡಿದವನಿಗೆ ಜ್ಞಾನದ್ವಾರಾ ಮುಖ್ಯ ಮೋಕ್ಷವೂ, ಜ್ಞಾನಿಗೆ ಕರ್ಮದಿಂದ ಆಗತಕ್ಕ

ಅಮೃತತ್ವವೂ ಮೋಕ್ಷದಲ್ಲಿ ಆನಂದಾತಿಶಯರೂಪವಾದುದು. ಹಾಗೆಯೇ ತೋರಿಸುತ್ತದೆ. ॥ ಸೂ. ೭ ॥ ಅಧಿ ೭ ॥

**ಭಾಕ್ತಾಧಿಕರಣವು ಸಮಾಪ್ತವಾಯಿತು.**

---

## ಕೃತಾತ್ಯಯಾಧಿಕರಣವು.

**'ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ'** ॥ ಸೂ. ೮ ॥

**'ಶೇಷೇಣೇಮಂ ಲೋಕಮಾಯಾತಿ, ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ'** ಎನ್ನುವ ಶ್ರುತಿಸ್ಮೃತಿಗಳಿಂದ ಕರ್ಮಕ್ಕೆ ಸ್ವರ್ಗಾದಿಭೋಗದಿಂದ ಕ್ಷಯವಾದ ಮೇಲೆ ಜೀವನು ಭುಕ್ತವಾದ ಕರ್ಮಶೇಷವುಳ್ಳವನಾಗಿಯೇ ಬರುತ್ತಾನೆ. ॥ ಸೂ. ೮ ॥ ಅಧಿ. ೮ ॥

**ಕೃತಾತ್ಯಯಾಧಿಕರಣವು ಸಮಾಪ್ತವಾಯಿತು.**

---

## ಯಥೇತಾಧಿಕರಣವು.

**'ಓಂ ಯಥೇತಮನೇವಂ ಚ ಓಂ'**

ಜೀವನು ಯಾವ ಮಾರ್ಗದಿಂದ ಸ್ವರ್ಗಾದಿ ಲೋಕಕ್ಕೆ ಹೋಗಿದ್ದಾನೋ, ಆ ಮಾರ್ಗದಿಂದ ಬರುತ್ತಾನೆ. ಬೇರೆ ಮಾರ್ಗದಿಂದಲೂ ಬರುತ್ತಾನೆ. ॥ ಸೂ. ೯ ॥ ಅಧಿ. ೯ ॥

**ಯಥೇತಾಧಿಕರಣವು ಸಮಾಪ್ತವಾಯಿತು.**

---

## ಚರಣಾಧಿಕರಣವು.

**'ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ'** ॥ ಸೂ. ೧೦ ॥

**'ರಮಣೀಯಚರಣಾಃ ರಮಣೀಯಾಂ ಯೋನಿಮಾಪದ್ಯಂತೇ'** ಇತ್ಯಾದಿ ಶ್ರುತಿಗಳದೆಶೆಯಿಂದ ಗಮನಾಗಮನವು ಕರ್ಮಾಂಗಭೂತವಾದ ಆಚಾರದೆಶೆಯಿಂದ ಆಗುತ್ತದೆ. ಯಜ್ಞಾದಿ ಕರ್ಮಗಳಿಂದ ಆಗುವುದಿಲ್ಲ. ಎಂದರೆ— ಹಾಗೆ ಹೇಳಕೂಡದು. ರಮಣೀಯಾ ಎನ್ನುವ ಶ್ರುತಿಯಲ್ಲಿರುವ ಚರಣಶಬ್ದದಿಂದ ಯಜ್ಞಾದಿಕರ್ಮಗಳನ್ನೂ ಅಮುಖ್ಯವೃತ್ತಿಯಿಂದ ಇಟ್ಟುಕೊಳ್ಳಬೇಕು. ಹೀಗೆ ಕಾರ್ಷ್ಣಾಜಿನಿಯಾಚಾರ್ಯರು ತಿಳಿಯುತ್ತಾರೆ.

**ಓಂ 'ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ಓಂ'** ॥ ಸೂ. ೧೧ ॥

ಯಜ್ಞಾದಿಕಾರಿಗಳು ಪ್ರಕೃತರಾಗಿರುವುದರಿಂದ, ಯಜ್ಞಾದಿಕಾರಿಗಳು ರಮಣೀಯರು ಇತ್ಯಾದ್ಯುಕ್ತಿಯಿಂದಲೇ ಯಜ್ಞಾದಿಗಳಿಗೆ ಉಪಲಕ್ಷಣವು ಕೂಡುವುದರಿಂದ ಚರಣಶಬ್ದಕ್ಕೆ ವೈಯರ್ಥ್ಯವು ಎಂದರೆ— ಹಾಗೆ ಹೇಳಕೂಡದು. ರಮಣೀಯತ್ವಾದಿಗಳಿಗೆ ಸಾಧ್ವಸಾಧು ಆಚಾರಾಪೇಕ್ಷೆಯಿದೆ.

**'ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ'** ॥ ಸೂ. ೧೨ ॥

'ಧರ್ಮಂ ಕುರುತ' ಎನ್ನುವ ಅರ್ಥದಲ್ಲಿ 'ಧರ್ಮಂ ಚರತ' ಎಂದು ಪ್ರಯೋಗವಿದ್ದುದರಿಂದ ರಮಣೀಯ ಕಪೂಯಚರಣಗಳು ಸಮೀಚೀನ-ಅಸಮೀಚೀನ, ಧರ್ಮ-ಅಧರ್ಮಗಳೇ ಎಂದು ಬಾದರ್ಯಾಚಾರ್ಯರು ತಿಳಿಯುತ್ತಾರೆ ॥ ಸೂ. ॥ ೧೦ ॥ ೧೧ ॥ ೧೨ ॥ ಅಧಿ. ೧೦ ॥

**ಚರಣಾಧಿಕರಣವು ಸಮಾಪ್ತವಾಯಿತು.**

---

## ಅನಿಷ್ಟಾಧಿಕರಣವು

**'ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ ಓಂ'** ॥ ಸೂ. ೧೩ ॥

ಇಷ್ಟಾದಿಕಾರಿಗಳಿಗೆ ಮಾತ್ರ ಗಮನಾಗಮನಾದಿಗಳಲ್ಲ, ಮತ್ತೆ **'ತದ್ಯ ಇಹ ಶುಭಕೃತೋ ಯೇ ಚಾಶುಭಕೃತಸ್ತೇ ಶುಭಮನುಭೂಯಾವರ್ತಂತೇ'** ಎನ್ನುವ ಶ್ರುತಿಯಲ್ಲಿ ಇಷ್ಟಾಪೂರ್ತಾದ್ಯಕಾರಿಗಳಿಗೂ ಮತ್ತು ಪಾಪಕರ್ಮಿಗಳಿಗೂ ಗಮನಾಗಮನಗಳು ಶ್ರುತಗಳಾಗಿವೆ.

**'ಓಂ ಸಂಯಮನೇತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ಓಂ'** ॥ ಸೂ. ೧೪ ॥

ಚೆನ್ನಾಗಿ ಯಮಶಾಸನವನ್ನು ಅನುಭವಿಸಿಯೇ ಯಜ್ಞಾದಿಗಳನ್ನು ಮಾಡದೆ ಇದ್ದ ಪಾಪಿಗಳಿಗೆ ಕೆಲವರಿಗೆ ಮಾತ್ರ ಉತ್ಥಾನವು, ಭಗವದ್ವೇಷಿಗಳಿಗೆಲ್ಲಾ ನಿತ್ಯನರಕದಲ್ಲಿ ಪಾತವು. ಇಂತಹ ಗತಿಯು **'ಸರ್ವೇ ವಾ ಏತೇ ಽಶುಭಕೃತಃ ಸಂಯಮನೇ ಪ್ರಪತಂತಿ'** ಇತ್ಯಾದಿ ಶ್ರುತಿಗಳಲ್ಲಿ ದೃಷ್ಟವಾಗಿದೆ.

**'ಓಂ ಸ್ಮರಂತಿ ಚ ಓಂ'** ಸೂ. ॥ ೧೫ ॥

ಪಾಪಿಗಳಿಗೆ ಇಂತಹ ಗತಿಯು ಶ್ರುತಿಯಲ್ಲಿ ಮಾತ್ರ ಹೇಳಿದ್ದಲ್ಲ, ಮತ್ತೆ ಆ ಗತಿಯನ್ನು ಸ್ಮೃತಿಕರ್ತೃಗಳು, **'ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರಸಂಶಯಃ, ತಾನಹಂ ದ್ವಿಷತಃ ಕ್ರೂರಾನ್, ಸರ್ವದೇವಾವರತ್ವೇನ ಯೋ ಜಾನಾತಿ ಚ ಕೇಶವಂ'** ಇತ್ಯಾದಿ ಸ್ಮೃತಿಗಳಿಂದ ಬೋಧಿಸುತ್ತಾರೆ ॥ ಸೂ. ೧೩ ॥ ೧೪ ॥ ೧೫ ॥ ಅಧಿ. ೧೧ ॥

**ಅನಿಷ್ಟಾಧಿಕರಣವು ಸಮಾಪ್ತವಾಯಿತು.**

---

## ಅಪಿಸಪ್ತಾಧಿಕರಣವು

**'ಓಂ ಅಪಿ ಸಪ್ತ ಓಂ' ಸೂ. ॥ ೧೬ ॥**

ನರಕವನ್ನು ರೌರವ, ಮಹಾರೌರವ, ವಹ್ನಿ, ವೈತರಿಣೀ, ಕುಂಭೀಪಾಕ, ತಾಮಿಸ್ರ, ಅಂಧತಾಮಿಸ್ರ' ಎಂದು ಏಳು ಪ್ರಭೇದಗಳುಳ್ಳವನ್ನಾಗಿ ಸ್ಮರಿಸುತ್ತಾರೆ. ಯದ್ಯಪಿ ನರಕಗಳು ಬಹು ಕೋಟಿಗಳು ಇವೆ. ಆದರೆ ಪ್ರಧಾನ ನರಕಗಳು ಏಳು. ॥ ಸೂ. ॥ ೧೬ ॥ ಅಧಿ. ೧೨ ॥

**ಅಪಿಸಪ್ತಾಧಿಕರಣವು ಸಮಾಪ್ತವಾಯಿತು.**

---

## ತತ್ರಾಪ್ಯಧಿಕರಣವು.

**'ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ' ॥ ಸೂ. ೧೭ ॥**

ನರಕದಲ್ಲಿಯೂ ದುಃಖವನ್ನು ಭೋಗಿಸದೇನೇ ಶ್ರೀ ಹರಿಯ ಪ್ರೇರಣಾಖ್ಯ ವ್ಯಾಪಾರವಿದ್ದುದರಿಂದ '**ಸರ್ವಂ ದಮಯತಿ ಸರ್ವಂ ನ ರಮಯತಿ**' ಎಂದು ಸರ್ವ ನಿಯಂತೃತ್ವ ಶ್ರುತಿ ವಿರೋಧವಾಗಲೀ, ನರಕಕ್ಕೆ ಸದುಃಖತ್ವವಿದ್ದರೆ ತನ್ನಿಯಾಮಕನಾದ ಶ್ರೀ ಹರಿಗೆ ದುಃಖಾಭೋಕ್ತೃತ್ವ ವಿರೋಧವಾಗಲೀ ಇಲ್ಲ. ॥ ಸೂ. ॥ ೧೭ ॥ ಅಧಿ ॥ ೧೩ ॥

**ತತ್ರಾಪ್ಯಧಿಕರಣವು ಸಮಾಪ್ತವಾಯಿತು.**

---

## ವಿದ್ಯಾಧಿಕರಣವು.

**'ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ' ॥ ಸೂ. ೧೮ ॥**

**'ತದ್ಯ ಇತ್ಥಂ ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ' 'ಅಥ ಯ ಇಮೇ ಗ್ರಾಮಾ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಂ'** ಎಂದು ವಿದ್ಯಾಮಾರ್ಗಕರ್ಮಮಾರ್ಗಗಳಿಗೂ ಪ್ರಕೃತತ್ವವಿದ್ದುದರಿಂದ, '**ಏತಯೋಃ ಪಥೋಃ ನೈಕತರೇಣ**' ಎನ್ನುವ ಶ್ರುತಿಯಲ್ಲಿ 'ಏತಯೋಃ' ಎನ್ನುವುದಕ್ಕೆ ವಿದ್ಯಾಮಾರ್ಗ, ಕರ್ಮಮಾರ್ಗಗಳು ಎಂದೇ ಅರ್ಥವು. ॥ ಸೂ. ॥ ೧೮ ॥ ಅಧಿ ॥ ೧೪ ॥

**ವಿದ್ಯಾಧಿಕರಣವು ಸಮಾಪ್ತವಾಯಿತು.**

---

## ನ ತೃತೀಯಾಧಿಕರಣವು.

**'ಓಂ ನ ತೃತೀಯೇ ತಥೋಪಲಬ್ಧೇಃ ಓಂ' ॥ ಸೂ. ೧೯ ॥**

'ಅಥಾವಿದ್ವಾನಕರ್ಮಾ' ಇತ್ಯಾದಿ ಶ್ರುತಿಗಳಲ್ಲಿ ಹಾಗೆ ತೋರುವುದರಿಂದ ತೃತೀಯಾಧೋಗತಿಯಾದ ಅಂಧಂತಮಸ್ಸಿನಲ್ಲಿ ಸುಖಲೇಶವೂ ಇಲ್ಲ.

**'ಓಂ ಸ್ಮರ್ಯತೇಽಪಿ ಚ ಲೋಕೇ ಓಂ' ॥ ಸೂ. ॥ ೨೦ ॥**

ಅಂಧಂತಮಸ್ಸಿನಲ್ಲಿ ಸುಖಲೇಶವಿಲ್ಲವೆನ್ನುವುದು. '**ತಿರ್ಯಕ್ತ್ವಂ ನರಕೇ ಚೈವ**' ಎನ್ನುವ ಸ್ಮೃತಿ ಸಿದ್ಧವಾಗಿದೆ. ಲೌಕಿಕ ದೃಷ್ಟಾಂತ ಯುಕ್ತ ಯುಕ್ತಿಸಿದ್ಧವೂ ಆಗಿದೆ.

**'ಓಂ ದರ್ಶನಾಚ್ಚ ಓಂ' ॥ ಸೂ. ॥ ೨೧ ॥**

'ನ ತೃತೀಯೇ ಸುಖಂ' ಎನ್ನುವುದು ಚತುರ್ಮುಖ ಬ್ರಹ್ಮನ ಪ್ರತ್ಯಕ್ಷಸಿದ್ಧವೂ ಆಗಿದೆ.

**'ಓಂ ತೃತೀಯೇ ಶಬ್ದಾನರೋಧಃ ಸಂಶೋಕಜಸ್ಯ ಓಂ' ॥ ಸೂ ॥ ೨೨ ॥**

ಮೂರನೇ ತಮಸ್ಸಿನಲ್ಲಿ ಶಬ್ದಶ್ರವಣದಿಂದಲೇ ಅತಿ ದುಃಖಜನ್ಯವಾದ ಮೋಹವು ಉಂಟಾಗುತ್ತದೆ. ಆದುದರಿಂದ ಅಲ್ಲಿ ಸುಖಲೇಶವೂ ಇಲ್ಲವೇ ಇಲ್ಲ.

**'ಓಂ ಸ್ಮರಣಾಚ್ಚ ಓಂ' ॥ ಸೂ. ॥ ೨೩ ॥**

ಮೂರನೇ ತಮಸ್ಸಿನ ಸ್ವರೂಪವನ್ನು ಕೇಳಿದೊಡನೆಯೇ ಅತಿಮೂರ್ಛೆಯು ಹುಟ್ಟುತ್ತದೆನ್ನುವುದು, '**ಮಹಾತಮಸ್ತ್ರಿಧಾಪ್ರೋಕ್ತಮೂರ್ಧ್ವಂ ಮಧ್ಯಂತಥಾಽಧರಂ। ಶ್ರವಣಾದೇವ ಮೂರ್ಛಾದಿರಧರಸ್ಯ ಯತೋಭವೇತ್**' ಎನ್ನುವ ಸ್ಮೃತಿಸಿದ್ಧವೂ ಆಗಿದೆ. ॥ ಸೂ. ೧೯ ॥ ೨೦ ॥ ೨೧ ॥ ೨೨ ॥ ೨೩ ॥ ಅಧಿ. ೧೫ ॥

**ನ ತೃತೀಯಾಧಿಕರಣವು ಸಮಾಪ್ತವಾಯಿತು.**

---

## ತತ್ಸ್ವಾಭಾವ್ಯಾಧಿಕರಣವು.

**'ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ' ॥ ಸೂ ॥ ೨೪ ॥**

ಅರ್ಥಾಂತರವು ಕೂಡದೆ ಈ ಅರ್ಥವೇ ಕೂಡುವುದರಿಂದ ಕರ್ಮಿಗೆ ಧೂಮಾದಿ ದೇವತಾಸ್ವಭಾವ ಸದೃಶವಾದ ಸ್ವಭಾವತ್ವವೇ ಪ್ರಾಪ್ತವಾಗುತ್ತದೆ. ಧೂಮಾದಿದೇವತೈಕ್ಯವಲ್ಲ. ಧೂಮಾದಿ ದೇವತಾ ಪದಪ್ರಾಪ್ತಿಯೂ ಅಲ್ಲ. ॥ ಸೂ. ॥ ೨೪ ॥ ಅಧಿ. ॥ ೧೬ ॥

**ತತ್ಸ್ವಾಭಾವ್ಯಾಧಿಕರಣವು ಸಮಾಪ್ತವಾಯಿತು.**

---

## ನಾತಿಚಿರೇಣಾಧಿಕರಣವು.

**'ಓಂ ನಾತಿಚಿರೇಣಾವಿಶೇಷಾತ್ ಓಂ' ॥ ಸೂ. ॥ ೨೫ ॥**

'ತದ್ಯ ಇಹ ರಮಣೀಯಚರಣಾಃ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ' ಎಂದು ವಿಶೇಷಶ್ರುತವಾಗಿರುವುದರಿಂದ ಸ್ವರ್ಗದಿಂದ ಕೆಳಗೆ ಇಳಿಯುವ ಕರ್ಮಿಯು ಶೀಘ್ರವಾಗಿಯೇ ಬ್ರಾಹ್ಮಣಾದಿ ಯೋನಿಯನ್ನು ಹೊಂದುತ್ತಾನೆ. ॥ ಸೂ. ॥ ೨೫ ॥ ॥ ಅಧಿ. ॥ ೧೭ ॥

**ನಾತಿಚಿರೇಣಾಧಿಕರಣವು ಸಮಾಪ್ತವಾಯಿತು.**

---

## ಅನ್ಯಾಧಿಕರಣವು

**'ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ'** ॥ ಸೂ. ॥ ೨೬ ॥

ಸ್ವರ್ಗದಿಂದ ಕೆಳಗೆ ಇಳಿದ ಕರ್ಮಿಗೆ '**ತ ಇಹ ವ್ರೀಹಿ ಯವಾಸ್ತಿಲಾ ಮಾಷಾ ಜಾಯಂತೇ**' ಎಂದು ವ್ರೀಹ್ಯಾದಿ ಭಾವವೆಂದರೆ— ಮತ್ತೊಬ್ಬ ಜೀವನಿಂದ ಅಧಿಷ್ಠಿತವಾದ ವ್ರೀಹ್ಯಾದಿ ಶರೀರದಲ್ಲಿ ಪ್ರವೇಶವೇ. ಅಭಿಮಾನವಲ್ಲ. '**ಸೋऽವಾಗ್ಗತಃ**' ಎನ್ನುವ ಶ್ರುತಿಯಲ್ಲಿಯೂ '**ಸ್ವರ್ಗಾದವಾಗ್ಗತಃ**' ಎನ್ನುವ ವಾರಾಹವಚನದಲ್ಲಿಯೂ ಹೀಗೆ ಹೇಳಿಯದೆ. ಪೂರ್ವದಲ್ಲಿ ಪಠಿತವಾದ '**ಧೂಮೋ ಭೂತ್ವಾ**' ಇತ್ಯಾದಿ ವಾಕ್ಯದಲ್ಲಿ ಐಕ್ಯವ್ಯಪದೇಶವಿದ್ದಂತೆಯೇ '**ತ ಇಹ ವ್ರೀಹಿ ಯವಾಃ**' ಇತ್ಯಾದ್ಯೈಕ್ಯವ್ಯವಹಾರವು ಯುಕ್ತವಾಗುತ್ತದೆ.

**'ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ'** ॥ ಸೂ. ೨೭ ॥

ಯಜ್ಞಾಖ್ಯ ಕರ್ಮವು ದುಃಖಸಾಧನವು, ಹಿಂಸಾತ್ಮವಿದ್ದಪ್ರಯುಕ್ತ ಬ್ರಾಹ್ಮಣಹಿಂಸೆಯಂತೆ ಎಂದರೆ— ಹೀಗೆ ಹೇಳಕೂಡದು. '**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**' ಇತ್ಯಾದಿ ಶ್ರುತಿವಿಹಿತವಾಗಿದೆ. ॥ ಸೂ. ॥ ೨೬ ॥ ೨೭ ॥ ಅಧಿ ॥ ೧೮ ॥

**ಅನ್ಯಾಧಿಕರಣವು ಸಮಾಪ್ತವಾಯಿತು.**

---

## ರೇತೋಧಿಕರಣವು.

**'ಓಂ ರೇತಸ್ಸಿಗ್ಯೋऽಥ ಓಂ'** ॥ ಸೂ. ೨೮ ॥

ಸ್ವರ್ಗದಿಂದ ಕೆಳಗೆ ಇಳಿದ ಕರ್ಮಿಗೆ ಮೊದಲು ಪಿತೃಪ್ರವೇಶವು. ಆ ಮೇಲೆ ಮಾತೃಪ್ರವೇಶವು. ॥ ಸೂ. ೨೮ ॥ ಅಧಿ ॥ ೧೯ ॥

**ರೇತೋಧಿಕರಣವು ಸಮಾಪ್ತವಾಯಿತು.**

---

# ಯೋನ್ಯಧಿಕರಣವು.

## ' ಓಂ ಯೋನೇಃ ಶರೀರಂ ಓಂ ' ॥ ಸೂ. ೨೯ ॥

ಕರ್ಮಿಯು ಪಿತೃದ್ವಾರಾ ಯೋನಿ ಪ್ರವೇಶಾನಂತರದಲ್ಲಿ ಶರೀರವನ್ನು ಹೊಂದುತ್ತಾನೆ.

ಸ್ವರ್ಗದಿಂದ ಕೆಳಗೆ ಬಂದ ಜೀವನು ವೃಷ್ಟಿದ್ವಾರಾ ವ್ರೀಹ್ಯಾದಿ ಬೀಜಗಳಲ್ಲಿ ಸಂಬದ್ಧನಾಗಿ ರೇತಸ್ಸೇಕಮಾಡಿದ ಪುರುಷನನ್ನು ಪ್ರವೇಶಮಾಡಿ ರೇತಸ್ಸಿನಿಂದ ಕೂಡಿಕೊಂಡು ಮಾತೃಯೋನಿ ದ್ವಾರಾ ಜಠರವನ್ನು ಪ್ರವೇಶಮಾಡುವವನಾಗಿ ಕಲಲ ಬುದ್ಬುದಾದಿ ಕ್ರಮದಿಂದ ಹುಟ್ಟಿದ ಶರೀರ ವನ್ನು ಹೊಂದುತ್ತಾನೆಂದು ಪ್ರಸಿದ್ಧವು. ಅದು ಸತ್ಯವೋ ಮಿಥ್ಯೆಯೋ ಎಂದು ಸಂದೇಹವು. ತಥ್ಯವಲ್ಲವೆಂದು ಪೂರ್ವಪಕ್ಷವು. ಏಕೆಂದರೆ— **' ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ಸ್ವರ್ಗತೋ ಗತಃ '** ಇತ್ಯಾದಿ ವಚನಗಳು ಇವೆ. ಮತ್ತು ಮಾಂಧಾತೃ, ದ್ರೋಣ, ದ್ರುಪದ, ಕೃಪ, ಶುಕಾದಿಗಳಿಗೆ ಬೀಜಾದಿ ಸಂಬಂಧವಿಲ್ಲದೇನೇ ಉತ್ಪತ್ತಿಯು ಕಂಡದೆ. ಆದುದರಿಂದ ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿ ದೇಹವನ್ನು ಹೊಂದುತ್ತಾನೆನ್ನುವುದು ಸರಿಯಲ್ಲ ಎಂದರೆ— ಹಿಂದೆ ಹೇಳಿದ್ದೇ ಯುಕ್ತವೆಂದು ಸಿದ್ಧಾಂತವು. ಏಕೆಂದರೆ— **' ಮೇಘೋ ಭೂತ್ವಾ ಪ್ರವರ್ಷತಿ, ತ ಇಹ ವ್ರೀಹಿ ಯವಾ ಓಷಧಿ ವನಸ್ಪತಯಃ ತಿಲಾ ಮಾಷಾ ಜಾಯಂತೇ ' ' ಯೋ ಯೋ ಹ್ಯನ್ನಮತ್ತಿ ' ' ಯೋ ವಾ ರೇತಸ್ಸಿಂಚತಿ ' ' ಸ ತದ್ಭೂಯ ಏವ ಭವತಿ ' ' ತದ್ಯ ಇಹ ರಮಣೀಯ ಚರಣಾಃ '** ಇತ್ಯಾದಿ ಶ್ರುತಿಗಳು ಇದ್ದುದರಿಂದ ಹಿಂದೆ ಹೇಳಿದ ರೀತಿಯಿಂದ ದೇಹೋತ್ಪತ್ತಿಯೇ ಸಾಮಾನ್ಯವಾಗಿ ಜೀವನಿಗೆ ತಿಳಿದುಬರುತ್ತದೆ. ಆದರೂ ಇದಕ್ಕೆ ವ್ಯತ್ಯಾಸ ವಾಗಿಯೂ ದೇಹೋತ್ಪತ್ತಿಯು ಮಾಂಧಾತ್ರಾದಿಗಳಲ್ಲಿ ಕಂಡುಬಂದದೆ. ಆದುದರಿಂದ ಸೂತ್ರದಲ್ಲಿ ಹೇಳಿದ ಬೀಜಾದಿಸಂಬಂಧನಿಯಮವು ಅಯುಕ್ತವೆಂದು ಹೇಳಕೂಡದು. ಸೂತ್ರ ಕಾರರೇ ಕೆಲವುಕಡೆ ವಿಶೇಷ ಕಾರಣವಿದ್ದರೆ ಹಿಂದೆ ಹೇಳಿದ ಬೀಜಾದಿ ಸಂಬಂಧಾಭಾವವನ್ನು ಅಥಶಬ್ದದಿಂದ ಹೇಳಿದ್ದಾರೆಂದು ಹೇಳುತ್ತಾರೆ—

**ಮೂ ॥ ಬೀಜಪೂರುಷಯೋನೀನಾಂ ಸಂಗಾತಿನಿಯಮೋಜ್ಝಿತಿಂ ।**
**ಅಥಶಬ್ದೇನ ಭಗವಾನಾಹ ಕಾರಣತಶ್ಚ ತಾಂ ॥ ೫ ॥**

ಅ ॥ ಬೀಜಪೂರುಷಯೋನೀನಾಂ ಬೀಜ=ವ್ರೀಹ್ಯಾದಿಗಳೂ ರೇತಸ್ಸೂಕೂಡ, ಪೂರುಷ= ಪುರುಷನು, ಯೋನೀನಾಂ=ಯೋನಿಯೂ ಇವುಗಳ, ಸಂಗಾತಿನಿಯಮೋಜ್ಝಿತಿಂ=ಸಂಬಂಧದ ಅತಿನಿಯಮಾಭಾವವನ್ನು, ಭಗವಾನ್=ವೇದವ್ಯಾಸರು, ಅಥಶಬ್ದೇನ=ಅಥಶಬ್ದದಿಂದ, ಆಹ= ಹೇಳಿದರು. ತಾಂ ಚ=ಬೀಜಾದಿಸಂಬಂಧನಿಯಮರಾಹಿತ್ಯವನ್ನು, ಕಾರಣತಶ್ಚ=ಕಾರಣದಿಂದ, ಆಹ=ಹೇಳಿದರು

ಟಾ ॥ (1) ' ರೇತಸ್ಸಿಗ್ಯೋಽಥ ' ಎಂದು ಪೂರ್ವಸೂತ್ರದ್ದೆಶೆಯಿಂದ ಅಥಶಬ್ದವನ್ನು ಇಲ್ಲಿಯೂ ಇಟ್ಟುಕೊಳ್ಳಬೇಕು. ಅಥಶಬ್ದವು ಪ್ರಕೃತಾರ್ಥದ್ದೆಶೆಯಿಂದ ಅರ್ಥಾಂತರದಲ್ಲಿದೆ. ತಥಾಚ ಯೋನಿಯದ್ದೆಶೆಯಿಂದ ಶರೀರವನ್ನು ಹೊಂದುತ್ತಾನೆ. ಕೆಲವುಕಡೆ ಯೋನಿಯ ಅಭಾವದಿಂದಲೂ ಹೊಂದುತ್ತಾನೆ. ಹೀಗೆ ಅಥಶಬ್ದದಿಂದ ಸೂತ್ರಕಾರರು ಬೀಜಾದಿಸಂಬಂಧ ನಿಯಮಾಭಾವವನ್ನು ಸೂತ್ರದಲ್ಲಿ ಹೇಳಿರುವರು. ಆದಕಾರಣ ಈ ವಿಶೇಷೋತ್ಪತ್ತಿಯು ಸೂತ್ರದಲ್ಲಿ ಹೇಳದೆ ಇದ್ದುದಲ್ಲ ॥ ೫ ॥ ಸೂ. ೨೯ ॥ ಅಧಿ ೨೦ ॥

**ಯೋನ್ಯಧಿಕರಣವು ಸಮಾಪ್ತವಾಯಿತು.**

## ಮೂರನೇ ಅಧ್ಯಾಯದ ೧ನೇ ಪಾದದ ಸಾರಾಂಶ.

೧ನೇ **ತದಂತರಾಧಿಕರಣದಲ್ಲಿ**—ಮುಮುಕ್ಷುವಿಗೆ ವೈರಾಗ್ಯ ಬರುವುದಕ್ಕಾಗಿ ಮೃತ ಜೀವನಿಗೆ ನಿಶ್ಶೇಷವಾಗಿ ಭೂತವಿಯೋಗಾಭಾವ ಸಮರ್ಥನವನ್ನೂ,

೨ನೇ **ತ್ರ್ಯಾತ್ಮಕತ್ವಾಧಿಕರಣದಲ್ಲಿ**—ಜೀವನಿಗೆ ಸಮಸ್ತ ಭೂತಗಳಿಂದ ಕೂಡಿಕೊಂಡು ಗತಿಸಮರ್ಥನವನ್ನೂ,

೩ನೇ **ಪ್ರಾಣಗತ್ಯಧಿಕರಣದಲ್ಲಿ**—ಅನುಮಾನದಿಂದ ಜೀವನಿಗೆ ಭೂತಗಳಿಂದ ಕೂಡಿಕೊಂಡು ಗಮನಸಮರ್ಥನವನ್ನೂ,

೪ನೇ **ಅಗ್ನ್ಯಾದ್ಯಧಿಕರಣದಲ್ಲಿ**—ಜೀವನಿಂದ ಕೂಡಿಕೊಂಡು ಅಂಶದಿಂದ ಇಂದ್ರಿಯಗಳಿಗೆ ಗತಿಸಮರ್ಥನವನ್ನೂ,

೫ನೇ **ಪ್ರಥಮೇ ಶ್ರವಣಾಧಿಕರಣದಲ್ಲಿ**— ಶಂಕಾಂತರವನ್ನು ನಿವಾರಿಸುವುದಕ್ಕಾಗಿ ಭೂತಗಳಿಂದ ಕೂಡಿಕೊಂಡು ಗತಿಸಮರ್ಥನವನ್ನೂ,

೬ನೇ **ಅಶ್ರುತತ್ವಾಧಿಕರಣದಲ್ಲಿ**—ಪ್ರತ್ಯಕ್ಷವಚನದಿಂದ ಭೂತಗಳಿಂದ ಕೂಡಿಕೊಂಡು ಗಮನಸಮರ್ಥನವನ್ನೂ,

೭ನೇ **ಭಾಕ್ತಾಧಿಕರಣದಲ್ಲಿ**—ವೈರಾಗ್ಯಾನುಷ್ಠಾನಕ್ಕೆ ಆವಶ್ಯಕತ್ವ ಸಮರ್ಥನವನ್ನೂ,

೮ನೇ **ಕೃತಾತ್ಯಯಾಧಿಕರಣದಲ್ಲಿ**—ಕರ್ಮಶೇಷವಿಲ್ಲದಿರುವುದರಿಂದ ಸ್ವತ ಏವ ಮೋಕ್ಷವು ಸಿದ್ಧಿಸುತ್ತದೆ ಎನ್ನುವ ಶಂಕಾಂತರವನ್ನು ಪರಿಹರಿಸುತ್ತಾ ವೈರಾಗ್ಯಕ್ಕೆ ಆವಶ್ಯಕತ್ವ ಸಮರ್ಥನವನ್ನೂ,

೯ನೇ **ಯಥೇತಾಧಿಕರಣದಲ್ಲಿ**—ಸ್ವರ್ಗಕ್ಕೆ ಹೋದ ಮಾರ್ಗದಿಂದ ಬೇರೆ ಮಾರ್ಗದಿಂದ ಆಗಮನ ಪ್ರಕಾರ ನಿರೂಪಣವನ್ನೂ,

೧೦ನೇ **ಚರಣಾಧಿಕರಣದಲ್ಲಿ**—ಗಮನಾಗಮನಕ್ಕೆ ಕರ್ಮಫಲತ್ವ ಸಮರ್ಥನವನ್ನೂ,

೧೧ನೇ ಅನಿಷ್ಟಾಧಿಕರಣದಲ್ಲಿ ಇಷ್ಟಾಪೂರ್ತಾದಿಗಳನ್ನೂ ಮಾಡದೆ ಇದ್ದವರಿಗೂ ಇಷ್ಟಾಪೂರ್ತಾದಿ ವಿರುದ್ಧಕರ್ಮಕರ್ತೃಗಳಿಗೂ, ಗಮನಾಗಮನಾದಿ ದುಃಖ ಸಮರ್ಥನವನ್ನೂ,

೧೨ನೇ ಅಪಿಸಪ್ತಾಧಿಕರಣದಲ್ಲಿ ನಿತ್ಯನರಕ ಸಮರ್ಥನವನ್ನೂ,

೧೩ನೇ ತತ್ರಾಪ್ಯಧಿಕರಣದಲ್ಲಿ ನರಕಕ್ಕೆ ಸದುಃಖತ್ವಸಮರ್ಥನವನ್ನೂ,

೧೪ನೇ ವಿದ್ಯಾಧಿಕರಣದಲ್ಲಿ ಜೀವರಿಗೆ ಗತಿಸ್ವಾತಂತ್ರ್ಯನಿರಾಸವನ್ನೂ

೧೫ನೇ ನತೃತೀಯಾಧಿಕರಣದಲ್ಲಿ ಅಂಧಂತಮಃಸಿಗೆ ಕೇವಲ ದುಃಖಸ್ವರೂಪತ್ವಸಮರ್ಥನವನ್ನೂ,

೧೬ನೇ ತತ್ಸ್ವಾಭಾವ್ಯಾಧಿಕರಣದಲ್ಲಿ ಕರ್ಮಿಗಳಿಗೆ ಧೂಮಾದಿಭಾವನಿರಾಸವನ್ನೂ,

೧೭ನೇ ನಾತಿಚಿರೇಣಾಧಿಕರಣದಲ್ಲಿ ಸ್ವರ್ಗದಿಂದ ಇಳಿದ ಕರ್ಮಿಗೆ ಶೀಘ್ರವಾಗಿ ಗರ್ಭವಾಸಾದಿಪ್ರಾಪ್ತಿ ಸಮರ್ಥನವನ್ನೂ,

೧೮ನೇ ಅನ್ಯಾಧಿಕರಣದಲ್ಲಿ ಕರ್ಮಿಗೆ ವ್ರೀಹ್ಯಾದಿಭಾವನಿಷೇಧವನ್ನೂ,

೧೯ನೇ ರೇತೋಧಿಕರಣದಲ್ಲಿ ಸ್ವರ್ಗದಿಂದ ಇಳಿದವನಿಗೆ ಪಿತೃಪ್ರವೇಶಸಮರ್ಥನವನ್ನೂ,

೨೦ನೇ ಯೋನ್ಯಧಿಕರಣದಲ್ಲಿ ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿ ಶರೀರ ಪ್ರಾಪ್ತಿಸಮರ್ಥನವನ್ನೂ ಮಾಡಿದರು.

ತಥಾಚ '**ಅಥಾತೋ ಬ್ರಹ್ಮ ಜಿಜ್ಞಾಸಾ**' ಎನ್ನುವ ಸೂತ್ರದಲ್ಲಿ ಮುಕ್ತಿಗಾಗಿ ಬ್ರಹ್ಮ ವಿಚಾರವನ್ನು ಮಾಡಬೇಕು ಎಂದು ಹೇಳಿಯದೆ. ಆದರಲ್ಲಿ ಬ್ರಹ್ಮನಿಗೆ ಲಕ್ಷಣವೇನೆನ್ನುವ ಶಂಕೆಯನ್ನು ೨ನೇ ಸೂತ್ರದಿಂದ ಲಕ್ಷಣವನ್ನು ಹೇಳಿ ೧ನೇ ಅಧ್ಯಾಯದಿಂದ ಸ್ವರೂಪಭೂತವಾದ ಲಕ್ಷಣವನ್ನು ಸಮರ್ಥಿಸಿಕೊಂಡು ಪರಿಹರಿಸಿದರು. ಆ ಮೇಲೆ ಪ್ರಾಪ್ತವಾದ ವಿರೋಧಶಂಕೆ ಯನ್ನು ೨ನೇ ಅಧ್ಯಾಯದಿಂದ ನಿರಾಕರಿಸಿದರು. ಆ ಮೇಲೆ ಅಂತಹ ಬ್ರಹ್ಮಪ್ರಾಪ್ತಿರೂಪ ಮೋಕ್ಷಕ್ಕಾಗಿ ತಾನು ಮಾಡತಕ್ಕದ್ದು ಏನಿದೆ ಎಂದು ಶಂಕೆಯು ಬಂದರೆ ಅದನ್ನು ನಿವಾರಣ ಮಾಡುವುದಕ್ಕಾಗಿ ಅಥಪದ—ಜಿಜ್ಞಾಸಾಪದಗಳಿಂದ ಸೂಚಿತಗಳಾದ ಮುಕ್ತಿಸಾಧನಗಳಾದ ವೈರಾಗ್ಯ-ಭಕ್ತಿ-ಉಪಾಸನಾ-ಜ್ಞಾನಗಳನ್ನು ವಿಚಾರಮಾಡುವುದಕ್ಕಾಗಿ ಈ ಅಧ್ಯಾಯವು ಪ್ರವೃತ್ತ ವಾದುದು. ವೈರಾಗ್ಯವೆಂದರೆ—ವಿಷ್ಣುಲೋಕೇತರಗಳಲ್ಲಿ ಅಸಾರಅನಿತ್ಯತ್ವ ಜ್ಞಾನಪೂರ್ವಕವಾಗಿ ಅವುಗಳಲ್ಲಿಯೂ, ಅವುಗಳ ಸಾಧನಗಳಲ್ಲಿಯೂ ಅನುರಾಗವಿಲ್ಲದಿರುವಿಕೆಯು. ಅಂತಹ ವೈರಾಗ್ಯ ಹುಟ್ಟುವುದಕ್ಕಾಗಿ ಪರಲೋಕಗಮನ, ಆಗಮನ, ಸ್ವರ್ಗನರಕ ಗರ್ಭವಾಸಾದಿ ದುಃಖಸಮರ್ಥನವನ್ನು ಈ ವೈರಾಗ್ಯಪಾದದಲ್ಲಿ ಮಾಡಿದರು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ**
**ಪ್ರಥಮಃ ಪಾದಃ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಬ್ರಹ್ಮಸೂತ್ರಾನು ವ್ಯಾಖ್ಯಾನದಲ್ಲಿ ಮೂರನೇ ಅಧ್ಯಾಯದ ಒಂದನೇ ಪಾದವು ಸಮಾಪ್ತವಾಯಿತು. ॥ ೫ ॥
॥ ಸೂ. ೨೯ ॥ ಅಧಿ. ೨೦ ॥ ೩ ॥ ೧ ॥

**ಇತಿ ಶ್ರೀಮತ್ಪೂರ್ಣಪ್ರಮತಿ ಭಗವತ್ಪಾದಸುಕೃತೇ**
**ರನುವ್ಯಾಖ್ಯಾನಸ್ಯ ಪ್ರಗುಣ ಜಯತೀರ್ಥಾಖ್ಯಯತಿನಾ ।**
**ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ**
**ತೃತೀಯೋಽಧ್ಯಾಯೋಽಯಂ ಪ್ರಥಮಚರಣಃ ಪರ್ಯವಸಿತಃ ॥**

**ಪ್ರಥಮಪಾದವು ಸಮಾಪ್ತವಾಯಿತು.**

---

|| ಶ್ರೀಃ ||

# ಶ್ರೀಮದನುವ್ಯಾಖ್ಯಾನವು.



## ಮೂರನೇ ಅಧ್ಯಾಯವು.

### ಎರಡನೇ ಪಾದವು.

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ || ಹರಿಃ ಓಂ ||

ಮೂ || ಪಶ್ಚಾದದೃಷ್ಟ್ಯವಿಜ್ಞಾನ ಕಾಲದುಃಖ ಪೃಥಗ್ಭವಾಃ |
ಸ್ಥಾನಭೇದೋ ವಿರುದ್ಧತ್ವಂ ನ್ಯಾಯಸಾಮ್ಯಂ ಸತೋಭವಃ || ೧ ||
ಗುಣಸಾಮ್ಯಮಯೋಗಶ್ಚ ತರ್ಕಬಾಧೋ ವಿಲೋಮತಾ |
ನಾನಾಭಾವಃ ಪ್ರಲೋಭಶ್ಚ ಯುಕ್ತಯಃ ಪೂರ್ವಪಕ್ಷಗಾಃ || ೨ ||
ಅಶಕ್ಯಕರ್ತೃತಾಶಕ್ತಿಃ ಸ್ವತೋಬೋಧಸ್ತಥೈ(ದೇ)ವ ಚ |
ಅಮಾನಕ್ಲಪ್ತಿ ಸನ್ಮಾನ ವ್ಯವಸ್ಥಾತ್ಯಲ್ಪತಾಭವಾಃ || ೩ ||
ವಿಶೇಷದೃಷ್ಟಿವಾಕ್ಯೇ ಚ ಪುಂಶಕ್ತಿಃ ಸುನಿದರ್ಶನಂ |
ಅಲೌಕಿಕತ್ವಮಾಧಿಕ್ಯಂ ಸ್ವಾತಂತ್ರ್ಯಂ ನಿರ್ಣಯಪ್ರಮಾಃ || ೪ ||

ಅ || (1) ಪಶ್ಚಾದದೃಷ್ಟ್ಯವಿಜ್ಞಾನ ಕಾಲದುಃಖ ಪೃಥಗ್ಭವಾಃ, ಪಶ್ಚಾದದೃಷ್ಟಿ = (ಸ್ವಾಪ್ನಾರ್ಥಕ್ಕೆ) ಎಚ್ಚರಿಕೆಯಾದ ಮೇಲೆ ಕಾಣದಿರುವಿಕೆಯು, (2) ಅಜ್ಞಾನ = ಬಾಹ್ಯ ಜ್ಞಾನವಿಲ್ಲದಿರುವಿಕೆಯು, (3) ಕಾಲ = ಕಾಲವು, (4) ದುಃಖ = ದುಃಖವು, (5, 6, 7) ಪೃಥಗ್ಭವಾಃ=ಪ್ರತೇಕವಾಗಿ ಕಾರಣವಿರುವಿಕೆಯು ಇವುಗಳು, (8) ಸ್ಥಾನಭೇದಃ=ಸುರಾಸುರ ನರಾದಿಶರೀರಗಳಿಗೆ ಭೇದವು, (9) ವಿರುದ್ಧತ್ವಂ = ರೂಪವತ್ವ, ಅರೂಪವತ್ವ ವಚನಗಳಿಗೆ ವಿರೋಧವು, (10) ನ್ಯಾಯಸಾಮ್ಯಂ=ಪರಮಾತ್ಮನಿಗೆ ಅಚೇತನತ್ವನ್ಯಾಯದಿಂದ ಸಾಮ್ಯವು, (11) ಸತೋಭವಃ = ಇದ್ದುದಕ್ಕೆ ಅಭಿವ್ಯಕ್ತಿಯು, (12) ಗುಣಸಾಮ್ಯಂ = ಮುಕ್ತತ್ವಾದಿ ಗುಣದಿಂದ ಸಾಮ್ಯವು, (13) ಅಯೋಗಃ = ಅಸಂಹಾರದಿಂದ ವ್ಯತಿರಿಕ್ತವಾದ ರಕ್ಷಣೆಯು ಕೊಡದಿರುವುದು, (14) ತರ್ಕಬಾಧಃ = ಅವ್ಯಕ್ತಸ್ವಭಾವವುಳ್ಳ ಈಶ್ವರನಿಗೆ ದರ್ಶನವಾದರೆ ತರ್ಕಬಾಧವು, (15, 16) ವಿಲೋಮತಾ=ವಿರೋಧವು, (17, 18, 19) ನಾನಾಭಾವಃ= ಅನೇಕಪ್ರಕಾರವಿರುಕೆಯು, (20) ಪ್ರಲೋಭಶ್ಚ=ಪ್ರಲೋಭನ (ವಂಚನೆ)ಮಾತ್ರವು, (ಈ) ಯುಕ್ತಯಃ = ಯುಕ್ತಿಗಳು, ಪೂರ್ವಪಕ್ಷಗಾಃ = ಪೂರ್ವಪಕ್ಷದಲ್ಲಿರತಕ್ಕವುಗಳು. (1) ಅಶಕ್ಯಕರ್ತೃತಾಶ್ಶಕ್ತಿಃ=ಅಶಕ್ಯವಾದುದನ್ನು ಸೃಷ್ಟಿಸತಕ್ಕ ಶಕ್ತಿಯು, (2) ಸ್ವತೋಬೋಧಃ= ಸ್ವತಂತ್ರವಾಗಿ ಪ್ರಬೋಧವಾಗದಿರುವಿಕೆಯು, (3) ತಥೈ (ದೆ)ವ ಚ=ಹಾಗೆಯೇ ಕಾಲಕ್ಕೆ ಅಚೇತನತ್ವವು, ಅಮಾನಕ್ಲಪ್ತಿಸನ್ಮಾನವ್ಯವಸ್ಥಾತ್ಯಲ್ಪತಾಭವಾಃ, (4) ಅಮಾನಕ್ಲಪ್ತಿ=ಪ್ರಮಾಣಕ್ಕೆ ನಾಡಿಯಲ್ಲಿರತಕ್ಕ ಪರಮಾತ್ಮನಲ್ಲಿ ಸುಪ್ತಿಯು ಎನ್ನುವುದು ಯಾವುದೋ ಅದು

ಕಾರಣವಲ್ಲ. ಅಂದರೆ— ಅದನ್ನು ಅಂಗೀಕರಿಸದೆ ಇರುವುದು. (5) ಸನ್ಮಾನ = ಯುಕ್ತಿರೂಪವಾದ ಸಮ್ಯಕ್ ಪ್ರಮಾಣವು, (6) ಸನ್ಮಾನ = ಶ್ರುತಿರೂಪಪ್ರಮಾಣವು, (7) ಸನ್ಮಾನ=ಪರಿಶೇಷಪ್ರಮಾಣವು, (8) ವ್ಯವಸ್ಥಾ = ಭೇದಶ್ರುತಿಯು ಸ್ಥಾನಭೇದವಿಷಯಕವು ಎಂದೇ ವ್ಯವಸ್ಥೆಯು. (9) ವ್ಯವಸ್ಥಾ = ಪ್ರಾಕೃತರೂಪಾಭಾವಪ್ರತಿಪಾದಕವು ಎನ್ನುವಪ್ರಕಾರ ವ್ಯವಸ್ಥೆಯು, (10) ಅತ್ಯಲ್ಪತಾ = ಜೀವನಿಗೆ ಅಲ್ಪಗುಣಗಳಿರುವಿಕೆಯು, (11) ಭವಾಃ=ಅನಾದಿಲಾಗ್ಯಾತು ಸಂಸಾರವಿರುವಿಕೆಯು ಇವುಗಳು, ವಿಶೇಷದೃಷ್ಟಿವಾಕ್ಯೇಚ, (12) ವಿಶೇಷದೃಷ್ಟಿ = ಶ್ರುತಿಯಿಂದ ಸಾಧ್ಯಸಾಧನ ತಾರತಮ್ಯರೂಪವಾದ ವಿಶೇಷದ ತೋರುವಿಕೆಯು, (13) ವಾಕ್ಯೇಚ=ವಿಶೇಷವಾಕ್ಯವೂ ಇವುಗಳು. (14) ಪುಂ ಶಕ್ತಿಃ= ವಿಷ್ಣುವಿನ ಶಕ್ತಿಯು. (15) ಸುನಿದರ್ಶನಂ=ಕಾಲ ಮೊದಲಾದುದು ಶೋಭನದೃಷ್ಟಾಂತವು. (16) ಅಲೌಕಿಕತ್ವಂ=ಶಬ್ದಗಳಲ್ಲಿ ಅಲೌಕಿಕತ್ವವೆಂದರೆ—ವೈದಿಕತ್ವವು. ಅರ್ಥಗಳಲ್ಲಿ ಅಲೌಕಿಕತ್ವವೆಂದರೆ—ಅಪ್ರಾಕೃತತ್ವವು. (17) ಆಧಿಕ್ಯಂ=ಬಿಂಬಭೂತನಾದ ಶ್ರೀ ಹರಿಗೆ ಐಶ್ವರ್ಯರೂಪವಾದ ಆಧಿಕ್ಯವು. ಬ್ರಹ್ಮಾದಿ ಸ್ಥಾನಗಳಿಗೆ ಭಕ್ತ್ಯಾದಿಗುಣಗಳಿಂದ ಆಧಿಕ್ಯವು. (18) ಆಧಿಕ್ಯಂ=ವಿಷ್ಣುವಿಗೆ ನಿರ್ದೋಷತ್ವಾದ್ಯಾಧಿಕ್ಯವು. (19) ಸ್ವಾತಂತ್ರ್ಯಂ = ಕ್ರೀಡೆಯಲ್ಲಿಯೂ ಶ್ರೀ ಹರಿಗೆ ಸ್ವಾತಂತ್ರ್ಯವು ಅವಗತವಾಗುತ್ತದೆ. (20) ಸ್ವಾತಂತ್ರ್ಯಂ = ಈಶ್ವರನಿಗೆ ಕರ್ಮಾಧೀನತ್ವವಿಲ್ಲದಿರುವುದರಿಂದ ಫಲವನ್ನು ಕೊಡುವುದರಲ್ಲಿ ಈಶ್ವರನಿಗೇನೆ ಮುಖ್ಯ ಕರ್ತೃತ್ವವು (ಇವುಗಳು) ನಿರ್ಣಯಪ್ರಮಾಃ = ನಿಶ್ಚಯಜ್ಞಾನವನ್ನು ಹುಟ್ಟಿಸತಕ್ಕ ಸಿದ್ಧಾಂತ ಯುಕ್ತಿಗಳು.

ತಾ || ವೈರಾಗ್ಯಸಾಧ್ಯವಾದ, ಉಪಾಸನೆಗೆ ಸಾಧನವಾದ, ಭಕ್ತಿಯು ಪುರುಷಪ್ರಯತ್ನಕ್ಕೆ ವಿಷಯವಾಗದಿರುವುದರಿಂದ ವಿಧೇಯವಾಗದಿರುವವಪ್ರಯುಕ್ತ ಭಕ್ತಿಯು ಹುಟ್ಟುವುದಕ್ಕಾಗಿ ಶ್ರೀ ಹರಿಯ ಮಾಹಾತ್ಮ್ಯವನ್ನು ಪ್ರತಿಪಾದಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ.

(1) ೧ನೇ ಸಂಧ್ಯಾಧಿಕರಣದಲ್ಲಿ ವಾದಿಗಳ ವಿವಾದದಿಂದ ಸ್ವಪ್ನವು ಭಗವಂತನ ಅಧೀನವೋ ಅಲ್ಲವೋ ಎಂದು ಸಂದೇಹವು ಬಂದರೆ ಅಲ್ಲವೆಂದು ಪೂರ್ವಪಕ್ಷವು. ಭಗವಂತನ ಅಧೀನವೆಂದು ಸಿದ್ಧಾಂತವು. 'ಪಶ್ಚಾದದೃಷ್ಟಿ' ಎಂದು ಪೂರ್ವಪಕ್ಷನ್ಯಾಯವು. 'ಅಶಕ್ಯಕರ್ತೃತಾಶಕ್ತಿಃ' ಎಂದು ಸಿದ್ಧಾಂತನ್ಯಾಯವು. ಅಂದರೆ— ಸ್ವಪ್ನದಲ್ಲಿ ತೋರತಕ್ಕ ಗಜ ಅಶ್ವಮೊದಲಾದವುಗಳು ಅಸತ್ಯಗಳಾಗಿರುವುದರಿಂದ ಪರಮೇಶ್ವರನ ಅಧೀನಗಳೆನ್ನುವುದು ಕೂಡಲಾರದು. ಇವುಗಳು ಅನಾದಿನಿತ್ಯಗಳೆಂದು ಹೇಳಕೂಡದು ಏಕೆಂದರೆ— ಸ್ವಪ್ನಾವಸ್ಥೆಗಿಂತ ಮೊದಲೂ ಮೇಲೆಯೂ ತೋರಬೇಕಾಗುವುದು. 'ಸ್ವಾಪ್ನಾಃ ಪದಾರ್ಥಾಃ ನಾನಾದಿನಿತ್ಯಾಃ ಮಧ್ಯಮಪರಿಮಾಣೋಪೇತತಯಾ ದೃಶ್ಯಮಾನತ್ವಾತ್ ಘಟವತ್' ಎನ್ನುವ ಅನುಮಾನವಿರೋಧವೂ ಬರುತ್ತದೆ. ಸ್ವಾಪ್ನ ಪದಾರ್ಥಗಳು ಉತ್ಪತ್ತಿ ವಿನಾಶವುಳ್ಳವುಗಳೂ ಅಲ್ಲ, ಹಾಗೆ ಇಟ್ಟುಕೊಂಡರೆ ಘಟಾದಿಗಳಂತೆಯೇ ಮೊದಲೂ ಮೇಲೆಯೂ ತೋರಬೇಕಾಗುವುದು. ಏವಂಚ ಸ್ವಪ್ನಕಾಲದಲ್ಲಿ ತೋರುವ ಪದಾರ್ಥಗಳು ಅಸತ್ತಾಗಿರುವುದರಿಂದ ಅಸತ್ಪದಾರ್ಥಕ್ಕೆ ಈಶ್ವರಾಧೀನತ್ವವು ಕೂಡದಿರುವುದರಿಂದ ಶ್ರೀಹರಿಗೆ ಮಹಾಮಹಿಮೆಯು ಕೂಡಲಾರದು. ಎಂದರೆ— ಹೀಗೆ ಹೇಳಕೂಡದು. ಈಶ್ವರನಿಗೆ ಅಶಕ್ಯವಾದುದನ್ನು ಸೃಷ್ಟಿಸತಕ್ಕ ಅಪರಿಮಿತಶಕ್ತಿಯಿದೆ. ತಥಾಚ ಈಶ್ವರನು ಅನಾದಿಲಾಗಾಯಿತು ಮನಸ್ಸಿನಲ್ಲಿರತಕ್ಕ ಪೂರ್ವಾನುಭವದಿಂದ ಉಪಚಿತಗಳಾದ ಸಂಸ್ಕಾರಗಳನ್ನು ಉಪಾದಾನ ಕಾರಣವನ್ನಾಗಿಟ್ಟುಕೊಂಡು, ನಿಮಿತ್ತಕಾರಣವಾದ ತನ್ನ ಇಚ್ಛಾಮಾತ್ರದಿಂದ ಸ್ವಾಪ್ನ-ಗಜ-

ಅಶ್ವವೊದಲಾದವುಗಳನ್ನು ಸೃಷ್ಟಿಮಾಡಿ ತೋರಿಸುತ್ತಾನೆ. ಅಂದರೆ ಅವುಗಳ ಜ್ಞಾನವನ್ನು ಹುಟ್ಟಿಸುತ್ತಾನೆ. ಹಾಗೆಯೇ ಜ್ಞಾನವನ್ನು ಅಡಗಿಸುತ್ತಾನೆ. ಇದು ಸ್ವಾಪ್ನಪದಾರ್ಥವೇ. ಜಾಗರದಲ್ಲಿ ಅನುಭೂತವಾದುದಲ್ಲ ಎಂದು ಅನುಭವವಿದ್ದುದರಿಂದ ಜಾಗ್ರತ್ವ (ಜಾಗ್ರದವಸ್ಥೆಯಲ್ಲಿ ಅನುಭೂತಪದಾರ್ಥಗಳಿಂದ ಏಕತ್ವವು) ಪ್ರತೀತಿಯೇ ಭ್ರಾಂತಿಯು. ಇದು ಗಜವಲ್ಲ ಎಂದು ಬಾಧವಿಲ್ಲದಿರುವುದರಿಂದ ಸ್ವಾಪ್ನಪದಾರ್ಥಸ್ವರೂಪ ಪ್ರತೀತಿಯು ಭ್ರಾಂತಿಯಲ್ಲ. ಜಾಗ್ರತ್ವ ಪ್ರತೀತಿಯು ಭ್ರಾಂತಿಯಾದುದರಿಂದ ಶ್ರುತ್ಯಾದಿಗಳು ಜಾಗ್ರತ್ವಪ್ರತೀತಿಗೆ ಮಾತ್ರ ಭ್ರಾಂತಿತ್ವವನ್ನು ಪ್ರತಿಪಾದಿಸುತ್ತವೆ. ಏವಂಚ ಈಶ್ವರನಿಗೆ ಇತರರಿಗೆ ಅಶಕ್ಯವಾದುದನ್ನು ಸೃಷ್ಟಿಸುವ ವಿಷಯದಲ್ಲಿ ಶಕ್ತಿಯಿದ್ದಪ್ರಯುಕ್ತ ಸ್ವಾಪ್ನ ಪದಾರ್ಥಗಳು ಈಶ್ವರನಿಂದ ಸೃಷ್ಟಿಸಲ್ಪಟ್ಟಪ್ರಯುಕ್ತ ಈಶ್ವರಾಧೀನಗಳಾಗಿರುವುದರಿಂದ ಈಶ್ವರನಿಗೆ ಮಹಾ ಮಾಹಾತ್ಮವು ಯುಕ್ತವು. (2) ೨ನೇ ಪರಾಭಿಧ್ಯಾನಾಧಿಕರಣದಲ್ಲಿ ಸರ್ವವೂ ಭಗವಂತನ ಅಧೀನವೆಂದು ಹೇಳಿರುವುದರಿಂದಲೂ ಸ್ವಪ್ನ ತಿರೋಭಾವವು ಭಗವಂತನ ಅಧೀನವೋ ಅಲ್ಲವೋ ಎಂದು ಸಂದೇಹವು ಬಂದರೆ ಅಲ್ಲವೆಂದು ಪೂರ್ವಪಕ್ಷವು. ಭಗವಂತನ ಅಧೀನವೆಂದು ಸಿದ್ಧಾಂತವು. ಅದರಲ್ಲಿ ಅವಿಜ್ಞಾನವೆನ್ನುವುದು ಪೂರ್ವಪಕ್ಷನ್ಯಾಯವು 'ಸ್ವತೋಽಬೋಧಃ' ಎಂದು ಸಿದ್ಧಾಂತನ್ಯಾಯವು. ಅಂದರೆಪದಾರ್ಥ ಜ್ಞಾನವಿಲ್ಲದಿರುವುದರಿಂದಲೇ ಸ್ವಪ್ನಪ್ರತೀತಿಯಾಗುತ್ತದೆ. ಆದಕಾರಣ ಜ್ಞಾನಶಕ್ತಿಯಿಂದಲೇ ಸ್ವಪ್ನ ತಿರೋಭಾವವಲ್ಲ. ಏವಂಚ ಶ್ರೀ ಹರಿಗೆ ಮಹಾ ಮಾಹಾತ್ಮ್ಯವು ಇಲ್ಲ ಎಂದರೆ— ಹೀಗೆ ಹೇಳಕೂಡದು. ಪ್ರಬೋಧಿಸಲಿಕ್ಕೆ ಜೀವನಿಗೆ ಸ್ವಾತಂತ್ರ್ಯವಿಲ್ಲ. ಸ್ವಪ್ನಾದಿಗಳಿಗೆ ಅಜ್ಞಾನಾದಿ ಮಾತ್ರವೇ ನಿಮಿತ್ತವು ಎನ್ನುವಲ್ಲಿ ಪ್ರಮಾಣವೇ ಇಲ್ಲ. ಮತ್ತು ಸರ್ವವೂ ಶ್ರೀಹರಿಯು ಅಧೀನದಲ್ಲಿಯೇ ಇರುವುದೆನ್ನುವಲ್ಲಿ ಪ್ರಮಾಣವೂ ಇದೆ. ಏವಂ ಚ ಜೀವನಿಗೆ ಸ್ವತಂತ್ರವಾಗಿ ಪ್ರಬೋಧವಾಗದಿರುವುದರಿಂದ ಜ್ಞಾನಾದಿಗಳು ಜಡಗಳಾಗಿರುವುದರಿಂದ ಅವುಗಳಿಗೆ ಸುತರಾಂ ಸ್ವಾತಂತ್ರ್ಯವು ಕೂಡದಿರುವುದರಿಂದ ಈಶ್ವರನೇ ಸ್ವಪ್ನತಿರೋಧಾನವನ್ನು ಮಾಡುವನು. (3) ೩ನೇ ದೇಹಯೋಗಾಧಿಕರಣದಲ್ಲಿ ಹಿಂದೆ ಹೇಳಿದ ಪ್ರಕಾರ ಜಾಗ್ರದವಸ್ಥೆಯು ಈಶ್ವರಾಧೀನವೋ ಅಲ್ಲವೋ ಎಂದು ಸಂದೇಹವು ಬಂದರೆ— ಅಲ್ಲವೆಂದು ಪೂರ್ವಪಕ್ಷವು. ಈಶ್ವರಾಧೀನವೇ ಎಂದು ಸಿದ್ಧಾಂತವು. ಅದರಲ್ಲಿ ಕಾಲಃ ಎಂದು ಪೂರ್ವಪಕ್ಷನ್ಯಾಯವು. ತಥೈವ ವ (ತದೇವ ಚ) ಎಂದು ಸಿದ್ಧಾಂತನ್ಯಾಯವು ಅಂದರೆ ಕಾಲವನ್ನು ಅಪೇಕ್ಷಿಸಿ ಜಾಗರಣವು ಉಂಟಾಗುವುದರಿಂದ ಈಶ್ವನಿಗೆ ಮಾಹಾಮಾಹಾತ್ಮ್ಯವು ಇಲ್ಲವೆಂದರೆ ಹೀಗೆ ಹೇಳಕೂಡದು. ಕಾಲವು ಅಚೇತನವಾಗಿರುವುದರಿಂದ ಅಸ್ವತಂತ್ರವಾದ ಪ್ರಯುಕ್ತವೂ ಚೇತನಾಂತರಕ್ಕೆ ಸ್ವಾತಂತ್ರ್ಯವಿಲ್ಲದಿರುವ ಪ್ರಯುಕ್ತವೂ, ಈಶ್ವರನಿಗೇನೇ ಜಾಗ್ರದವಸ್ಥಾ ಪ್ರೇರಕತ್ವವು. ಆದಪ್ರಯುಕ್ತ ಆತನಿಗೆ ಮಹಾ ಮಾಹಾತ್ಮ್ಯವು ಯುಕ್ತವು. (4) ೪ನೇ ತದಭಾವಾಧಿಕರಣದಲ್ಲಿ **'ಸತಾ ಸೋಮ್ಯ ತದಾ ಸಂಪನ್ನೋ ಭವತಿ' 'ಯತ್ರೈತತ್ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ನಾಡೀಷು ಸುಪ್ತೋ ಭವತಿ'** ಎನ್ನುವ ಶ್ರುತಿಗಳಿಂದ ಸುಪ್ತಿಯು ಶ್ರೀ ಹರಿಯಲ್ಲಿಯೋ, ನಾಡಿಗಳಲ್ಲಿಯೋ ಎಂದು ಸಂದೇಹವು ಬಂದರೆ, ಶ್ರೀಹರಿಯಲ್ಲಿಯೇ ನಾಡಿಗಳಲ್ಲಿ ಅಲ್ಲ. ಎಂದು ಪೂರ್ವಪಕ್ಷವು. ನಾಡಿಯಲ್ಲಿರತಕ್ಕ ಪರಮಾತ್ಮನಲ್ಲಿ ಎಂದು ಸಿದ್ಧಾಂತವು. ಅದರಲ್ಲಿ ದುಃಖಂ ಎಂದು ಪೂರ್ವಪಕ್ಷನ್ಯಾಯವು. ಅಮಾನಕ್ಲೃಪ್ತಿಃ ಎಂದು ಸಿದ್ಧಾಂತನ್ಯಾಯವು. ಅಂದರೆ ಜಾಗ್ರತ್ಸ್ವಪ್ನಗಳು ಶ್ರೀಪರಮಾತ್ಮನಿಂದ ಬೇರೆಕಡೆ ಇರುವುದಾದರೆ ದುಃಖಿತ್ವವು ತೋರುವುದರಿಂದ ನಾಡಿಗಳಲ್ಲಿ ಸುಪ್ತಿಯು ಆಗುವುದಿಲ್ಲ. ಎಂದರೆ ಹೀಗೆ ಹೇಳಕೂಡದು. ನಾಡಿಯಲ್ಲಿರತಕ್ಕ ಪರಮಾತ್ಮನಲ್ಲಿ ಸುಪ್ತಿಯನ್ನು ಅಂಗೀಕರಿಸಿರುವುದರಿಂದ ನಾಡಿ

ಗಳಲ್ಲಿಯೂ, ಪರಮಾತ್ಮನಲ್ಲಿಯೂ ಸುಪ್ತಿಯೆಂದು ಎರಡನ್ನೂ ಸ್ವೀಕರಿಸಿ ಪ್ರಮಾಣಭೂತವಾದ **'ಸತಾ ಸೋಮ್ಯ' 'ನಾಡೀಷು ಸುಪ್ತಃ'** ಎನ್ನುವ ಎರಡು ಶ್ರುತಿಗಳಿಗೂ ವ್ಯವಸ್ಥೆಯು ಕೂಡಿದಾಗ್ಯೂ ಉದಾಹೃತಿರೂಪವಾದ ಮಾನಕ್ಕೆ ನಾಡಿಗಳಲ್ಲಿರತಕ್ಕ ಪರಮಾತ್ಮನಲ್ಲಿ ಸುಪ್ತಿಯೆಂದು ಯಾವುದು ಕ್ಲೃಪ್ತಿಯೋ ಅದಕ್ಕೆ ಕಾರಣವಲ್ಲವೆಂದು ಇಟ್ಟುಕೊಂಡು ಅದನ್ನು ಅಂಗೀಕರಿಸದಿದ್ದರೆ ಸರ್ವತ್ರ ಪ್ರಮಾಣದಿಂದ ಪ್ರಮೇಯ ವ್ಯವಸ್ಥಿತ್ಯಭಾವರೂಪವಾದ ದೋಷದ್ವೆಶಿಯಿಂದ ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದುದನ್ನೂ ಪರಿತ್ಯಾಗಮಾಡಬೇಕಾಗುವುದು. ಏವಂಚ ಪರಮಾತ್ಮನಲ್ಲಿಯೇ ಸುಪ್ತಿಯನ್ನು ಅಂಗೀಕರಿಸಿದರೆ ಮಾನಕ್ಲೃಪ್ತ್ಯಕಾರಣವು ಪ್ರಸಕ್ತವಾಗುವುದರಿಂದ ನಾಡಿಯಲ್ಲಿರತಕ್ಕ ಶ್ರೀಹರಿಯಲ್ಲಿಯೇ ಸುಪ್ತಿಯು. ಆದಕಾರಣ ಆತನಿಗೆ ಮಾಹಾತ್ಮ್ಯವು ಯುಕ್ತವು. (5) ೫ನೇ ಪ್ರಬೋಧಾಧಿಕರಣದಲ್ಲಿ, ಸರ್ವವೂ ಭಗವದಧೀನವೆಂದು ಹೇಳಿರುವುದರಿಂದಲೂ, ಸುಪ್ತಿಪ್ರಬೋಧವು (ನಿದ್ರೆಯಿಂದ ಎಚ್ಚರಿಕೆಯು) ಭಗವದಧೀನವೆನ್ನುವ ವಿಶೇಷ ಉಕ್ತಿಯಿಲ್ಲದಿರುವುದರಿಂದಲೂ ಸುಪ್ತಿಪ್ರಬೋಧವು ಭಗವದಧೀನವೋ, ಅಲ್ಲವೋ ಎಂದು ಸಂದೇಹವು ಬಂದರೆ— ಕೇವಲ ಈಶ್ವರಾಧೀನವಲ್ಲವೆಂದು ಪೂರ್ವಪಕ್ಷವು. ಕೇವಲ ಈಶ್ವರಾಧೀನವೆಂದು ಸಿದ್ಧಾಂತವು. ಅದರಲ್ಲಿ ಪೃಥಗ್ಭವಃ ಎಂದು ಪೂರ್ವಪಕ್ಷ ನ್ಯಾಯವು. 'ಸನ್ಮಾನಂ' ಎಂದು ಸಿದ್ಧಾಂತ ನ್ಯಾಯವು. ಅಂದರೆ ಎಚ್ಚರಿಗೆಯಾಗಲಿಕ್ಕೆ ಭೇರೀತಾಡನ ಮೊದಲಾದ ಬೇರೆ ಕಾರಣವೂ ಇದ್ದುದರಿಂದ ಆತನಿಗೆ ಮಹಾಮಾಹಾತ್ಮ್ಯವಿಲ್ಲ ಎಂದರೆ— ಹೀಗೆ ಹೇಳಕೂಡದು. ಪ್ರಬೋಧವನ್ನು ಈಶನೇ ಮಾಡುವುದೆನ್ನುವ ವಿಷಯದಲ್ಲಿ **'ನ ಋತೇ ತ್ವತ್ಕ್ರಿಯತೇ ಕಿಂಚನ'** ಎನ್ನುವ ಸ್ಪಷ್ಟಾರ್ಥವುಳ್ಳ ಶ್ರುತಿರೂಪಪ್ರಮಾಣವಿದೆ. ಏವಂಚ ಶ್ರುತ್ಯಾದಿರೂಪ ಪ್ರಮಾಣದ್ವೆಶಿಯಿಂದ ಈಶ್ವರನೇ ಸುಪ್ತರನ್ನು ಎಚ್ಚರಿಸುವನು. ಆದುದರಿಂದ ಶ್ರೀ ಹರಿಗೆ ಮಹಾಮಾಹಾತ್ಮ್ಯವು ಯುಕ್ತವು. (6) ೬ನೇ ಕರ್ಮಾನುಸ್ಮೃತ್ಯಧಿಕರಣದಲ್ಲಿ ಅವಸ್ಥಾದಿಗಳಿಗೆ ಭಗವಂತನ ಅಧೀನತ್ವವನ್ನು ಪ್ರತಿಪಾದಿಸುವ ವಾಕ್ಯಕ್ಕೆ ಎರಡು ಪ್ರಕಾರವೂ ಅರ್ಥವು ಕೂಡುವುದರಿಂದ ಎಲ್ಲಾ ಜೀವರ ಎಲ್ಲಾ ಅವಸ್ಥೆಗಳೂ, ಭಗವಂತನ ಅಧೀನಗಳೋ, ಅಥವಾ ಕೆಲವು ಜೀವರ ಕೆಲವು ಅವಸ್ಥೆಗಳು ಮಾತ್ರ ಭಗವಂತನ ಅಧೀನಗಳೋ ಎಂದು ಸಂದೇಹವು ಬಂದರೆ ಕೆಲವು ಜೀವರ ಕೆಲವು ಅವಸ್ಥೆಗಳು ಮಾತ್ರ ಭಗವಂತನ ಅಧೀನಗಳೆಂದು ಪೂರ್ವಪಕ್ಷವು. ಸರ್ವ ಜೀವರ ಎಲ್ಲಾ ಅವಸ್ಥೆಗಳೂ, ಶ್ರೀ ಹರಿಯ ಅಧೀನಗಳೇ ಎಂದು ಸಿದ್ಧಾಂತವು. ಅದರಲ್ಲಿ ಪೃಥಗ್ಭವಃ ಎಂದು ಪೂರ್ವಪಕ್ಷ ನ್ಯಾಯವು. ಸನ್ಮಾನಂ ಎನ್ನುವುದೇ ಸಿದ್ಧಾಂತ ನ್ಯಾಯವು. ಅಂದರೆ— ರಾಜಾದಿಗಳಲ್ಲಿ ಪ್ರತ್ಯೇಕವಾಗಿಯೇ ಖಂಡರಾಜ್ಯಾಧಿಪತಿತ್ವವು ತೋರಿಬರುವುದರಿಂದ ದೇಶಕಾಲಾದಿಭೇದದಿಂದ ನಿಯಾಮಕಾಂತರರನ್ನು ಕಲ್ಪಿಸಲೇಬೇಕು. ತಥಾಚ 'ಈಶ್ವರಃ ಖಂಡೇಶೋ ಭವಿತುಮರ್ಹತಿ ಅಧಿಪತಿತ್ವಾತ್ ರಾಜಾದಿವತ್' ಎಂದು ರಾಜಾದಿಗಳಲ್ಲಿ ಪ್ರತ್ಯೇಕ ಪ್ರತ್ಯೇಕ ಅಧಿಪತಿತ್ವವು ಕಂಡಂತೆಯೇ ಈಶ್ವರರಿಗೂ ಅನೇಕತ್ವವು ಕೂಡುವುದರಿಂದ ಸರ್ವಾವಸ್ಥಾಪ್ರೇರಕತ್ವರೂಪವಾದ ಸರ್ವೈಶ್ವರ್ಯವಿಲ್ಲ ಎಂದರೆ ಹೀಗೆ ಹೇಳಕೂಡದು. **'ದೇಶಕಾಲವಿಶೇಷೇಽಪಿ ಸ್ವಪ್ನಾದೀನಾಂ ಸ ಏವ ಹಿ । ತಿರಸ್ಕರ್ತಾ ಚ ಕರ್ತಾ ಚ ನ ಖಂಡೇಶಃ ಸ ರಾಜವತ್'** ಖಂಡ ದೇಶಕ್ಕೆ ಅಧಿಪತಿಯಾದ ರಾಜನು ಕೆಲವು ವೇಳೆ ಕೆಲವು ಅವಸ್ಥೆಯಲ್ಲಿಯೇ ಕೆಲವರನ್ನು ಮಾತ್ರ ನಿಯಮಿಸುತ್ತಾನೆ. ಈಶ್ವರನು ಹಾಗೆ ಅಲ್ಲ. ಮತ್ತೆ ಆತನೊಬ್ಬನೇ ಸರ್ವದೇಶಗಳಲ್ಲಿಯೂ, ಸರ್ವಕಾಲಗಳಲ್ಲಿಯೂ, ಸ್ವಪ್ನಾದಿ ಎಲ್ಲಾ ಅವಸ್ಥೆಗಳನ್ನು ಉಂಟುಮಾಡುವವನು ಮತ್ತು ತಿರಸ್ಕರಿಸುವವನು ಎನ್ನುವ ಶ್ರುತಿರೂಪವಾದ ಪ್ರಮಾಣದ್ವೆಶಿಯಿಂದ ಈಶ್ವರನಿಗೇನೇ ಸರ್ವಾವಸ್ಥಾಪ್ರೇರಕತ್ವವು. ಆದಕಾರಣ ಆತನಿಗೆ ಮಹಾಮಾಹಾತ್ಮ್ಯವು ಯುಕ್ತವು..

(7) ೭ನೇ ಸಂಪತ್ತ್ಯಧಿಕರಣದಲ್ಲಿ ಎರಡು ವಿಧಗಳಾದ ಅವಸ್ಥೆಗಳು ಕಾಣುವುದರಿಂದ ಮೋಹಾವಸ್ಥೆಯು ಈಶ್ವರನಲ್ಲಿಯೋ ಬೇರೆ ಕಡೆಯಲ್ಲಿಯೋ ಎಂದು ಸಂದೇಹವು ಬಂದರೆ— ಈಶ್ವರನಲ್ಲಿಯೇ ಎಂದು ಪೂರ್ವಪಕ್ಷವು; ಈಶ್ವರನಲ್ಲಿ ಅರ್ಧಪ್ರಾಪ್ತಿಯೆಂದು ಸಿದ್ಧಾಂತವು. ಅದರಲ್ಲಿ 'ಪೃಥಗ್ಭವಃ' ಎಂದು ಪೂರ್ವಪಕ್ಷನ್ಯಾಯವು; 'ಸನ್ಮಾನಂ' ಎಂದು ಸಿದ್ಧಾಂತನ್ಯಾಯವು. ಅಂದರೆ— ಮೋಹವು (ಮೂರ್ಛಾವಸ್ಥೆಯು) ಜಾಗ್ರತ್ಸ್ವಪ್ನಗಳಿಂದ ಪ್ರತ್ಯೇಕವಾಗಿರುವುದರಿಂದ ಶ್ರೀ ಹರಿಯಲ್ಲಿ ಸಮಗ್ರಪ್ರವೇಶದಿಂದ ಸುಪ್ತಿಸಾಂಕರ್ಯವಾಗುವುದರಿಂದ ಮೋಹಾವಸ್ಥೆಯು ಪ್ರತ್ಯೇಕವೇ. ಆದಕಾರಣ ಶ್ರೀಹರಿಯು ಮೂರ್ಛಾವಸ್ಥೆಯನ್ನು ಪ್ರವರ್ತಿಸುವವನಲ್ಲ. ಎಂದರೆ— ಹೀಗೆ ಹೇಳಕೂಡದು. ಇಷ್ಟುಕಾಲತನಕ ನಾನು ದುಃಖವನ್ನು ಅನುಭವಿಸಿರುತ್ತೇನೆ ಎಂದು ಮೋಹಾವಸ್ಥೆಯಲ್ಲಿ ದುಃಖಾನುಸಂಧಾನವಿದ್ದುದರಿಂದ ಸುಪ್ತಿಯಲ್ಲಿ ಅದಕ್ಕೆ ಅಂತರ್ಭಾವವು ಕೂಡಲಾರದು. ಸುಪ್ತಿಯಲ್ಲಿ ದುಃಖಾನುಸಂಧಾನವೇ ಇಲ್ಲ. ಮೋಹಾವಸ್ಥೆಯಲ್ಲಿ ದುಃಖ ಆತ್ಮಕಾಲಗಳಿಂದ ಇತರಗಳಾದ ವಿಷಯಗಳು ಕಾಣದಿರುವುದರಿಂದ ಜಾಗ್ರದವಸ್ಥೆಯಲ್ಲಿಯೂ ಸುಷುಪ್ತ್ಯವಸ್ಥೆಯಲ್ಲಿಯೂ ಅಂತರ್ಭಾವವು ಕೂಡಲಾರದು. ತಥಾಚ 'ಮೋಹಃ ಪ್ರಸಿದ್ಧಾವಸ್ಥಾಭ್ಯಃ ಪೃಥಕ್ ಅನುಪಪನ್ನಾಂತರ್ಭಾವೇ ಸತ್ಯವಸ್ಥಾತ್ವಾತ್' ಎನ್ನುವಪರಿಶೇಷಾನುಮಾನದಿಂದ ಮೋಹಾವಸ್ಥೆಯು ಪ್ರತ್ಯೇಕವೇ. ಏವಂಚ ಪರಿಶೇಷಾಖ್ಯವಾದ ಸನ್ಮಾನದಿಂದ ಮೋಹಾವಸ್ಥೆಗೆ ಅರ್ಧಪ್ರಾಪ್ತಿತ್ವರೂಪವಾದ ಪ್ರತ್ಯೇಕ ಅವಸ್ಥಾತ್ವವು ತಿಳಿದುಬರುವುದರಿಂದ ಶ್ರೀ ಹರಿಗೆ ಮೋಹಾವಸ್ಥಾಪ್ರವರ್ತಕತ್ವವು ಯುಕ್ತವೇ. (8) ೮ನೇ ನಸ್ಥಾನತೋಽಪ್ಯಧಿಕರಣದಲ್ಲಿ ಅನೇಕ ಸ್ಥಾನಗಳಲ್ಲಿರತಕ್ಕ ಘಟಾದಿಗಳಿಗೆ ಭೇದವೂ, ಆಕಾಶಾದಿಗಳಿಗೆ ಅಭೇದವೂ ಕಂಡದರಿಂದ ಪ್ರತಿ ಶರೀರದಲ್ಲಿ ಜಾಗ್ರದಾದಿ ಸ್ಥಾನಗಳಲ್ಲಿ ಇರತಕ್ಕ ಈಶ್ವರನು ಪರಸ್ಪರ ಭಿನ್ನನೋ, ಅಭಿನ್ನನೋ ಎಂದು ಸಂಶಯವು ಬಂದರೆ— ಭಿನ್ನನೇ ಎಂದು ಪೂರ್ವಪಕ್ಷವು. ಅಭಿನ್ನನೇ ಎಂದು ಸಿದ್ಧಾಂತವು. ಅದರಲ್ಲಿ 'ಸ್ಥಾನಭೇದಃ' ಎನ್ನುವುದು ಪೂರ್ವಪಕ್ಷನ್ಯಾಯವು. 'ವ್ಯವಸ್ಥಾ' ಎನ್ನುವುದು ಸಿಂದ್ಧಾಂತ ನ್ಯಾಯವು. ಅಂದರೆ— ಸುರ-ಅಸುರ-ನರಾದಿ ಶರೀರಗಳಿಗೆ ದಕ್ಷಿಣಾಕ್ಷ್ಯಾದಿಗಳಿಗೂ ಭೇದವಿದ್ದುದರಿಂದ ಅಲ್ಲಿರತಕ್ಕ ವಿಷ್ಣುವಿಗೂ ಭೇದವು. ತಥಾಚ ಪ್ರತಿ ಶರೀರದಲ್ಲಿ ಜಾಗ್ರದಾದಿ ಸ್ಥಾನಗಳಲ್ಲಿರತಕ್ಕ ಪರಮಾತ್ಮನು ಪರಸ್ಪರ ಭಿನ್ನನು ಬೇರೆ ಬೇರೆ ಸ್ಥಾನಗಳಲ್ಲಿದ್ದ ಪ್ರಯುಕ್ತ ಘಟ-ಪಟಗಳಂತೆ. ಏವಂಚ ಸ್ಥಾನಭೇದದ್ದೆಶೆಯಿಂದ ಈಶ್ವರನಿಗೂ ಭೇದವಿದ್ದುದರಿಂದ ಭಿನ್ನಗಳಾದ ವಸ್ತುಗಳಿಗೆ ಗುಣಗಳಲ್ಲಿ ತಾರತಮ್ಯವು ಅನುಗ್ರಾಹ್ಯ ಅನುಗ್ರಾಹಕಭಾವವು ಕಂಡದರಿಂದ ಆ ಶ್ರೀಹರಿಗೆ ಮಹಾಮಾಹಾತ್ಮ್ಯವು ಇಲ್ಲ ಎಂದರೆ— ಹೀಗೆ ಹೇಳಕೂಡದು. **'ಅಯಮೇವ ಸಃ' 'ನೇಹ ನಾನಾಸ್ತಿ ಕಿಂಚನ'** ಇತ್ಯಾದಿ ಶ್ರುತಿಗಳ ಬಲದಿಂದ ಸ್ಥಾನಗಳಿಗೆ ಭೇದವು, ಶ್ರೀಹರಿಗೆ ಅಭೇದವು ಎಂದು ವ್ಯವಸ್ಥೆಯು ಕೂಡುತ್ತದೆ. ಏವಂಚ ಅಭೇದ ಶ್ರುತಿಯು ನಿರವಕಾಶವಾಗಿರುವುದರಿಂದ ಪ್ರಬಲವಾದ ಪ್ರಯುಕ್ತ ಅದನ್ನು ಅನುಸರಿಸಿ ಭೇದಶ್ರುತಿಗೆ ಸ್ಥಾನಭೇದವಿಷಯಕತ್ವವೇ ಎಂದು ವ್ಯವಸ್ಥೆಯು ಕೂಡುವುದರಿಂದ ಅನುಮಾನವು ಅಭೇದಶ್ರುತಿಯಿಂದ ಬಾಧಿತವಾದ ಪ್ರಯುಕ್ತ ವಿಷ್ಣುವಿಗೆ ಸ್ಥಾನಗಳಿಂದಲೂ ಭೇದವಿಲ್ಲದಿರುವುದರಿಂದ ಅನುಗ್ರಾಹ್ಯ-ಅನುಗ್ರಾಹಕಭಾವವಿಲ್ಲದಿರುವಪ್ರಯುಕ್ತ ಮಹಾಮಾಹಾತ್ಮ್ಯವು ಸಿದ್ಧವಾಯಿತು. (9) ೯ನೇ ಅರೂಪಾಧಿಕರಣದಲ್ಲಿ ಯುಕ್ತ-ಅಯುಕ್ತ ಸಾಧನೋಕ್ತಿಯು ಕಂಡದರಿಂದ ವಿಷ್ಣುಪ್ರಾಪ್ತಿಸಾಧನತ್ವೋಕ್ತಿಯು ಯುಕ್ತವೋ ಅಲ್ಲವೋ ಎಂದು ಸಂದೇಹವು ಬಂದರೆ ಯುಕ್ತವಲ್ಲವೆಂದು ಪೂರ್ವಪಕ್ಷವು; ಯುಕ್ತವೇ ಎಂದು ಸಿದ್ಧಾಂತವು. ಅದರಲ್ಲಿ 'ವಿರುದ್ಧತ್ವಂ' ಎನ್ನುವುದು ಪೂರ್ವಪಕ್ಷನ್ಯಾಯವು. 'ವ್ಯವಸ್ಥಾ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ ಶ್ರೀ ವಿಷ್ಣುವಿಗೆ ೧ ರೂಪವಿದೆಯೋ,

ಠ ಇಲ್ಲವೋ, ೧ ರೂಪವಿದೆ ಎಂದು ಹೇಳಕೂಡದು. 'ತದರೂಪಮನಾಮಯಂ' ಇತ್ಯಾದಿ ಅರೂಪತ್ವವನ್ನು ಹೇಳತಕ್ಕ ಶ್ರುತಿಗೆ ಅಪ್ರಾಮಾಣ್ಯವು ಬರಬೇಕಾಗುವುದು. ಅನಿತ್ಯತ್ವವೂ ಪ್ರಾಪ್ತವಾಗುತ್ತದೆ. ೨ನೇದ್ದೂ ರೂಪವಿಲ್ಲವೆನ್ನುವುದೂ ಕೂಡಲಾರದು. ಏಕೆಂದರೆ— 'ರುಗ್ಮವರ್ಣಂ ಕರ್ತಾರಂ' ಇತ್ಯಾದಿ ರೂಪಪ್ರತಿಪಾದಕ ಶ್ರುತಿಗೆ ಅಪ್ರಾಮಾಣ್ಯವು ಬರಬೇಕಾಗುವುದು. ಸೌಂದರ್ಯಾದಿಗಳೂ ಇಲ್ಲವೆಂದಾಗಬೇಕಾಗುವುದು. ಏವಂಚ ಶ್ರುತಿಗಳಿಗೆ ಪರಸ್ಪರ ವಿರೋಧವಿದ್ದುದರಿಂದ ರೂಪಾದಿಗಳು ಸಿದ್ಧವಾಗದೆ ಇರಲು ಸೌಂದರ್ಯಾದಿಗಳು ಕೂಡದಿರುವುದರಿಂದ ಪರಮಾತ್ಮನಲ್ಲಿ ಭಕ್ತಿಯು ಕೂಡಲಾರದು, ಎಂದರೆ ಹೀಗೆ ಹೇಳಕೂಡದು. ವಿಷ್ಣುವಿಗೆ ಅಪ್ರಾಕೃತರೂಪವಿದೆ. ಪ್ರಾಕೃತರೂಪವಿಲ್ಲ. ತಥಾಚ 'ರುಗ್ಮವರ್ಣಂ' ಇತ್ಯಾದಿ ಶ್ರುತಿಯು ವಿಷ್ಣುವಿಗೆ ಅಪ್ರಾಕೃತರೂಪವಿದೆ ಎಂದು ಪ್ರತಿಪಾದಿಸುತ್ತದೆ. 'ತದರೂಪಂ' ಇತ್ಯಾದಿ ಶ್ರುತಿಯು ಪ್ರಾಕೃತರೂಪವಿದೆ ಎಂದು ಪ್ರತಿಪಾದಿಸುತ್ತದೆ. ಈ ಪ್ರಕಾರ ವ್ಯವಸ್ಥೆಯು ಕೂಡುವ ಪ್ರಯುಕ್ತ ವಿರೋಧವಿಲ್ಲದಿರುವುದರಿಂದ ವಚನಗಳಿಗೆ ಅಪ್ರಾಮಾಣ್ಯವಿಲ್ಲ. ಸೌಂದರ್ಯಾದ್ಯಭಾವವೂ ಅನಿತ್ಯತ್ವಪ್ರಾಪ್ತಿಯೂ ಬರುವುದಿಲ್ಲ. ಅಪ್ರಾಕೃತರೂಪವನ್ನು ಅಂಗೀಕರಿಸಿರುತ್ತೇವೆ. ಅನಿತ್ಯತ್ವವನ್ನೂ ಪ್ರಾಕೃತರೂಪವನ್ನೂ ಅಂಗೀಕರಿಸುವುದಿಲ್ಲ. ಏವಂಚ ವ್ಯವಸ್ಥೆಯಿಂದ ಶ್ರುತಿಪ್ರಾಮಾಣ್ಯವಿದ್ದಪ್ರಯುಕ್ತ ಸೌಂದರ್ಯಾದಿಗಳು ಕೂಡುವುದರಿಂದ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವು. (10) ೧೦ನೇ ಉಪಮಾಧಿಕರಣದಲ್ಲಿ ಯುಕ್ತಸಾಧನಗಳನ್ನೂ ಅಯುಕ್ತಸಾಧನಗಳನ್ನೂ ಕಂಡದರಿಂದ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವೋ, ಅಲ್ಲವೋ ಎಂದು ಸಂದೇಹವು ಬಂದರೆ— ಯುಕ್ತವಲ್ಲವೆಂದು ಪೂರ್ವಪಕ್ಷವು; ಯುಕ್ತವೆಂದು ಸಿದ್ಧಾಂತವು. ಅದರಲ್ಲಿ 'ನ್ಯಾಯಸಾಮ್ಯಂ' ಎಂದು ಪೂರ್ವಪಕ್ಷನ್ಯಾಯವು; 'ಅಲ್ಪತಾ' ಎಂದು ಸಿದ್ಧಾಂತನ್ಯಾಯವು. ಅಂದರೆ— ಪರಮಾತ್ಮನಿಗೂ, ಜೀವನಿಗೂ ಚೇತನತ್ವವು ಸಮವಾದ ಪ್ರಯುಕ್ತ ಜೀವನಿಗೆ ಶ್ರೀಹರಿಯಿಂದ ಅಭೇದವು. ಏವಂಚ 'ಜೀವಃ ಪರಮಾತ್ಮಾಭಿನ್ನಃ ಚೇತನತ್ವಾತ್ ಅಂಶತ್ವಾತ್ ಮತ್ಸ್ಯಾದಿವತ್' ಎನ್ನುವ ಅನುಮಾನದಿಂದ ಜೀವನಿಗೆ ಪರಮಾತ್ಮನಿಂದ ಅಭೇದವಿದ್ದಪ್ರಯುಕ್ತ ತನ್ನಲ್ಲಿ ತನಗೆ ಭಕ್ತಿಯು ಕೂಡದಿರುವುದರಿಂದ ಭಕ್ತಿಯು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಜೀವನಿಗೆ ಅಲ್ಪಗುಣಗಳು ಇರುವುವು. ಪರಮಾತ್ಮನ ಪ್ರತಿಬಿಂಬತ್ವವಿದೆ. ಈಶ್ವರನಿಗೆ ಪೂರ್ಣಗುಣಗಳು ಇರುವುವು. ತಥಾಚ 'ಜೀವಃ ಪರಮಾತ್ಮಾಭಿನ್ನೋ ನ ಭವತಿ ತದ್ವಿರುದ್ಧಧರ್ಮಾಧಿಕರಣತ್ವಾತ್ ಪ್ರತಿಬಿಂಬತ್ವಾತ್ ಸಂಪ್ರತಿಪನ್ನವತ್' ಎನ್ನುವ ಅನುಮಾನವಿರೋಧವಿದ್ದುದರಿಂದ ಜೀವನಿಗೆ ಪರಮಾತ್ಮಾಭೇದವಿಲ್ಲ. ಏವಂಚ ಜೀವನಿಗೆ ಅಲ್ಪಗುಣಗಳು ಇರುವುದರಿಂದ ಅನಂತಾನಂತಗುಣಗಳುಳ್ಳ ಪರಮಾತ್ಮನಿಂದ ಅಭೇದವಿಲ್ಲದಿರುವಪ್ರಯುಕ್ತ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವು. (11) ೧೧ನೇ ಅಂಬುವದಧಿಕರಣದಲ್ಲಿ ಕರ್ತವ್ಯಾಕರ್ತವ್ಯಾರ್ಥಗಳು ಕಂಡದರಿಂದ ಭಗವದ್ಭಕ್ತಿಯನ್ನು ಮಾಡಬೇಕೋ, ಬೇಡವೋ ಎಂದು ಸಂದೇಹವು ಬಂದರೆ— ಮಾಡಕೂಡದು ಎಂದು ಪೂರ್ವಪಕ್ಷವು. ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ 'ಸ್ವ (ಸ)ತೋಭವಃ' ಎಂದು ಪೂರ್ವಪಕ್ಷನ್ಯಾಯವು; 'ಭವಃ' ಎಂದು ಸಿದ್ಧಾಂತನ್ಯಾಯವು. ಅಂದರೆ— ನಿತ್ಯದಲ್ಲಿಯೂ ಸಾದೃಶ್ಯವಿದ್ದುದರಿಂದ ಸಾಧನವಿಲ್ಲದೇನೇ ಜೀವನಿಗೆ ಜ್ಞಾನಾನಂದಾದಿ ಸಾದೃಶ್ಯವು ಅಭಿವ್ಯಕ್ತವಾಗುತ್ತದೆ. ಏವಂಚ ಜ್ಞಾನಾನಂದಾದಿ ಸಾದೃಶ್ಯವು ಅನಾದಿ ಲಾಗ್ಯಾತು ಇದ್ದ ಪ್ರಯುಕ್ತ ಭಕ್ತಿ ಹೊರತೇ ಅಭಿವ್ಯಕ್ತಿಯು ಕೂಡುವುದರಿಂದ ಅದಕ್ಕಾಗಿ ಮಾಹಾತ್ಮ್ಯವರ್ಣನವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು ಅನಾದಿಯಿಂದ ಸಂಸಾರವು ಇದ್ದುದರಿಂದ ಜ್ಞಾನಾನಂದಾದಿ ಸಾದೃಶ್ಯದ ಅಭಿವ್ಯಕ್ತಿಗಾಗಿ ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಲೇಬೇಕು

(12) ೧೨ನೇ ವೃದ್ಧಿಹ್ರಾಸಾಧಿಕರಣದಲ್ಲಿ ಏಕಪ್ರಕಾರವಾಗಿ ಚೇತನತ್ವಾದಿಗಳನ್ನು ತಾರತಮ್ಯ ದಿಂದ ಜ್ಞಾನಾದಿಧರ್ಮಗಳನ್ನು ಕಂಡದರಿಂದ ಭಗವದ್ಭಕ್ತಿಯು ಭಕ್ತರಲ್ಲಿ ಏಕಪ್ರಕಾರವುಳ್ಳದ್ದೋ, ವೃದ್ಧಿಹ್ರಾಸವುಳ್ಳದ್ದೋ ಎಂದು ಸಂದೇಹವು ಬಂದರೆ— ಏಕಪ್ರಕಾರವುಳ್ಳದ್ದೇ ಎಂದು ಪೂರ್ವ ಪಕ್ಷವು. ವೃದ್ಧಿಹ್ರಾಸವುಳ್ಳದ್ದು ಎಂದು ಸಿದ್ಧಾಂತವು. ಅದರಲ್ಲಿ 'ಗುಣಸಾಮ್ಯಂ' ಎಂದು ಪೂರ್ವ ಪಕ್ಷನ್ಯಾಯವು; 'ವಿಶೇಷದೃಷ್ಟಿಃ' ಎಂದು ಸಿದ್ಧಾಂತನ್ಯಾಯವು. ಅಂದರೆ— ಮುಕ್ತತ್ವ (ಸಂಸಾರ ನಿವೃತ್ತಿ) ಆನಂದತ್ವ ಮೊದಲಾದ ಗುಣಗಳು ಎಲ್ಲಾ ಕಡೆಗಳಲ್ಲಿಯೂ, ಸಮವಾದ ಪ್ರಯುಕ್ತ ಬ್ರಹ್ಮಾದಿಗಳ ಭಕ್ತ್ಯಾದಿ ಗುಣಗಳಿಗೆ ಸಾಮ್ಯವು. ಏವಂಚ ಫಲಭೂತವಾದ ಮುಕ್ತ ತ್ವಾದಿಯು ಸಮವಾದ ಪ್ರಯುಕ್ತ ಸಾಧನಭೂತಗಳಾದ ಭಕ್ತ್ಯಾದಿಗಳಿಗೂ ತಾರತಮ್ಯವಿಲ್ಲ. ಎಂದರೆ— ಹಾಗೆ ಹೇಳಕೂಡದು. '**ಯಥಾ ಯಥಾಧಿಕಾರೋ ವಿಶಿಷ್ಯತೇ ಏವಂ ಜ್ಞಾನಂ ಭಕ್ತಿರ್ಬಲಂ ಚ ವಿಶಿಷ್ಯತೇ । ಮುಕ್ತಾವಾನಂದ ಏತೇ ಚ ಗುಣಾಃ ವಿಶಿಷ್ಯಂತೇ ಅತ ಆಹುರ್ಬ್ರಹ್ಮಣೇ ಮುಕ್ತಾ ಬಲಿಂ ಹರಂತಿ**' ಶ್ರವಣಾದಿಗಳಲ್ಲಿ ಹೇಗೆ ಹೇಗೆ ಅಧಿಕಾರವು ಅಧಿಕವಾಗಿರುತ್ತದೋ ಹೀಗೆಯೇ ಜ್ಞಾನವು, ಭಕ್ತಿಯು, ಬಲವೂ ಅಧಿಕವಾಗಿರುತ್ತದೆ. ಮುಕ್ತಿ ಯಲ್ಲಿ ಆನಂದವು ಜ್ಞಾನಭಕ್ತ್ಯಾದಿಗುಣಗಳೂ, ಅಧಿಕಗಳಾಗುತ್ತವೆ. ಆದಕಾರಣ ಮುಕ್ತರು ಚತುರ್ಮುಖಬ್ರಹ್ಮನಿಗೆ ಬಲಿಯನ್ನು (ಪೂಜೆಯನ್ನು) ಮಾಡುತ್ತಾರೆ. ಇತ್ಯಾದಿ ಸಾಧ್ಯಸಾಧನ ತಾರತಮ್ಯವು ಕಂಡದೆ. ಏವಂಚ ಸಾಧ್ಯಸಾಧನ ತಾರತಮ್ಯರೂಪವಾದ ವಿಶೇಷವು ಶ್ರುತಿ ಯಿಂದ ದೃಷ್ಟವಾದ ಪ್ರಯುಕ್ತ ಭಕ್ತ್ಯಾದಿ ಸಾಧನಕ್ಕೆ ಏಕಪ್ರಕಾರತ್ವವಿಲ್ಲ. (13) ೧೩ನೇ ಪ್ರಕೃತೈತಾವತ್ವಾಧಿಕರಣದಲ್ಲಿ ಲೋಕದಲ್ಲಿ ಕೆಲವು ಯುಕ್ತಗುಣಗಳೂ, ಅಯುಕ್ತಗುಣ ಗಳೂ ಕಂಡದರಿಂದ ಜಗತ್ಪಾಲಕತ್ವ (ಜಗತ್ತನ್ನು ರಕ್ಷಿಸುವಿಕೆ) ರೂಪಗುಣವು ವಿಷ್ಣುವಿಗೆ ಯುಕ್ತವೋ, ಅಯುಕ್ತವೋ ಎಂದು ಸಂಶಯವು ಬಂದರೆ— ಯುಕ್ತವಲ್ಲವೆಂದು ಪೂರ್ವಪಕ್ಷವು; ಯುಕ್ತವೇ ಎಂದು ಸಿದ್ಧಾಂತವು. 'ಅಯೋಗಃ' ಎಂದು ಪೂರ್ವಪಕ್ಷನ್ಯಾಯವು; 'ವಿಶೇಷ ವಾಕ್ಯಂ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ಇನ್ನೊಬ್ಬನಿಗೆ ಸಂಹಾರ ಕರ್ತೃತ್ವವಿದ್ದರೆ ಅದನ್ನು ತಡದು ಅಸಂಹಾರಾತಿರಿಕ್ತವಾದ ರಕ್ಷಣೆಯು ಕೂಡಬಹುದು. ಹೀಗೆ ಇಲ್ಲ. ಏವಂಚ ಅಸಂಹಾರದಿಂದ ಬೇರೆಯಾದ ರಕ್ಷಣೆಯೇ ಕೂಡದೆ ಇರುವುದರಿಂದ ಪಾಲಕತ್ವವು ಕೂಡದಿರು ವುದರಿಂದ ಆತನಿಗೆ ಮಹಾಮಾಹಾತ್ಮ್ಯವು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. '**ಸ ಸೃಜತಿ ಸ ಪಾಲಯತಿ ಸ ವಿನಾಶಯತಿ**' ಇತ್ಯಾದಿ ವಿಶೇಷವಾಕ್ಯವಿದ್ದಪ್ರಯುಕ್ತ ಅಸಂಹಾ ರಾತಿರಿಕ್ತವಾದ ಅನ್ನದಾನಾದಿರೂಪವಾದ ಪಾಲನೆಯನ್ನು 'ಸ ಪಾಲಯತಿ' ಎಂದು ಪ್ರತ್ಯೇಕವಾಗಿ ಹೇಳಿರುವುದರಿಂದ ಪಾಲಕತ್ವಾದಿರೂಪ ಮಹಾಗುಣಗಳಿಂದ ಯುಕ್ತನಾದ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವು. (14) ೧೪ನೇ ತದವ್ಯಕ್ತಾಧಿಕರಣದಲ್ಲಿ, ಲೋಕದಲ್ಲಿ ಕರ್ತವ್ಯ ಅಕರ್ತವ್ಯ ವ್ಯಾಪಾರಗಳು ಕಂಡು ಬಂದುದರಿಂದ ಭಕ್ತಿಯನ್ನು ಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ— ಮಾಡಬಾರದೆಂದು ಪೂರ್ವಪಕ್ಷವು; ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ 'ತರ್ಕಬಾಧಃ' ಎಂದು ಪೂರ್ವಪಕ್ಷನ್ಯಾಯವು; 'ಪುಂಶಕ್ತಿಃ' ಎಂದು ಸಿದ್ಧಾಂತನ್ಯಾಯವು. ಅಂದರೆ— ಅವ್ಯಕ್ತ ಸ್ವಭಾವವುಳ್ಳ ಈಶ್ವರನು ಪ್ರತ್ಯಕ್ಷನಾಗುತ್ತಾನೆಂದು ಹೇಳಿದರೆ 'ಈಶ್ವರೋ ನ ಪ್ರತೀಯತೇ ಅವ್ಯಕ್ತ ಸ್ವಭಾವತ್ವಾತ್ ಅದೃಷ್ಟವತ್' ಎನ್ನುವ ತರ್ಕ ಬಾಧವು ಪ್ರಯೋಜನವಿಲ್ಲದಿರುವುದರಿಂದ ಈಶ್ವರನಲ್ಲಿ ಭಕ್ತಿಯನ್ನು ಮಾಡಕೂಡದು. ಶ್ರೀ ಹರಿಯ ಅಪರೋಕ್ಷಜ್ಞಾನವೇ ಭಕ್ತಿಗೆ ಪ್ರಯೋಜನವೆಂದು ಹೇಳಕೂಡದು. ಶ್ರೀ ಹರಿಯು ಅವ್ಯಕ್ತ ಸ್ವಭಾವವಿರುವವನಾದುದರಿಂದ ತರ್ಕವಿರೋಧವು ಬರುವುದರಿಂದ ಪ್ರತ್ಯಕ್ಷತ್ವವೇ ಕೂಡ

ಲಾರದು, ಎಂದು ಪೂರ್ವಪಕ್ಷಿಯ ಅಭಿಪ್ರಾಯವು. ಏವಂಚ ಶ್ರೀ ಹರಿಯು ಪ್ರತ್ಯಕ್ಷನಾಗದೆ ಇರುವುದರಿಂದ ಭಕ್ತಿಯು ನಿಷ್ಫಲವು. ಆದುದರಿಂದ ಭಕ್ತಿಗಾಗಿ ಮಹಾತ್ಮ್ಯ ವರ್ಣನವು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಶ್ರೀ ವಿಷ್ಣುವಿಗೆ ಅನಂತಾನಂತಶಕ್ತಿಯಿದೆ. ಆದುದರಿಂದ ಶ್ರೀಹರಿಯು ಅವ್ಯಕ್ತನಾದಾಗ್ಯೂ ವಿಷ್ಣುವಿನ ಅಚಿಂತ್ಯ ಶಕ್ತಿಯಿಂದ ಆತನಿಗೆ ಪ್ರತ್ಯಕ್ಷತ್ವವು ಕೂಡುವುದರಿಂದ ಆತನಲ್ಲಿ ಭಕ್ತಿಯು ಯುಕ್ತವು. (15) ೧೫ನೇ ಅಹಿಕುಂಡಲಾಧಿಕರಣದಲ್ಲಿ ಹಿಂದಿನಂತೆ ಸಂಶಯಾದಿಗಳು, ಅದರಲ್ಲಿ ವಿಲೋಮತಾ ಎಂದು ಪೂರ್ವಪಕ್ಷ ನ್ಯಾಯವು; ಸುನಿದರ್ಶನಂ ಎಂದು ಸಿದ್ಧಾಂತ ನ್ಯಾಯವು. ಅಂದರೆ— ಗುಣಗಳಿಗೆ ಗುಣಿಸ್ವರೂಪತ್ವವು ವಿರುದ್ಧವಾಗಿರುವುದರಿಂದ ಈಶ್ವರನಿಗೆ ಗುಣಿತ್ವವಿಲ್ಲದಿರುವ ಪ್ರಯುಕ್ತ ಈಶ್ವರನಲ್ಲಿ ಭಕ್ತಿಯು ಯುಕ್ತವಲ್ಲ ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— ಹೇಗೆ ಪೂರ್ವಕಾಲವೆಂದು ಹೇಳುವಾಗ ಕಾಲಕ್ಕೂ, ಪೂರ್ವಕ್ಕೂ ಭೇದವಿಲ್ಲವಾದರೂ, ಕಾಲಃ ಎಂದು ವಿಶೇಷ್ಯವಾಗುತ್ತದೋ, ಪೂರ್ವಃ ಎಂದು ವಿಶೇಷಣವಾಗುತ್ತದೋ, ಆದಿತ್ಯನು ಪ್ರಕಾಶರೂಪನಾದಾಗ್ಯೂ, ಪ್ರಕಾಶಿಯೂ ಆಗುತ್ತಾನೋ? ಸರ್ಪವು ಕುಂಡಲಾತ್ಮಕವಾದಾಗ್ಯೂ, ಕುಂಡಲಿಯಾಗುತ್ತದೋ? ಹೀಗೆಯೇ ಬ್ರಹ್ಮನು ಆನಂದಾದಿ ಗುಣಸ್ವರೂಪನಾದಾಗ್ಯೂ, ವಿಶೇಷಬಲದಿಂದಲೇ ಆನಂದಾದಿ ಗುಣವುಳ್ಳವನೂ, ಎಂದೂ ಕೂಡುತ್ತದೆ. ಏವಂಚ ಕಾಲಾದಿ ದೃಷ್ಟಾಂತದಿಂದ ಶ್ರೀ ಹರಿಯು ಗುಣಸ್ವರೂಪನಾದಾಗ್ಯೂ, ಗುಣವುಳ್ಳವನೂ ಆಗಿರುವುದರಿಂದ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವು. (16) ೧೬ನೇ ಪರಮತೋಽಧಿಕರಣದಲ್ಲಿ ಶ್ರೀಹರಿಯ ಆನಂದಾದಿ ಗುಣಗಳಿಗೆ ಲೌಕಿಕತ್ವವಾಗಲೀ, ಅಲೌಕಿಕತ್ವವಾಗಲೀ ಕೂಡುವುದರಿಂದ ಲೌಕಿಕವೋ ಅಲೌಕಿಕವೋ ಎಂದು ಸಂದೇಹವು ಬಂದರೆ ಲೋಕಸದೃಶಗಳೇ ಆನಂದಾದಿಗಳು ಎಂದು ಪೂರ್ವಪಕ್ಷವು; ಅಲೌಕಿಕವೆಂದು ಸಿದ್ಧಾಂತವು; 'ವಿಲೋಮತಾ' ಎಂದು ಪೂರ್ವಪಕ್ಷ ನ್ಯಾಯವು; 'ಅಲೌಕಿಕತ್ವ'ವೆಂದು ಸಿದ್ಧಾಂತನ್ಯಾಯವು ಅಂದರೆ— ಬ್ರಹ್ಮಾನಂದಾದಿಗಳಿಗೆ ಅಲೌಕಿಕತ್ವವಿದ್ದರೆ ಲಾಕಿಕ ಆನಂದಾದಿಗಳಲ್ಲಿಯೇ ಆನಂದಾದಿ ಶಬ್ದಗಳಿಗೆ ಸಂಗತಿಗ್ರಹಣವು ಇರುವುದರಿಂದ ಆನಂದಾದಿ ಶಬ್ದವಾಚ್ಯತ್ವಾಭಾವವು ಬರಬೇಕಾಗುವುದು. ಆನಂದಾದಿ ಶಬ್ದವಾಚ್ಯತ್ವವಿದ್ದರೆ ಲೌಕಿಕತ್ವವು ಬರಬೇಕಾಗುವುದು. ಹೀಗೆ ಅಲೌಕಿಕತ್ವ ಆನಂದಾದಿ ಶಬ್ದವಾಚ್ಯತ್ವಗಳಿಗೆ ಸಹಾನವಸ್ಥಾನರೂಪವಿರೋಧವಿದ್ದುದರಿಂದ ಆನಂದಾದಿ ಶಬ್ದವಾಚ್ಯವಾದ ಲೌಕಿಕ ಆನಂದಾದಿ ಗುಣಗಳುಳ್ಳ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವಲ್ಲ, ಎಂದರೆ ಹೀಗೆ ಹೇಳಕೂಡದು. '**ಅಲೌಕಿಕಾಸ್ತಸ್ಯ ಶಬ್ದಾಸ್ತಥಾಽರ್ಥಾ ಅಲೌಕಿಕೋ ಹ್ಯೇಷ ವಿಷ್ಣುಃ ಪರತ್ವಾತ್ । ತಥಾಽಪಿ ಶಬ್ದಾ ಲೌಕಿಕಾ ಅಪ್ಯಮುಷ್ಮಿನ್ ಪ್ರವರ್ತಮಾನಾ ಅಧಿಕಾರ್ಥಾನ್ ವದಂತಿ**'= ಶ್ರೀ ಹರಿಯ ಆನಂದಾದಿಗಳನ್ನು ಹೇಳತಕ್ಕ ಶಬ್ದಗಳು ವೈದಿಕಗಳು. ಆನಂದಾದಿ ಗುಣಗಳು ಅಪ್ರಾಕೃತಗಳು. ಶ್ರೀವಿಷ್ಣುವು ಸರ್ವೋತ್ತಮನಾದ ಪ್ರಯುಕ್ತ ಅಲೌಕಿಕನು, ಆದಾಗ್ಯೂ ಪೌರುಷೇಯಾಗಮಗಳೂ ಕೂಡ ಶ್ರೀ ಹರಿಯಲ್ಲಿ ಪ್ರವೃತ್ತಗಳಾದವುಗಳು ಲೋಕವಿಲಕ್ಷಣ ಆನಂದಾದಿಗಳನ್ನು ಹೇಳುತ್ತವೆ, ಇತ್ಯಾದಿ ಶ್ರುತಿಗಳದ್ದೆಶೆಯಿಂದ ಬ್ರಹ್ಮಾನಂದಾದಿ ಗುಣಗಳಿಗೆ ಅಲೌಕಿಕತ್ವವು ತಿಳಿದು ಬರುತ್ತದೆ. ಏವಂಚ ಈ ಶ್ರುತಿಬಲದಿಂದ ಅಲೌಕಿಕತ್ವ ಆನಂದಾದಿಶಬ್ದವಾಚ್ಯತ್ವಗಳಿಗೆ ವಿರೋಧವಿಲ್ಲ. ಹೀಗೆ ಬ್ರಹ್ಮಾನಂದಾದಿಗಳಿಗೆ ಅಲೌಕಿಕತ್ವವಿದ್ದರೂ ಆನಂದಾದಿಶಬ್ದವಾಚ್ಯತ್ವವು ಯುಕ್ತವು. (17) ೧೭ನೇ ಸ್ಥಾನವಿಶೇಷಾಧಿಕರಣದಲ್ಲಿ ಪದಾರ್ಥಗಳಿಗೆ ಕಿಂಚಿತ್ಪ್ರತಿಬಿಂಬತ್ವವೂ ಅಪ್ರತಿಬಿಂಬತ್ವವೂ ಕಂಡದರಿಂದ ಚತುರ್ಮುಖಾದಿಗಳ ಆನಂದಾದಿಗಳು ಶ್ರೀಹರಿಯ ಆನಂದಾದಿಗಳಿಗೆ ಪ್ರತಿಬಿಂಬವಾಗುತ್ತದೋ ಇಲ್ಲವೊ ಎಂದು ಸಂದೇಹವು ಬಂದರೆ— ಪ್ರತಿಬಿಂಬವಾಗುವುದಿಲ್ಲ

ವೆಂದು ಪೂರ್ವಪಕ್ಷವು; ಭಗವಂತನ ಆನಂದಾದಿಗಳ ಪ್ರತಿಬಿಂಬವೇ ಎಂದು ಸಿದ್ಧಾಂತವು. ಅದರಲ್ಲಿ 'ನಾನಾಭಾವಃ' ಎಂದು ಪೂರ್ವಪಕ್ಷನ್ಯಾಯವು. 'ಆಧಿಕ್ಯಂ' ಎಂದು ಸಿದ್ಧಾಂತ ನ್ಯಾಯವು. ಅಂದರೆ— ಪ್ರತಿಬಿಂಬಭೂತ ಬ್ರಹ್ಮಾನಂದಾದಿಗಳು ವಿಚಿತ್ರಗಳಾಗಿರುವುದರಿಂದ ಬಿಂಬಭೂತವಿಷ್ಣ್ವಾನಂದಾದಿಗಳಿಗೂ ವೈಚಿತ್ರ್ಯವು ಬರುವುದರಿಂದ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವಲ್ಲ, ಎಂದರೆ ಹೀಗೆ ಹೇಳಕೂಡದು. ಏಕೆಂದರೆ— ಸೂರ್ಯಕಾಂತಾದಿಗಳಲ್ಲಿರತಕ್ಕ ಸೂರ್ಯಪ್ರತಿಬಿಂಬವು ಅಗ್ನಿಯನ್ನು ಹುಟ್ಟಿಸುತ್ತದೆ. ಜಲದಲ್ಲಿರತಕ್ಕದು ಅಗ್ನಿಯನ್ನು ಹುಟ್ಟಿಸುವುದಿಲ್ಲ. ಹೀಗೆ ಪ್ರತಿಬಿಂಬದಲ್ಲಿ ವೈಚಿತ್ರ್ಯವಿದ್ದರೂ ಬಿಂಬಭೂತನಾದ ಸೂರ್ಯನಲ್ಲಿ ಹೇಗೆ ವೈಚಿತ್ರ್ಯವಿಲ್ಲವೋ ಹಾಗೆಯೇ ಬ್ರಹ್ಮಾದ್ಯಾನಂದಗಳಲ್ಲಿ ವಿಚಿತ್ರತ್ವವಿದ್ದರೂ ಶ್ರೀ ಹರಿಯ ಆನಂದದಲ್ಲಿ ವಿಚಿತ್ರತ್ವ (ತಾರತಮ್ಯ)ವಿಲ್ಲ. ಏವಂಚ ಬಿಂಬಭೂತನಾದ ವಿಷ್ಣ್ವೈಶ್ವರ್ಯಾದ್ಯಾಧಿಕ್ಯದಿಂದ ಸ್ಥಾನಭೂತ ಬ್ರಹ್ಮಾದಿಗಳಿಗೆ ಭಕ್ತ್ಯಾದಿಗುಣಗಳಿಂದ ಆಧಿಕ್ಯವಿದ್ದಪ್ರಯುಕ್ತ ಬ್ರಹ್ಮಾದಿಗಳ ಆನಂದಾದಿಗಳು ವಿಚಿತ್ರಗಳಾದಾಗ್ಯೂ ವಿಷ್ಣುವಿನ ಆನಂದವು ವಿಚಿತ್ರವಲ್ಲ. ಆದುದರಿಂದ ಅಲೌಕಿಕ ಅವಿಚಿತ್ರ ಪರಿಪೂರ್ಣ ಆನಂದಾದಿಗುಣಗಳುಳ್ಳ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವೇ. (18) ೧೮ನೇ ತಥಾನ್ಯತ್ವಾಧಿಕರಣದಲ್ಲಿ ವ್ಯಕ್ತ ಅವ್ಯಕ್ತಪದಾರ್ಥಗಳು ಕಂಡುಬಂದುದರಿಂದ ಬ್ರಹ್ಮನು ಅವ್ಯಕ್ತನೋ ವ್ಯಕ್ತನೋ ಎಂದು ಸಂದೇಹವು ಬಂದರೆ— ವ್ಯಕ್ತನೆಂದು ಪೂರ್ವಪಕ್ಷವು; ಅವ್ಯಕ್ತನೆಂದು ಸಿದ್ಧಾಂತವು. ಅದರಲ್ಲಿ 'ನಾನಾಭಾವಃ' ಎಂದು ಪೂರ್ವಪಕ್ಷನ್ಯಾಯವು; 'ಆಧಿಕ್ಯಂ'ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ವಿಷ್ಣುವಿಗೆ ಸ್ವರೂಪಭೇದವಿಲ್ಲವಾದರೂ ಧ್ಯಾನಮಾಡುವವರು ಹೆಚ್ಚು ಮಂದಿ ಇದ್ದಪ್ರಯುಕ್ತ ಧ್ಯಾನಕಾಲದಲ್ಲಿ ತೋರುವ ರೂಪಗಳು ಬಹಳ ಇದ್ದಪ್ರಯುಕ್ತ ಅವುಗಳಿಗೆ ವಿಷ್ಣುತ್ವವನ್ನು ಅಂಗೀಕರಿಸಿದರೆ ವಿರೋಧವಿಲ್ಲದಿರುವುದರಿಂದ ಶ್ರೀ ವಿಷ್ಣುವಿಗೆ ಚಿತ್ತಪ್ರತಿಬಿಂಬರೂಪತ್ವ (ಮಾನಸವಾಸನಾಮಯವಾದ ಮನಸ್ಸಿನಲ್ಲಿ ತೋರತಕ್ಕ ಪ್ರತಿಮಾರೂಪತ್ವ)ವಿದೆ, ಆದುದರಿಂದ ಅವ್ಯಕ್ತನಾಗದೆ ಇದ್ದಪ್ರಯುಕ್ತ ಭಕ್ತಿಯು ವ್ಯರ್ಥವೇ, ಎಂದರೆ ಹೀಗೆ ಹೇಳಕೂಡದು. ಏಕೆಂದರೆ-ಹೇಗೆ ಜೀವಾನಂದಾದಿಗಳು ಅಲ್ಪಗಳಾಗಿರುವುದರಿಂದ, ಬ್ರಹ್ಮಾನಂದಾದಿಗಳು ಅಪರಿಮಿತಗಳಾಗಿರುವುದರಿಂದ ಅದಕ್ಕಿಂತ ಜೀವಾನಂದಾದಿಗಳಿಗೆ ವೈಲಕ್ಷಣ್ಯವಿದೆಯೋ, ಹಾಗೆಯೇ ಪ್ರಕೃತವಾದ ಹಿಂದೆ ಹೇಳಿದ ಚಿತ್ತಪ್ರತಿಬಿಂಬಕ್ಕೆ ದುರ್ಲಕ್ಷಣತ್ವಾದಿಗಳು ಇದ್ದುದರಿಂದ ಶ್ರೀ ವಿಷ್ಣುವಿಗೆ ನಿರ್ದೋಷತ್ವಾದ್ಯಾಧಿಕ್ಯವಿದ್ದುದರಿಂದಲೇ ಚಿತ್ತಪ್ರತಿಬಿಂಬರೂಪಕ್ಕೆ ವಿಷ್ಣುವಿನಿಂದ ವೈಲಕ್ಷಣ್ಯವನ್ನಂಗೀಕರಿಸಲೇಬೇಕು. ಏವಂಚ ವಿಷ್ಣುವಿಗೆ ನಿರ್ದೋಷತ್ವಾದ್ಯಾಧಿಕ್ಯವಿದ್ದುದರಿಂದ ಚಿತ್ತಪ್ರತಿಬಿಂಬರೂಪತ್ವವಿಲ್ಲದಿರುವಪ್ರಯುಕ್ತ ವಿಷ್ಣುವಿಗೆ ಅವ್ಯಕ್ತತ್ವವು ಯುಕ್ತವೇ. (19) ೧೯ನೇ ಅನೇನಸರ್ವಗತತ್ವಾಧಿಕರಣದಲ್ಲಿ 'ಜನ್ಮಾದ್ಯಸ್ಯ ಯತಃ' ಇತ್ಯಾದಿ ಜಗತ್ಕರ್ತೃತ್ವಾದ್ಯುಕ್ತಿಯು ಕಿಂಚತ್ಕರ್ತೃತ್ವ (ಕೆಲವು ಜಗತ್ತನ್ನು ಸೃಷ್ಟಿಸುವಿಕೆ) ಸರ್ವಕರ್ತೃತ್ವವು (ಎಲ್ಲಾ ಜಗತ್ತನ್ನು ಸೃಷ್ಟಿಸುವಿಕೆ) ಎರಡು ಪಕ್ಷದಲ್ಲಿಯೂ ಕೂಡುವುದರಿಂದ ಶ್ರೀ ಹರಿಯು ಸರ್ವದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಒಬ್ಬನೇ ಸೃಷ್ಟಿಮಾಡುತ್ತಾನೋ, ಇಲ್ಲವೋ, ಎಂದು ಸಂದೇಹವು ಬಂದರೆ, ಸರ್ವದೇಶ, ಸರ್ವಕಾಲದಲ್ಲಿರತಕ್ಕ ಸರ್ವ ವಸ್ತುವನ್ನು ಸೃಷ್ಟಿಸತಕ್ಕವನು ಅಲ್ಲವೆಂದು ಪೂರ್ವಪಕ್ಷವು. ಸರ್ವದೇಶಗಳಲ್ಲಿಯೂ, ಸರ್ವ ಕಾಲಗಳಲ್ಲಿಯೂ ಶ್ರೀ ಹರಿಯೇ ಸರ್ವವನ್ನು ಸೃಷ್ಟಿಮಾಡತಕ್ಕವನು ಎಂದು ಸಿದ್ಧಾಂತವು. ಅದರಲ್ಲಿ 'ನಾನಾಭಾವಃ' ಎಂದು ಪೂರ್ವಪಕ್ಷನ್ಯಾಯವು; 'ಸ್ವಾತಂತ್ರ್ಯಂ' ಎಂದು ಸಿದ್ಧಾಂತನ್ಯಾಯವು. ಅಂದರೆ— ಶ್ರೀ ವಿಷ್ಣುವಿಗೆ ಕೃಷ್ಣಾದ್ಯವತಾರಗಳಲ್ಲಿ ಲೀಲಾರೂಪ ಕೌತುಕವು ಕಂಡುಬಂದುದರಿಂದ ಕೆಲವು ದೇಶಗಳಲ್ಲಿ, ಕೆಲವು ಕಾಲಗಳಲ್ಲಿ ಲೀಲೆಯಿಂದಲೇ ಸೃಷ್ಟ್ಯಾದಿಗಳನ್ನು ಮಾಡುತ್ತಾ ಕೆಲವುದೇಶ, ಕೆಲವು

ಕಾಲಗಳಲ್ಲಿ ಮತ್ತೊಬ್ಬನಿಗೇನೇ ಸ್ವಾತಂತ್ರ್ಯಾದಿಗಳನ್ನು ಕೊಟ್ಟು ಸೃಷ್ಟ್ಯಾದಿಗಳಲ್ಲಿ ಪ್ರೇರಿಸುತಾನೆ. ಏವಂಚ ವಿಷ್ಣುವಿನ ಅವತಾರಗಳಲ್ಲಿ ನಾನಾವಿಧವಾದ ಕೌತುಕವು ಕಂಡುಬಂದುದರಿಂದ ಜಗತ್ಸೃಷ್ಟ್ಯಾದಿ ಕರ್ತೃತ್ವವನ್ನು ಮತ್ತೊಬ್ಬನಿಗೂ ಕೊಡುವನು. ಆದುದರಿಂದ ಶ್ರೀ ಹರಿಗೇನೇ ಸಕಲ ಜಗತ್ಸೃಷ್ಟ್ಯಾದಿ ಕರ್ತೃತ್ವರೂಪವಾದ ಮಹಾಮಹಿಮೆಯು ಯುಕ್ತವಲ್ಲ ಎಂದರೆ— **'ಸರ್ವತ್ರ ಸರ್ವಮೇತಸ್ಮಾತ್'** ಸರ್ವ ವಸ್ತುಗಳ ಸೃಷ್ಟ್ಯಾದಿಗಳು ಶ್ರೀ ಹರಿಯಿಂದಲೇ ಆಗುತ್ತವೆ. ಇತ್ಯಾದಿ ಶ್ರುತಿಗಳಿದ್ದೆಶೆಯಿಂದ ಕ್ರೀಡೆಯಲ್ಲಿಯೂ ಸ್ವಾತಂತ್ರ್ಯವಿದೆ. ಕ್ರೀಡೆಯಿಂದ ಮತ್ತೊಬ್ಬರಿಗೆ ಸ್ವಾತಂತ್ರ್ಯವನ್ನು ಕೊಟ್ಟರೆ ಆ ಕಾಲದಲ್ಲಿರತಕ್ಕ ಸೃಷ್ಟ್ಯಾದಿ ಕರ್ತೃತ್ವವು ಇಲ್ಲವೆಂದು ಪ್ರಾಪ್ತವಾಗುವುದರಿಂದ ಸರ್ವ ದೇಶಗಳಲ್ಲಿಯೂ, ಸರ್ವಕಾಲಗಳಲ್ಲಿಯೂ ಎಲ್ಲಾ ವಸ್ತುಗಳ ಸೃಷ್ಟ್ಯಾದಿಗಳನ್ನು ಮಾಡುವವನು ಶ್ರೀ ಹರಿಯೇ ಎಂದು ಪ್ರತಿಪಾದಿಸತಕ್ಕ ಶ್ರುತಿವಿರೋಧವು ಬರುವುದು. **'ಸ್ವಾತಂತ್ರ್ಯಕ್ರೀಡತೇ ವಿಷ್ಣುಃ ನ ಚ ಸ್ವಾತಂತ್ರ್ಯಮನ್ಯಗಂ । ಕರೋತಿ ಕ್ವಾಪಿ ನಿಯತಾ ಕ್ರೀಡಾ ಸೃಷ್ಟ್ಯಾದಿಕಾಸ್ಯ ಚ॥ ನಿಯತ ಕ್ರೀಡನಾದೇವ ಕರ್ತಾ ನಾನ್ಯೋಽಸ್ತಿ ಕಸ್ಯಚಿತ್ । ಅಸ್ವತಂತ್ರೋ ಹಿ ಚಲತಿ ಚಲಚಿತ್ತಾದಶಕ್ತಿತಃ । ಸ್ವತಂತ್ರಃ ಪೂರ್ಣ ಶಕ್ತಿಃ ಸನ್ ಕುತೋಽಸೌ ನಿಯತಿಂ ತಜ್ಯೇತ್'** ॥ ಎಂದು ಸ್ಪಷ್ಟ ಶ್ರುತಿಯೂ ಇದೆ. ಏವಂಚ ಈಶ್ವರನಿಗೇನೇ ಸ್ವಾತಂತ್ರ್ಯವಿದ್ದಪ್ರಯುಕ್ತ ಆತನೇ ಎಲ್ಲಾ ದೇಶಗಳಲ್ಲಿಯೂ, ಎಲ್ಲಾ ಕಾಲಗಳಲ್ಲಿಯೂ ಜಗತ್ಸೃಷ್ಟ್ಯಾದಿಗಳನ್ನು ಮಾಡತಕ್ಕವನಾದಪ್ರಯುಕ್ತ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವೇ. (20) ೨ನೇ ಫಲಾಧಿಕರಣದಲ್ಲಿ ವಾದಿಗಳ ವಿವಾದದಿಂದ ಶ್ರೀ ಹರಿಯು ಫಲವನ್ನು ಕೊಡುವವನೋ, ಕರ್ಮವು ಫಲವನ್ನು ಕೊಡತಕ್ಕದೋ ಎಂದು ಸಂದೇಶವು ಬಂದರೆ— ಕರ್ಮವೇ ಫಲವನ್ನು ಕೊಡತಕ್ಕುದು ಎಂದು ಪೂರ್ವಪಕ್ಷವು; ಈಶ್ವರನು ಫಲವನ್ನು ಕೊಡತಕ್ಕವನು ಎಂದು ಸಿದ್ಧಾಂತವು. 'ಪ್ರಲೋಭಃ' ಎಂದು ಪೂರ್ವಪಕ್ಷನ್ಯಾಯವು; 'ಸ್ವಾತಂತ್ರ್ಯಂ' ಎಂದು ಸಿದ್ಧಾಂತನ್ಯಾಯವು. ಅಂದರೆ— ಜೀವನು ಕರ್ಮವನ್ನು ಮಾಡಿದರೆ ಈಶ್ವರನು ಫಲವನ್ನು ಕೊಡುತ್ತಾನೆ. ಇಲ್ಲವಾದರೆ ಕೊಡುವುದಿಲ್ಲ. ಆದುದರಿಂದ ಈಶ್ವರನು ಫಲವನ್ನು ಕೊಡತಕ್ಕವನೆನ್ನುವುದು ಕೇವಲ ಪ್ರಲೋಭ (ವಂಚನೆ) ವಾದುದರಿಂದ ಶ್ರೀ ಹರಿಯಲ್ಲಿ ನಿರತಿಶಯವಾದ ಐಶ್ವರ್ಯವಿಲ್ಲ ಎಂದರೆ— ಹಾಗೆ ಹೇಳಕೂಡದು. ಏಕೆಂದರೆ— **'ಕರ್ಮಾಣ್ಯನಂತಾನಿ ಯಥೇಷ್ಟಮೀಶಃ ಸಂಪಾದ್ಯ ತೇಷಾಂ ಫಲಮಿಚ್ಛಯೈವ । ಕ್ವಚಿದ್ದದಾತಿ ಕ್ವಚ ನೋ ದದಾತಿ'** ಎನ್ನುವ ಬ್ರಹ್ಮಾಂಡಪುರಾಣ ವಚನದಿಂದಲೂ **'ಸ್ವತಂತ್ರ ಈಶ ಏವೈಕಃ ತದ್ವಶಂ ಕರ್ಮ ಸರ್ವದಾ । ಅತ ಈಶತ್ವಮೀಶಸ್ಯ ನ ಹೀಯೋಽನ್ಯಃ ಕಥಂಚನ'** ॥ ಎನ್ನುವ ಶ್ರುತಿಯಿಂದಲೂ ಈಶ್ವರನಿಗೇನೇ ಸ್ವಾತಂತ್ರ್ಯವಿದ್ದುದರಿಂದ ಶ್ರೀ ಹರಿಯೇ ಫಲವನ್ನು ಕೊಡತಕ್ಕವನು. ಆದುದರಿಂದ ಆತನಿಗೇನೇ ನಿರತಿಶಯವಾದ ಐಶ್ವರ್ಯವಿದ್ದುದರಿಂದ ಶ್ರೀ ಹರಿಯಲ್ಲಿ ಭಕ್ತಿಯು ಯುಕ್ತವು.

**ಪೂರ್ವಪಕ್ಷ ಸಿದ್ಧಾಂತಯುಕ್ತಿಯು ಸಮಾಪ್ತವಾಯಿತು.**

---

# ಸಂಧ್ಯಾಧಿಕರಣವು

**ಓಂ ಸಂಧ್ಯೇಸೃಷ್ಟಿರಾಹ ಹಿ ಓಂ'** ॥ ಸೂ. ೧ ॥

ಸ್ವಪ್ನಕಾಲದಲ್ಲಿ ಶ್ರೀಹರಿಯಿಂದಲೇ ಪದಾರ್ಥಗಳಿಗೆ ಸೃಷ್ಟಿಯೂ ನಾಶವೂ ಆಗುತ್ತದೆ. ಏಕೆಂದರೆ— **'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ'** ಇತ್ಯಾದಿ ಶ್ರುತಿಯು ಹಾಗೆ ಪ್ರತಿಪಾದಿಸುತ್ತದೆ.

## 'ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ' ॥ ಸೂ. ॥ ೨ ॥

**'ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಮಾಣಃ'** ಇತ್ಯಾದಿ ಶ್ರುತಿಗಳಿಂದ ಕೆಲವು ಶಾಖಿಗಳು ವಿಷ್ಣುವನ್ನು ಸ್ವಪ್ನಕಾಲದಲ್ಲಿ ಪದಾರ್ಥಗಳನ್ನು ಸೃಷ್ಟಿಸತಕ್ಕವನನ್ನಾಗಿ ಹೇಳುತ್ತಾರೆ. **'ಏತಸ್ಮಾದ್ಧ್ಯೇವ ಪುತ್ರೋ ಜಾಯತೇ'** ಇತ್ಯಾದಿಗಳಿಂದ ಸ್ವಪ್ನಕಾಲದಲ್ಲಿ ಪುತ್ರಾದಿಗಳೂ ಕೂಡ ಶ್ರೀಹರಿಯಿಂದ ಸೃಷ್ಟಿಸಲ್ಪಡುತ್ತಾರೆ ಎಂದು ಹೇಳುತ್ತಾರೆ.

## 'ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ಓಂ' ॥ ಸೂ. ॥ ೩ ॥

ಸ್ವಾಪ್ನಪದಾರ್ಥಸಮುದಾಯವು ಸಂಸ್ಕಾರ ಈಶ್ವರೇಚ್ಛೆಗಳಿಂದ ನಿರ್ಮಿಸಲ್ಪಟ್ಟದ್ದೇ. ಅನಾದಿಮನಸ್ಸಿನಲ್ಲಿರತಕ್ಕ ಸಂಸ್ಕಾರಗಳನ್ನುಪಾದಾನೀಕರಿಸಿ ಈಶ್ವರನು ತನ್ನ ಇಚ್ಛಾರೂಪ ನಿಮಿತ್ತಕಾರಣದಿಂದ ನಿರ್ಮಿಸುತ್ತಾನೆ. ಬೇರೆ ಯಾರೂ ನಿರ್ಮಿಸುವುದಿಲ್ಲ. ಸಂಪೂರ್ಣವಾಗಿ ಅನಭಿವ್ಯಕ್ತಸ್ವರೂಪತ್ವವಿದ್ದಪ್ರಯುಕ್ತ ಸಂಸ್ಕಾರೋಪಾದಾನಕವೇ, ಬಾಹ್ಯವಸ್ತುವು ಉಪಾದಾನ ಕಾರಣವಾಗಿವುಳ್ಳದ್ದಲ್ಲ.

## 'ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ' ॥ ಸೂ. ೪ ॥

ಯಾವ ಕಾರಣದ್ದೆಶೆಯಿಂದ ಸ್ವಾಪ್ನಾರ್ಥವು ಶುಭಾಶುಭಗಳನ್ನು ಸೂಚಿಸುತ್ತದೋ ಆದಕಾರಣ ಅಸತ್ತಲ್ಲ. **'ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ । ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ ಸ್ವಪ್ನನಿದರ್ಶನೇ । ಕೃಷ್ಣಂ ಕೃಷ್ಣದಂತಂ ಪಶ್ಯತಿ'** ಇತ್ಯಾದಿ ಶ್ರುತಿಗಳದ್ದೆಶೆಯಿಂದಲೂ ಪ್ರತ್ಯಕ್ಷವಾಗಿ ಸ್ವಪ್ನಫಲವು ಕಾಣುವುದರಿಂದಲೂ ಸ್ವಾಪ್ನಾರ್ಥವನ್ನು ತಿಳಿದ ವ್ಯಾಸಾದಿಗಳು ಸತ್ಯವೆಂದೇ ಹೇಳುತ್ತಾರೆ.

೧ನೇ ಪಾದದಲ್ಲಿ **'ಯೋನೇಃ ಶರೀರಂ'** ಎನ್ನುವ ಪರ್ಯಂತವಿರುವ ಸೂತ್ರಗಳಿಂದ ಜೀವನಿಗೆ ಉತ್ಪತ್ತಿಯು ಇದೆ ಎಂದು ಸಿದ್ಧವಾಗಿದೆ. ಹುಟ್ಟಿದವನಿಗೆ ಸ್ವಪ್ನಾದ್ಯವಸ್ಥಾ ಸಂಬಂಧವು ಪ್ರಸಿದ್ಧವಾಗಿದೆ. ಅದರಲ್ಲಿ ಶ್ರೀಹರಿಗೆ ಸತ್ಯಸ್ವಪ್ನಾವಸ್ಥಾ ಪ್ರವರ್ತಕತ್ವರೂಪವಾದ ಮಹಾಮಹಿಮೆಯನ್ನು ಈ ಸಂಧ್ಯಾಧಿಕರಣದಲ್ಲಿ ನಿರೂಪಿಸುತ್ತಾರೆ.

ಸ್ವಾಪ್ನ ಪದಾರ್ಥಗಳಿಗೆ ನಿಮಿತ್ತಕಾರಣ, ಉಪಾದಾನಕಾರಣ ಮತ್ತು ನಿರ್ಮಿಸತಕ್ಕ ಕರ್ತೃ ಇವುಗಳೆಲ್ಲಾ ಕೂಡಿರುವುದರಿಂದ ಸ್ವಾಪ್ನಪದಾರ್ಥಗಳು ಸತ್ಯಗಳಲ್ಲವೆಂದು ಹೇಳುವವರ ಮತ ರೀತ್ಯಾ ಪೂರ್ವಪಕ್ಷಮಾಡಿಕೊಂಡು, ನಿಮಿತ್ತಕಾರಣಾದಿಗಳನ್ನೂ ನಿರೂಪಿಸಿ ಸತ್ಯತ್ವವನ್ನು ಸಮರ್ಥಿಸುತ್ತಾರೆ. ಹೇಗೆಂದರೆ—ಸ್ವಪ್ನವು ಅರ್ಥಜ್ಞಾನರೂಪವಾದುದು. ಅದರಲ್ಲಿ ಸ್ವಪ್ನ ಕಾಲದಲ್ಲಿರತಕ್ಕ ಗಜ ಅಶ್ವಮೊದಲಾದವುಗಳು ಅಸತ್ಯಗಳೇ ಆಗಿರುವುದರಿಂದ ಅವುಗಳಿಗೆ

ಶ್ರೀಪರಮಾತ್ಮನ ಅಧೀನತ್ವವು ಕೂಡಲಾರದು. ಇವುಗಳು ಅನಾದಿನಿತ್ಯಗಳೆಂದು ಹೇಳಲಿಕ್ಕೆ ಬರುವುದಿಲ್ಲ, ಹಾಗಾಗಿದ್ದರೆ ಸ್ವಪ್ನಾವಸ್ಥೆಗಿಂತ ಮೊದಲೂ ಮೇಲೆಯೂ ತೋರಬೇಕಾಗುವುದು. ಮತ್ತು ಈ ಪದಾರ್ಥಗಳು ಮಧ್ಯಮಪರಿಮಾಣವುಳ್ಳವುಗಳಾಗಿ ಕಾಣುತ್ತವೆ ಮಧ್ಯಮಪರಿಮಾಣ ವುಳ್ಳವುಗಳು, ಅನಾದಿನಿತ್ಯಗಳಾಗಿ ಎಲ್ಲಿಯೂ ತೋರಿಬರಲಿಲ್ಲ. ಆದುದರಿಂದಲೂ ಅವುಗಳು ಅನಾದಿನಿತ್ಯಗಳೆಂದುಹೇಳಲಿಕ್ಕೆ ಬರುವುದಿಲ್ಲ. ಮತ್ತು ಅವುಗಳು ಉತ್ಪತ್ತಿವಿನಾಶವುಳ್ಳವುಗಳೆಂದೂ ಹೇಳಲಿಕ್ಕೆ ಬರುವುದಿಲ್ಲ. ಹಾಗಾಗಿದ್ದರೂ ಘಟಾದಿಗಳಂತೆಯೂ ಮೊದಲೂ ಮೇಲೆಯೂ ತೋರಬೇಕಾಗುವುದು ಮಿಂಚುಮೊದಲಾದವುಗಳಂತೆ ಆ ಕಾಲದಲ್ಲಿಯೇ ಹುಟ್ಟುತ್ತವೆ. ಆ ಕಾಲದಲ್ಲಿಯೇ ನಾಶವನ್ನು ಹೊಂದುತ್ತವೆಂದು ಹೇಳುವವಿಷಯದಲ್ಲಿ ಪ್ರಮಾಣವಿಲ್ಲ. ಮತ್ತು ಇವುಗಳಿಗೆ ಉಪಾದಾನಕಾರಣವೂ ನಿಮಿತ್ತಕಾರಣವೂ ಕಾಣುವುದಿಲ್ಲ. ಮತ್ತು ಜೀವಾತ್ಮನಿಗೆ ಸ್ವಪ್ನಕಾಲದಲ್ಲಿ ವ್ಯಾಪಾರವೇ ಇಲ್ಲದಿರುವುದರಿಂದಲೂ ಈಶ್ವರನು ಕರ್ತನು ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಜೀವನಾಗಲೀ ಈಶ್ವರನಾಗಲೀ ಕರ್ತರೆಂದು ಹೇಳಲಿಕ್ಕೆ ಬರುವುದಿಲ್ಲ. ಮತ್ತು ಸ್ವಪ್ನಕಾಲದಲ್ಲಿ ಬರುವ ಜ್ಞಾನವು ನಿಮಿತ್ತಕಾರಣವೇ ಇಲ್ಲದಿರುವುದರಿಂದ ಅದು ಸತ್ಯವೆಂದು ಹೇಳಲಿಕ್ಕೆ ಬರುವುದಿಲ್ಲ. ಆ ಕಾಲದಲ್ಲಿ ಚಕ್ಷುರಾದಿ ಇಂದ್ರಿಯಗಳು ನಿರ್ವ್ಯಾಪಾರಗಳಾಗಿರುವುದರಿಂದಲೂ ಮನಸ್ಸಿಗೂ ಮತ್ತು ಸಾಕ್ಷಿಗೂ ರೂಪಾದಿಗಳುಳ್ಳ ವಸ್ತುಗಳನ್ನು ತಿಳಿಸಲಿಕ್ಕೆ ಸಾಮರ್ಥ್ಯವಿಲ್ಲದಿರುವುದರಿಂದಲೂ ಇವುಗಳು ನಿಮಿತ್ತಕಾರಣಗಳೆಂದು ಹೇಳಲಿಕ್ಕೆ ಬರುವುದಿಲ್ಲ. ಮತ್ತು ಆ ಕಾಲದಲ್ಲಿ ಚಕ್ಷುರಾದಿ ಇಂದ್ರಿಯದಿಂದ ಲಿಂಗಜ್ಞಾನವಾಗಲೀ ಶಬ್ದಜ್ಞಾನವಾಗಲೀ ಬಾರದಿರುವುದರಿಂದ ಅನುಮಾನದಿಂದಲಾಗಲೀ ಆಗಮದಿಂದಲಾಗಲೀ ಸ್ವಪ್ನಕಾಲದಲ್ಲಿ ತೋರುವ ಪದಾರ್ಥಜ್ಞಾನವು ಬರುತ್ತದೆಂದು ಹೇಳಲಿಕ್ಕೆ ಬರುವುದಿಲ್ಲ. ಆದುದರಿಂದ ಅಸತ್ಯವಾದ ಅರ್ಥಜ್ಞಾನರೂಪವಾದ ಸ್ವಪ್ನಾವಸ್ಥೆಯು ಈಶ್ವರಾಧೀನವಲ್ಲ, ಎಂದು ಪೂರ್ವಪಕ್ಷ ಬಂದರೆ ಆ ಪೂರ್ವಪಕ್ಷವನ್ನು ನಿರಾಕರಿಸುತ್ತಾ ಉಪಾದಾನಾದಿಗಳನ್ನು ನಿರೂಪಿಸಿ ಅವುಗಳಿಗೆ ಸತ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಉಪೋದ್ಘಾತವನ್ನು ಹೇಳುತ್ತಾರೆ—

**ಮೂ ॥ ವಾಸನಾಸ್ಸರ್ವವಸ್ತೂನಾಮನಾದ್ಯನುಭವಾಗತಾಃ ।**
**ಸಂತ್ಯೇವಾಶೇಷಜೀವಾನಾಮನಾದಿ ಮನಸಿ ಸ್ಥಿತಾಃ ॥ ೫ ॥**
**ತ್ರಿಗುಣಾತ್ಮಕಂ ಮನೋಽಸ್ತ್ಯೇವ ಯಾವನ್ಮುಕ್ತಿಸ್ಸದಾತನಂ ।**
**ತತ್ರೈವಾಶೇಷಸಂಸ್ಕಾರಾಃ ಸಂಚೀಯಂತೇ ಸದೈವ ಚ ॥ ೬ ॥**

ಅ ॥ ಅಶೇಷಜೀವನಾಂ=ಎಲ್ಲಾ ಜೀವರಿಗೂ, ಅನಾದ್ಯನುಭವಾಗತಾಃ=ಅನಾದ್ಯನುಭವ ಪ್ರವಾಹಗಳಿಂದ ಹುಟ್ಟಿರುವ, ಅನಾದಿಮನಸಿ ಸ್ಥಿತಾಃ = ಅನಾದಿಯಾದ ಮನಸ್ಸಿನಲ್ಲಿರುವ, ಸರ್ವವಸ್ತೂನಾಂ = ಎಲ್ಲಾವಸ್ತುಗಳ, ವಾಸನಾಃ = ಭಾವನಾಪರನಾಮಕ ಸಂಸ್ಕಾರಗಳು, ಸಂತ್ಯೇವ=ಯಾವಾಗಲೂ ಇರುತ್ತವೆ. ಯಾವನ್ಮುಕ್ತಿಃ=ಮುಕ್ತಿಯಾಗುವತನಕ, ಸದಾತನಂ= ನಿತ್ಯವಾದ, ತ್ರಿಗುಣಾತ್ಮಕಂ=ಸತ್ವಾದಿಗುಣತ್ರಯಾತ್ಮಕವಾದ, ಮನಃ=ಮನಸ್ಸು, ಅಸ್ತ್ಯೇವ= ಇದ್ದೇ ಇದೆ. ತತ್ರೈವ=ಮನಸ್ಸಿನಲ್ಲಿಯೇ, ಚ=ಆದುದರಿಂದ, ಸದೈವ=ಯಾವಾಗಲೂ, ಅಶೇಷ ಸಂಸ್ಕಾರಾಃ=ಎಲ್ಲಾ ಸಂಸ್ಕಾರಗಳೂ, ಸಂಚೀಯಂತೇ=ಸಂಗ್ರಹೀತಗಳಾಗಿರುತ್ತವೆ.

**ತಾ ॥** (1) ೧ 'ಜೀವಾತ್ಮಾ ನ ಭಾವಾನಾಶ್ರಯಃ ಸತ್ವಾದಿ ಗುಣಾನಾತ್ಮಕತ್ವಾತ್ ಈಶ್ವರವತ್' ೨ 'ಭಾವನಾ ವಾ ಸತ್ವಾದಿ ಗುಣಾತ್ಮಕ ದ್ರವ್ಯಾಶ್ರಯಾ ಸಂಸ್ಕಾರತ್ವಾತ್

ವೇಗಾದಿವತ್' ೧ ಜೀವಾತ್ಮನು ಸಂಸ್ಕಾರಕ್ಕೆ ಆಶ್ರಯನಲ್ಲ. ಸತ್ವಾದಿ ಗುಣಸ್ವರೂಪನಾಗದೆ ಇದ್ದಪ್ರಯುಕ್ತ ಈಶ್ವರನಂತೆ. ೨ ಸಂಸ್ಕಾರವಾಗಲೀ ಸತ್ವಾದಿ ಗುಣಾತ್ಮಕ ದ್ರವ್ಯವನ್ನು ಆಶ್ರಯಿಸಿ ಕೊಂಡು ಇರತಕ್ಕದ್ದು ಅಲ್ಲ, ಸಂಸ್ಕಾರವಾಗಿರುವುದರಿಂದ ವೇಗಾದಿಗಳಂತೆ; ಆದುದರಿಂದ ಪರಿಶೇಷಪ್ರಮಾಣದಿಂದ ಸಂಸ್ಕಾರಾಶ್ರಯವಾದುದು ಮನಸ್ಸೇ ಎಂದು ಸಿದ್ಧವಾಯಿತು. (2)ಸತ್ವಾದಿಗುಣಗಳನ್ನು ಅಂಗೀಕರಿಸದೆ ಇರುವವನನ್ನು ಕುರಿತು ಸತ್ವಾದಿ ಗುಣ ಎನ್ನುವುದರ ಸ್ಥಾನದಲ್ಲಿ ಅಚೇತನ ಪದವನ್ನು ಪ್ರಯೋಗಿಸಿ 'ಅಚೇತನಾನಾತ್ಮಕತ್ವಾತ್' ಎಂದು ಪ್ರಯೋಗಿಸಬೇಕು. (3) '**ತದ್ವೈ ದೈವಂ ಮನೋ ಯೇನಾನಂದ್ಯೇವ ಭವತಿ**' ಎಂದು ಮುಕ್ತಿಯಲ್ಲಿಯೂ ಆತ್ಮನಿಗೆ ಮನಸ್ಸಂಬಂಧವು ಶ್ರುತವಾದಪ್ರಯುಕ್ತ ಮನಸ್ಸು ಸ್ವರೂಪತಃ ನಿತ್ಯವೇ, ಆದಾಗ್ಯೂ ಜಡವಾದ (ಪ್ರಾಕೃತ) ಮನಸ್ಸನ್ನು ಇಟ್ಟುಕೊಂಡು 'ಯಾವನ್ಮುಕ್ತಿಃ' ಎಂದು ಮನಸ್ಸಿಗೆ ಜೀವಸಂಬಂಧವು ಮೋಕ್ಷಪರ್ಯಂತವಾಗಿ ಎಂದು ಹೇಳಿದ್ದು. ॥ ೫ ॥ ೬ ॥

'**ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ**' ಎಂದು ಮನಸ್ಸಿಗೆ ಉತ್ಪತ್ತಿಯು ಶ್ರುತವಾದಪ್ರಯುಕ್ತ ಅನಾದಿತ್ವವನ್ನು ಹೇಗೆ ಹೇಳಿದ್ದು ಎಂದರೆ—

**ಮೂ ॥ ಸೂಕ್ಷ್ಮತ್ವೇನ ಲಯೇ ಸಚ್ಚ ಪ್ರಾಕೃತೈರುಪಚೀಯತೇ ।**
**ಸೃಷ್ಟಿಕಾಲೇ ಯದಾ ತನ್ನ ಕುತಃ ಸಂಸಾರಸಂಸ್ಥಿತಿಃ ॥ ೭ ॥**
**ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ।**
**ಸ್ವಪ್ನಕಾಲೇ ದರ್ಶಯತಿ ಭ್ರಾಂತಿರ್ಜಾಗ್ರತ್ವಮೇವ ಹಿ ॥ ೮ ॥**

ಅ ॥ (ಮನಃ=ಮನಸ್ಸು,) ಸೂಕ್ಷ್ಮತ್ವೇನ=ಸೂಕ್ಷ್ಮರೂಪದಿಂದ, ಲಯೇ=ಪ್ರಲಯಕಾಲದಲ್ಲಿ, ಸಚ್ಚ=ಇರತಕ್ಕದೇ. (ಮನಸ್ಸು) ಪ್ರಾಕೃತೈಃ=ಅಹಂಕಾರಾದಿಗಳಿಂದ, ಉಪಚೀಯತೇ=ಸ್ಥೂಲವಾಗಿ ಮಾಡಲ್ಪಡುತ್ತದೆ. ಯದಾ=ಯಾವಾಗ, ಸೃಷ್ಟಿಕಾಲೇ=ಸೃಷ್ಟಿಕಾಲದಲ್ಲಿ, ತತ್=ಮನಸ್ಸು, ನ=ಇಲ್ಲದಿದ್ದರೆ, (ಆಗ ಪ್ರಲಯಕಾಲದಲ್ಲಿ) ಸಂಸಾರ ಸಂಸ್ಥಿತಿಃ=ಸಂಸಾರಸ್ಥಿತಿಯು, ಕುತಃ=ಯಾವುದರಿಂದ ಆಗುವುದು? (ಹೀಗೆ ಸರ್ವವಸ್ತುಗಳ ಅನುಭವದಿಂದುಂಟಾದ ಸಂಸ್ಕಾರವು ಇರುವುದಾದರೆ ಇದರಿಂದ ಪ್ರಕೃತವೇನಾಯಿತೆಂದರೆ—) ಭಗವಾನೇವ=ಶ್ರೀ ಪರಮಾತ್ಮನೇ, ಸ್ವಪ್ನಕಾಲೇ=ಸ್ವಪ್ನಕಾಲದಲ್ಲಿ, ಸಂಸ್ಕಾರೈಃ=ಸಂಸ್ಕಾರರೂಪ ಉಪಾದಾನಕಾರಣಗಳಾದ ದ್ರವ್ಯಗಳಿಂದ, ನಾನಾವಿಧಂ=ಅನೇಕಪ್ರಕಾರವಾದ, ಜಗತ್=ಜಗತ್ತನ್ನು, ಸೃಷ್ಟ್ವಾ=ಸೃಷ್ಟಿಮಾಡಿ, ದರ್ಶಯತಿ=ತೋರಿಸುತ್ತಾನೆ. (ಅದರ ಜ್ಞಾನವನ್ನು ಹುಟ್ಟಿಸುತ್ತಾನೆ.) (ಹಾಗಾದರೆ ಶ್ರುತಿಸ್ಮೃತಿಗಳಲ್ಲಿ ಸ್ವಪ್ನಪ್ರತೀತಿಗೆ ಭ್ರಾಂತಿತ್ವವನ್ನು ಹೇಳಿದ್ದು ಹೇಗೆ ಕೂಡುತ್ತದೆಂದರೆ) ಜಾಗ್ರತ್ವಮೇವ=ಜಾಗ್ರದವಸ್ಥೆಯಲ್ಲಿ ಅನುಭೂತಗಳಾದ ಪದಾರ್ಥಗಳಿಂದ ಅಭೇದಪ್ರತೀತಿಯೇ, ಭ್ರಾಂತಿಃ=ಭ್ರಮೆಯು, ಹಿ=ಪ್ರಸಿದ್ಧವು. ಅಂದರೆ ಇದು ಸ್ವಾಪ್ನಪದಾರ್ಥವೇ. ಜಾಗ್ರದವಸ್ಥೆಯಲ್ಲಿ ಅನುಭೂತವಾದುದಲ್ಲವೆಂದು ಬಾಧಜ್ಞಾನವು ಬರುವುದರಿಂದ ಜಾಗ್ರದವಸ್ಥೆಯಲ್ಲಿ ಅನುಭೂತವಾದ ಪದಾರ್ಥವೇ ಇದು ಎನ್ನುವ ಅಭೇದಪ್ರತೀತಿಮಾತ್ರವೇ ಭ್ರಮವು. ಸ್ವಪ್ನದಲ್ಲಿ ತೋರುವ ಪದಾರ್ಥಜ್ಞಾನವು ಭ್ರಮೆಯಲ್ಲವೆನ್ನುವುದು ಪ್ರಸಿದ್ಧವು.

**ತಾ** ॥ (1) ಪ್ರಲಯಕಾಲದಲ್ಲಿ ಸೂಕ್ಷ್ಮವಾಗಿ ಮನಸ್ಸು ಇದ್ದಾಗ್ಯೂ ಸೃಷ್ಟಿಕಾಲದಲ್ಲಿ ಅದಕ್ಕೆ ಉಪಚಯವಿದ್ದುದರಿಂದ ಉತ್ಪತ್ತಿ ಶ್ರುತಿಯು ಕೂಡುತ್ತದೆ. (2) ಸೃಷ್ಟಿಕಾಲದಲ್ಲಿ ಮೊದಲು ಇಲ್ಲದೆ ಇದ್ದದ್ದೇ ಮನಸ್ಸು ಹುಟ್ಟುತ್ತದೆಂದೇ ಹೇಳಿದರೆ ಆಗ ಮನಸ್ಸು ಪ್ರಲಯಕಾಲದಲ್ಲಿ

ಇಲ್ಲವೆಂದೇ ಆಗಬೇಕಾಗುವುದು. ಪ್ರಲಯಕಾಲದಲ್ಲಿ ಮನಸ್ಸು ಇಲ್ಲದಿದ್ದರೆ ಆಗ ಮನಸ್ಸೇ ಕಾರಣವಾಗಿವುಳ್ಳ ಸಂಸಾರಸ್ಥಿತಿಯೂ ಇಲ್ಲವೆಂದಾಗಬೇಕಾಗುವುದು. ಸಂಸಾರವು ಇಲ್ಲದಿದ್ದರೆ ಸೃಷ್ಟಿಕಾಲದಲ್ಲಿ ಪುನಃ ಸೃಷ್ಟಿಯೇ ಕೂಡದೆ ಹೋಗಬೇಕಾಗುವುದು. ಸಂಸಾರಕ್ಕೆ ಮನಸ್ಸು ಕಾರಣವೆನ್ನುವುದು '**ನಿತ್ಯಂ ಮನೋಽನಾದಿತ್ವಾನ್ನಹ್ಯಮನಾಃ ಪುಮಾಂಸ್ತಿಷ್ಠತಿ ಮನಃ ಪರಂ ಕಾರಣಮಾಮನಂತಿ ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ**' ಇತ್ಯಾದಿ ಶ್ರುತಿಸ್ಮೃತಿಗಳಿಂದ ಸಿದ್ಧವಾಗಿದೆ. (೩) ಸ್ವಾಪ್ನಪದಾರ್ಥಗಳು ಅನಾದಿ ನಿತ್ಯಗಳೆಂದು ಹೇಳುವುದಿಲ್ಲ. ಸ್ವಪ್ನಕಾಲದಲ್ಲಿಯೇ ಉತ್ಪತ್ತಿವಿನಾಶವುಳ್ಳವುಗಳೆಂದು ಹೇಳುತ್ತೇವೆ. ಅವುಗಳಿಗೆ ಅನಾದಿಮನಸ್ಸಿನಲ್ಲಿರತಕ್ಕ ಸಂಸ್ಕಾರಾಖ್ಯ ದ್ರವ್ಯವೇ ಉಪಾದಾನಕಾರಣವು. ಈಶ್ವರನೇ ಕರ್ತನು (ನಿರ್ಮಿಸುವವನು). ಈಶ್ವರೇಚ್ಛಾ ಕಾಲ ಕರ್ಮಾದಿಗಳೇ ನಿಮಿತ್ತ ಕಾರಣಗಳು. (4) ಇಂತಹ ಸ್ವಪ್ನದಲ್ಲಿ ತೋರುವ ಪದಾರ್ಥಜ್ಞಾನವು ಮನಸ್ಸಿನಿಂದಲೇ ಉಂಟಾಗುತ್ತದೆ. ಆದುದರಿಂದ ಸ್ವಾಪ್ನಜ್ಞಾನಕ್ಕೆ ಕಾರಣವಿಲ್ಲವೆನ್ನುವುದೂ ಕೂಡುವುದಿಲ್ಲ. ಏವಂಚ ಬೇರೆಯಾರಿಂದಲೂ ಸೃಷ್ಟಿಮಾಡಲಿಕ್ಕೆ ಅಶಕ್ಯವಾದ ವಿಚಿತ್ರಪದಾರ್ಥಗಳನ್ನು ಸೃಷ್ಟಿಮಾಡತಕ್ಕ ಶಕ್ತಿಯುಳ್ಳ ಶ್ರೀ ಹರಿಯು ಸ್ವಪ್ನಕಾಲದಲ್ಲಿ ಅನಾದಿ ಮನಸ್ಸಿನಲ್ಲಿರತಕ್ಕ ಸಂಸ್ಕಾರಗಳಿಂದ ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿಮಾಡಿ ಜೀವರಿಗೆ ಅವುಗಳ ಜ್ಞಾನವನ್ನೂ ಹುಟ್ಟಿಸುತ್ತಾನೆ. ಆದುದರಿಂದ ಸ್ವಪ್ನಕಾಲದಲ್ಲಿ ತೋರತಕ್ಕ ಪದಾರ್ಥಗಳೂ ಜ್ಞಾನಗಳೂ ಸತ್ಯಗಳಾಗಿರುವುದರಿಂದ ಶ್ರೀ ಹರಿಗೆ ಸ್ವಪ್ನಾವಸ್ಥಾಪ್ರವರ್ತಕತ್ವರೂಪಮಹಾಮಹಿಮೆಯು ಯುಕ್ತವೇ. ॥ ೭ ॥ ೮ ॥

ಜಾಗ್ರತ್ಪ್ರತೀತಿಯೇ ಭ್ರಾಂತಿಯೆನ್ನುವುದು ಅಯುಕ್ತವು. ಸ್ವಪ್ನಕಾಲದಲ್ಲಿ ತೋರುವ ಕೆಲವು ಅರ್ಥಗಳೂ ಅಸತ್ತಾದುದರಿಂದ ಅವುಗಳ ಪ್ರತೀತಿಯೂ ಭ್ರಾಂತಿಯೇ. ಹೇಗೆಂದರೆ— ಸ್ವಪ್ನದಲ್ಲಿ ತನ್ನ ಶಿರಃಚ್ಛೇದಾದಿಗಳೂ ತೋರುತ್ತವೆ. ಶಿರಃಚ್ಛೇದಾದಿಗಳು ಆಗಲಿಕ್ಕೆ ಉಪಾದಾನ ಕಾರಣವಿಲ್ಲ. ಮೊದಲು ಅನುಭೂತವಾಗದಿರುವುದರಿಂದ ಆ ವಿಷಯದಲ್ಲಿ ಸಂಸ್ಕಾರವೇ ಹುಟ್ಟಲಾರದು. ಅನುಭೂತವಾಗದಿದ್ದ ಅರ್ಥವಿಷಯದಲ್ಲಿಯೂ ಸಂಸ್ಕಾರೋತ್ಪತ್ತಿಯಾಗುತ್ತದೆಂದು ಅಂಗೀಕರಿಸಿದರೆ 'ಅದೃಷ್ಟೇ ಚಾಶ್ರುತೇ' ಇತ್ಯಾದಿ ಶ್ರುತಿ ಸ್ಮೃತಿವಿರೋಧವು ಬರುವುದು. ಆದಕಾರಣ ಕೆಲವುವೇಳೆ ಸ್ವಪ್ನದಲ್ಲಿ ತೋರುವ ತನ್ನ ಶಿರಃಚ್ಛೇದಾದಿಗಳಿಗೆ ಸಂಸ್ಕಾರರೂಪ ಕಾರಣವೇ ಇಲ್ಲದಿರುವುದರಿಂದ ಅವುಗಳಿಗೆ ಅಸತ್ವವನ್ನು ಅಂಗೀಕರಿಸಲೇಬೇಕು. ಆದುದರಿಂದ ಸ್ವಪ್ನದಲ್ಲಿ ತೋರುವ ಎಲ್ಲಾ ಪದಾರ್ಥಗಳೂ ಸತ್ಯಗಳೆಂದು ಹೇಳಲಿಕ್ಕೆ ಬರುವುದಿಲ್ಲ, ಎಂದಾ ಶಂಕಿಸಿದರೆ—

**ಮೂ ॥ ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ ।**
**ಅದೃಷ್ಟಾದಶ್ರುತಾದ್ಭಾವಾನ್ನ ಭಾವ ಉಪಜಾಯತೇ ।**
**ಇತಿ ಶ್ರುತಿಪುರಾಣೋಕ್ತಿರನಾದಿತ್ವಾತ್ತು ಯುಜ್ಯತೇ ॥ ೯ ॥**

ಅ ॥ ಅದೃಷ್ಟೇ=ಕಾಣಲ್ಪಡದೆ ಇದ್ದ, ಅಶ್ರುತೇ ಚ=ಕೇಳಲ್ಪಡದೆ ಇದ್ದ, ಭಾವೇ = ಪದಾರ್ಥ ವಿಷಯದಲ್ಲಿ, ಭಾವಃ=ಸಂಸ್ಕಾರವು, ನ ಉಪಜಾಯತೇ=ಹುಟ್ಟುವುದಿಲ್ಲ. ಅದೃಷ್ಟಾತ್=ಕಾಣಲ್ಪಡದೆ ಇರುವ, ಅಶ್ರುತಾತ್=ಕೇಳಲ್ಪಡದೆ ಇರುವ, ಭಾವಾತ್=ಪದಾರ್ಥದಲ್ಲಿ, ಭಾವಃ=ಸಂಸ್ಕಾರವು, ನೋಪಜಾಯತೇ = ಹುಟ್ಟುವುದಿಲ್ಲ. ಇತಿ=ಹೀಗೆ, ಶ್ರುತಿಪುರಾಣೋಕ್ತಿಸ್ತು=ಶ್ರುತಿ ಮತ್ತು ಪುರಾಣಗಳ ಉಕ್ತಿಯಾದರೂ, ಅನಾದಿತ್ವಾತ್=ಸಂಸಾರಕ್ಕೆ ಅನಾದಿತ್ವ ವಿದ್ದಪ ಯುಕ್ತ್ಯ, ಯುಜ್ಯತೇ=ಕೂಡುತ್ತದೆ.

ತಾ || ಸಂಸಾರವು ಅನಾದಿಯಾದುದರಿಂದ ಯಾವುದಾದರೊಂದು ಜನ್ಮದಲ್ಲಿ ತನ್ನ ಶಿರಚ್ಛೇದಾದಿಗಳ ವಿಷಯದಲ್ಲಿಯೂ ಅನುಭವವು ಕೂಡುವುದರಿಂದ ಆ ವಿಷಯದಲ್ಲಿ ಸಂಸ್ಕಾರವು ಕೂಡುತ್ತದೆ. ಮತ್ತು 'ತವ ಶಿರಃ ಚ್ಛಿನ್ನಂ' ಎನ್ನುವ ವಾಕ್ಯಶ್ರವಣದಿಂದ ತನ್ನ ಶಿರಃಚ್ಛೇದಾದಿಗಳ ಅನುಭವವು ಬರುವುದರಿಂದ ಆ ವಿಷಯದಲ್ಲಿ ಸಂಸ್ಕಾರವು ಈ ಜನ್ಮದಲ್ಲಿಯೂ ಕೂಡಬಹುದು. ಯಾರು ಇಂತಹ ವಾಕ್ಯವನ್ನು ಈ ಜನ್ಮದಲ್ಲಿ ಕೇಳಲೇ ಇಲ್ಲವೋ, ಅಂತಹವನಿಗೆ ಸಂಸಾರವು ಅನಾದಿಯಾದುದರಿಂದ ಈ ಜನ್ಮದಲ್ಲಿ ಇಂತಹ ಅನುಭವವು ಇಲ್ಲದಿದ್ದರೂ ಜನ್ಮಾಂತರದಲ್ಲಿ ಹುಟ್ಟಿದ ಅನುಭವದಿಂದ ಜನ್ಮಾಂತರದಲ್ಲಿ ಹುಟ್ಟತಕ್ಕ ಅಂತಹ ಸಂಸ್ಕಾರವು ಕೂಡಬಹುದೆಂದು ಹೇಳಿದ್ದು. ಏವಂಚ ತನ್ನ ಶಿರಃಚ್ಛೇದಾದಿಗಳ ವಿಷಯದಲ್ಲಿಯೂ ಸಂಸ್ಕಾರಾದಿರೂಪಕಾರಣವು ಕೂಡುವುದರಿಂದ ಅವುಗಳೂ ಸ್ವಪ್ನದಲ್ಲಿ ತೋರತಕ್ಕವುಗಳು ಸತ್ಯಗಳೆಂದು ಹೇಳಿದರೆ ಯಾವ ಅನುಪಪತ್ತಿಯೂ ಇರುವುದಿಲ್ಲ. ಆದುದರಿಂದ ಸ್ವಪ್ನದಲ್ಲಿ ತೋರುವ ಪದಾರ್ಥಗಳು ಸತ್ಯಗಳೇ. || ೯ ||

(1) ಹಾಗಾದರೆ ಸ್ವಪ್ನದಲ್ಲಿ ಶಶವಿಷಾಣಾದಿಗಳ ಪ್ರತೀತಿಯು ಹೇಗೆ ಕೂಡುತ್ತದೆ? ಯಾವ ಜನ್ಮದಲ್ಲಿಯೂ ಶಶವಿಷಾಣಾದಿಗಳ ಅನುಭವವು ಬರಲಿಲ್ಲವಷ್ಟೆ! **'ಧಾತಾ ಯಥಾ ಪೂರ್ವಮಕಲ್ಪಯತ್'** ಎಂದು ಶ್ರುತಿಯಿದ್ದುದರಿಂದ ಎಲ್ಲಾ ಕಲ್ಪಗಳಲ್ಲಿಯೂ ಶಶಕ್ಕೆ ವಿಷಾಣವಿಲ್ಲವೆನ್ನುವುದು ಸರಿಯಷ್ಟೆ! ಎಂದರೆ— ಹೀಗೆ ಹೇಳಕೂಡದು. ಶಶವಿಷಾಣಾದಿಗಳ ಯಥಾರ್ಥಜ್ಞಾನವಿಲ್ಲವಾದರೂ 'ಶಶವಿಷಾಣಮಸ್ತಿ' ಎನ್ನುವ ಶಬ್ದಾದಿಗಳಿಂದ ಅದರ ಭ್ರಮೆಯು ಕೂಡುವುದರಿಂದ ಅದರ ಸಂಸ್ಕಾರವು ಕೂಡಬಹುದು. (2) ಯಾರಿಗೆ ಜಾಗ್ರದ್ದೆಶೆಯಲ್ಲಿ ಶಬ್ದಾದಿಗಳಿಂದಲೂ ಶಶವಿಷಾಣಾದಿವಿಷಯಕ ಭ್ರಮೆಯೂ ಬರಲೇಇಲ್ಲವೋ, ಅಂತಹವರಿಗೆ ಸಂಸ್ಕಾರವೇ ಇಲ್ಲದಿರುವುದರಿಂದ ಸ್ವಪ್ನದಲ್ಲಿ ಶಶವಿಷಾಣಾದಿಗಳ ಪ್ರತೀತಿಯು ಹೇಗೆ? ಅಂತಹವರಿಗೆ ಶಶವಿಷಾಣಾದಿಗಳ ಪ್ರತೀತಿಯು ಸ್ವಪ್ನದಲ್ಲಿ ಬರುವುದೇ ಇಲ್ಲವೆಂದು ನಿರ್ಬಂಧಿಸಲಿಕ್ಕೆ ಸಾಧ್ಯವಿಲ್ಲ. (3) ಇಲ್ಲಿ ೧ ಸ್ವಪ್ನದಲ್ಲಿ ತೋರುವ ಶಶಾದಿಗಳಿಗೂ ವಿಷಾಣಾದಿಗಳಿಗೂ ಉಪಾದಾನಕಾರಣವಿಲ್ಲದಿರುವುದರಿಂದ ಅವುಗಳಿಗೆ ಅಸತ್ವವನ್ನು ಹೇಳುತ್ತೀರೋ, ೨ ಅಥವಾ ಶಶತ್ವಾದಿ ವಿಷಾಣತ್ವಾದಿಗಳ ಸಾಮಾನಾಧಿಕರಣ್ಯಾದಿಗಳಿಗೆ ಉಪಾದಾನಕಾರಣವಿಲ್ಲದಿರುವುದರಿಂದ ಅಸತ್ವವನ್ನು ಹೇಳುತ್ತೀರೋ, ಇವುಗಳಲ್ಲಿ ಒಂದನೇದ್ದನ್ನು ನಿರಾಕರಿಸುತ್ತಾರೆ—

**ಮೂ || ಕದಾಚಿದ್ದರ್ಶನಾಯೋಗ್ಯಂ ಯತ್ತತ್ರಾಪಿ ವಿಭಾಗತಃ || ೧೦ ||**
**ದೃಷ್ಟಂ ಸಮಾಧಿಕರಣಂ ದೃಶ್ಯತೇಽತ್ರ (ಚ) ಸ ಚ ಭ್ರಮಃ |**
**ವಾಸನಾಮಾತ್ರ ಮೂಲತ್ವಾಜ್ಜಾಗ್ರದ್ವತ್ಸ್ವಪ್ನತಾ ನ ಚ || ೧೧ ||**

ಅ || ಕದಾಚಿತ್ = ಯಾವಾಗಲೂ, ದರ್ಶನಾಯೋಗ್ಯಂ=ನೋಡಲಿಕ್ಕೆ ಅಯೋಗ್ಯವಾದುದು, ಯತ್ = ಯಾವ ಶಶವಿಷಾಣಾದಿಯು, (ಸ್ವಪ್ನೇ = ಸ್ವಪ್ನದಲ್ಲಿ,) ದೃಶ್ಯತೇ= ಕಾಣಲ್ಪಡುತ್ತದೋ, ತತ್ರಾಪಿ=ಅಲ್ಲಿಯೂ, ವಿಭಾಗತಃ=ಸಾಮಾನಾಧಿಕರಣ್ಯವಿಲ್ಲದೆ ಶಶತ್ವವಿಷಾಣಿತ್ವಾದಿಗಳು ಪ್ರತ್ಯೇಕವಾಗಿ, ದೃಷ್ಟಂ=ಜಾಗರಾವಸ್ಥೆಯಲ್ಲಿ ಕಾಣಲ್ಪಟ್ಟದೆ. (ಯದ್ಯಪಿ ಶಶತ್ವವಿಷಾಣಿತ್ವಾದಿಗಳಿಗೆ ಸಾಮಾನಾಧಿಕರಣ್ಯವಾಗಲೀ, ಶಶವಿಷಾಣಾದಿಗಳಿಗೆ ಸಂಬಂಧವಿಶೇಷವಾಗಲೀ ಜಾಗ್ರದವಸ್ಥೆಯಲ್ಲಿ ಅನುಭೂತವಾಗಲಿಲ್ಲ. ಆದಾಗ್ಯೂ ಪ್ರತ್ಯೇಕವಾಗಿ ಶಶತ್ವಾದಿಗಳು ಅನುಭೂತವೇ ಆಗಿವೆ. ಆದಕಾರಣ ಅವುಗಳ ಸಂಸ್ಕಾರವು ಕೂಡುವುದರಿಂದ

ಶಶಾದಿಗಳಿಗೆ ಅಸತ್ವವನ್ನು ಹೇಳಕೂಡದು.) (೨ನೇ ಕಲ್ಪದಲ್ಲಿ ಶಶತ್ವಾದಿವಿಷಾಣಿತ್ವಾದಿಗಳ ಸಾಮಾನಾಧಿಕರಣ್ಯದಲ್ಲಿ ಉಪಾದಾನಕಾರಣವಿಲ್ಲದಿರುವುದರಿಂದ ಅವುಗಳಿಗೆ ಅಸತ್ವವು ಸಮ್ಮತವೇ ಎಂದು ಉತ್ತರವನ್ನು ಹೇಳುತ್ತಾರೆ.) ಸಮಾಧಿಕರಣಂ = ಸಾಮಾನಾಧಿಕರಣ್ಯವು, ಮತ್ತು ಯಾವುದಕ್ಕೆ ಉಪಾದಾನವಿಲ್ಲವೋ ಬಾಧವು ಇದೆಯೋ ಅವೆಲ್ಲವೂ) ಯತ್ = ಯಾವುದು, ದೃಶ್ಯತೇ ಸ್ವಪ್ನದಲ್ಲಿ ಕಾಣಲ್ಪಡುತ್ತದೋ, ಸ ಚ=ಆ ಜ್ಞಾನವೂ ಜಾಗ್ರತ್ಪದಾರ್ಥಾಭೇದ ಪ್ರತೀತಿಯಂತೆ, ಭ್ರಮಃ = ಭ್ರಾಂತಿಯೇ. (ಯಾವ ಪದಾರ್ಥಕ್ಕೆ ಉಪಾದಾನಕಾರಣವು ಕೂಡುತ್ತದೋ, ಬಾಧಜ್ಞಾನವು ಇಲ್ಲವೋ, ಸ್ವಪ್ನದಲ್ಲಿ ತೋರುವ ಆ ಪದಾರ್ಥಜ್ಞಾನವು ಯಥಾರ್ಥವೇ.) ಭ್ರಮಃ=ಭ್ರಾಂತಿಯು, (ಸ್ವಾಪ್ನಾರ್ಥಗಳಿಗೆ ಸಂಸ್ಕಾರವು ಉಪಾದಾನಕಾರಣವು ಇತ್ಯಾದಿವಿಷಯದಲ್ಲಿ ಪ್ರಮಾಣವು ಇರುತ್ತಿದ್ದರೆ ಇದೆಲ್ಲಾ ಕೂಡುತ್ತಿತ್ತು. ಈ ವಿಷಯದಲ್ಲಿ ಪ್ರಮಾಣವು ಇಲ್ಲ ಎಂದರೆ) ವಾಸನಾಮಾತ್ರಮೂಲತ್ವಾತ್=ಸಂಸ್ಕಾರಮಾತ್ರವು ಉಪಾದಾನ ಕಾರಣವಾಗಿರುವುದರಿಂದಲೇ (ಸ್ವಾಪ್ನಾರ್ಥಗಳಿಗೆ,) ಜಾಗ್ರದ್ವತ್ = ಜಾಗ್ರದವಸ್ಥೆಯಲ್ಲಿ ಅನುಭೂತಗಳಾದ ಪದಾರ್ಥಗಳಂತೆ, ಸ್ಪಷ್ಟತಾ = ಬಾಹ್ಯಾರ್ಥ ಕ್ರಿಯಾಸಾಮರ್ಥ್ಯರೂಪ ವಾದುದು, ನ ಚ=ಇಲ್ಲ.

**ತಾ ||** (1) ೧ 'ಸ್ವಾಪ್ನಾಃ ಘಟಾದಯಃ ನಾಸಂತಃ ಬಾಧಾಭಾವಾತ್' = ಸ್ವಾಪ್ನಗಳಾದ ಘಟಾದಿಗಳು ಅಸತ್ತಲ್ಲ, ಬಾಧವಿಲ್ಲದಿರುವುದರಿಂದ ೨ ಸ್ವಾಪ್ನಾರ್ಥಗಳು ಅನಾದಿನಿತ್ಯಗಳೂ ಅಲ್ಲ, ಸ್ವಪ್ನಾವಸ್ಥೆಯಿಂದ ಮೊದಲೂ ಮೇಲೆಯೂ ತೋರದಿರುವುದರಿಂದ ಉಪಾದಾನ ಕಾರಣವಿಲ್ಲದೆ ಉತ್ಪತ್ತಿಯು ಕೂಡಲಾರದು. ಆದುದರಿಂದ ಅವಶ್ಯವಾಗಿ ಉಪಾದಾನಕಾರಣ ವನ್ನು ಅಂಗೀಕರಿಸಬೇಕು. ಸ್ವಾಪ್ನಾರ್ಥಗಳಿಗೆ ಬಾಹ್ಯಾರ್ಥಕ್ರಿಯೆಯಲ್ಲಿ ಸಾಮರ್ಥ್ಯವಿಲ್ಲದಿರು ವುದರಿಂದ ಬಾಹ್ಯ ಮೃದಾದಿಗಳು ಉಪಾದಾನಕಾರಣವಲ್ಲ. 'ವಿಮತಃ ಘಟಃ ನ ಬಾಹ್ಯ ಮೃದಾದ್ಯುಪಾದಾನಕಃ ಬಾಹ್ಯಮೃದಾದ್ಯುಪಾದಾನಕಾರ್ಥಕ್ರಿಯಾರಹಿತತ್ವಾತ್ ಪಟವತ್' ವಿವಾದವಿಷಯವಾದ ಈ ಘಟವು ಬಾಹ್ಯಮೃದಾದಿಗಳು ಉಪಾದಾನಕಾರಣವಾಗಿವುಳ್ಳದ್ದಲ್ಲ, ಬಾಹ್ಯಮೃದಾದಿಗಳೇ ಉಪಾದಾನಕಾರಣವಾಗಿವುಳ್ಳ ಅರ್ಥಗಳ ಭ್ರಮೆಗಳು ಇಲ್ಲದಿರುವುದರಿಂದ ಪಟದಂತೆ, ಎಂದನುಮಾನವು. ಬೇರೆ ಯಾವುದೂ ಉಪಾದಾನಕಾರಣವಿಲ್ಲ. ಆದಕಾರಣ ಪರಿಶೇಷಪ್ರಮಾಣದಿಂದ ಸಂಸ್ಕಾರವೇ ಉಪಾದಾನಕಾರಣವಾಗಿವುಳ್ಳವುಗಳು. (2) ಅವುಗಳನ್ನು ಶ್ರೀಹರಿಯು ಸೃಷ್ಟಿಸುವವನು ಎನ್ನುವಲ್ಲಿಯೂ ಅವುಗಳು ತತ್ಕಾಲದಲ್ಲಿಯೇ ಉತ್ಪತ್ತಿವಿನಾಶ ವುಳ್ಳವುಗಳು ಎನ್ನುವಲ್ಲಿಯೂ ಪರಿಶೇಷಾನುಮಾನವು ಪ್ರಮಾಣವು. ಮತ್ತು '**ಯ ಏಷ ಸುಪ್ತೇಷು ಜಾಗರ್ತಿ, ಏತಸ್ಮಾದ್ಧ್ಯೇವ ಪುತ್ರೋ ಜಾಯತೇ, ನ ತತ್ರರಥಾಃ**' ಇತ್ಯಾದಿ ಶ್ರುತಿಗಳೂ ಪ್ರಮಾಣವು. (3) ಇಷ್ಟು ಗ್ರಂಥದಿಂದ ೧ ಸಂಧ್ಯೇ ಸೃಷ್ಟಿರಾಹ ಹಿ ೨ ನಿರ್ಮಾ ತಾರಂ ಚೈಕೇ ಪುತ್ರಾದಯಶ್ಚ, ೩ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂ ಪತ್ವಾತ್ ಎಂದು ಈ ಮೂರು ಸೂತ್ರಗಳು ವ್ಯಾಖ್ಯಾತಗಳಾದುವು. || ೧೦ || ೧೧ ||

ಇಲ್ಲಿ ಮಾಯಾಮಾತ್ರಶಬ್ದದಿಂದ ಸ್ವಪ್ನಕ್ಕೆ ಅನಿರ್ವಚನೀಯತ್ವವನ್ನು ಪ್ರತಿಪಾದಿಸು ವುದಕ್ಕಾಗಿ ಮಾಯಾವಾದಿಯಿಂದ ಭೇದಾದಿ ವಿಕಲ್ಪ ಪ್ರಶ್ನೆಯಿಂದ ಯಾವುದು ದೂಷಣವು ಹೇಳಲ್ಪಟ್ಟದೋ, ಅಲ್ಲಿ ಪ್ರಶ್ನೆಯೇ ಅನುಪಪನ್ನವು. ದೂಷಣವನ್ನು ಹೇಳಿದ್ದು ಸುತರಾಂ ಕೂಡಲಾರದು ಎನ್ನುತ್ತಾರೆ.

ಮೂ ॥ ಭೇದೋಽಭೇದೋಽಥವಾ ದ್ವಂದ್ವಮಿತಿ ಪ್ರಶ್ನೋ ನ ಯುಜ್ಯತೇ ।
ದ್ರಷ್ಟುಃ ಸ್ವಪ್ನಸ್ಯ ದೃಷ್ಟತ್ವಾದ್ಭೇದಸ್ಯೈವಾಖಿಲೈರ್ಜನೈಃ ॥ ೧೨ ॥
ಪ್ರಶ್ನದೋಷಾ ಹಿ ಚತ್ವಾರಃ ಸ್ವವ್ಯಾಹತಿರಸಂಗತಿಃ ।
ಸಿದ್ಧಾರ್ಥತಾ ಚ ವೈಫಲ್ಯಂ ನ ತೈಃ ಸ್ಯಾತ್ತತ್ವನಿರ್ಣಯಃ ॥ ೧೩ ॥

ಅ ॥ ದ್ರಷ್ಟುಃ=ನೋಡತಕ್ಕ ದೇವದತ್ತನದೆಶೆಯಿಂದ, ಸ್ವಪ್ನಸ್ಯ=ಸ್ವಪ್ನದಲ್ಲಿ ತೋರತಕ್ಕ ರಥಾದಿಗಳಿಗೆ, ಭೇದಃ=ಭೇದವೋ, ಅಭೇದಃ=ಅಭೇದವೋ, ಅಥವಾ=ಅಲ್ಲವಾದರೆ, ದ್ವಂದ್ವಂ=ಭೇದಾಭೇದಗಳೋ, ಇತಿ=ಹೀಗೆ ವಿಕಲ್ಪಿಸಿ, ಪ್ರಶ್ನಃ=ಪ್ರಶ್ನವು, ನ ಯುಜ್ಯತೇ=ಕೂಡುವುದಿಲ್ಲ. (ಏಕೆಂದರೆ) ದ್ರಷ್ಟುಃ=ನೋಡತಕ್ಕ ಆತ್ಮನಸಕಾಶದೆಶೆಯಿಂದ, ಸ್ವಪ್ನಸ್ಯ=ಸ್ವಾಪ್ನಪದಾರ್ಥಕ್ಕೆ, ಭೇದಸ್ಯೈವ=ಭೇದಕ್ಕೇನೇ, ಅಖಿಲೈಃ ಜನೈಃ=ಎಲ್ಲಾ ಜನರಿಂದ, ದೃಷ್ಟತ್ವಾತ್=ಕಾಣಲ್ಪಟ್ಟ ಪ್ರಯುಕ್ತ, (ಅಂದರೆ ಸಂಶಯಮೂಲಕವಾದುದು ವಿಕಲ್ಪಪ್ರಶ್ನೆಯು. ಪ್ರಕೃತದಲ್ಲಿ ಸಂಶಯವೇ ಕೂಡುವುದಿಲ್ಲ. ಸ್ವಪ್ನ, ಸ್ವಪ್ನದ್ರಷ್ಟೃಪುರುಷ ಇವರಿಗೆ ಭೇದವನ್ನೇ ಎಲ್ಲವರೂ ಕಂಡುದರಿಂದ ವಿಪ್ರತಿಪತ್ತಿಯೇ ಇರುವುದಿಲ್ಲ.) (ನಿಶ್ಚಿತವಾದ ಅರ್ಥದಲ್ಲಿ ಸಂಶಯವು ಕೂಡುವುದಿಲ್ಲ. ಆದುದರಿಂದ ಸಂಶಯವಿಕಲ್ಪಪ್ರಶ್ನೆಯೇ ಕೂಡುವುದಿಲ್ಲ, ಎಂದು ಹಿಂದೆ ಹೇಳಿರುವರು. ಅಲ್ಲಿ ಸಂಶಯವಿಕಲ್ಪಪ್ರಶ್ನೋ ನ ಯುಜ್ಯತೇ ಎನ್ನುವುದಕ್ಕೆ ಏನು ಅರ್ಥವು? ಸಂಶಯೋತ್ಪತ್ತಿಯೂ, ವಿಕಲ್ಪಪ್ರಶ್ನೋತ್ಪತ್ತಿಯೂ, ಪ್ರಮಿತವಾಗಿರುವುದರಿಂದ ಅವುಗಳು ಹುಟ್ಟುವುದಿಲ್ಲ ಎಂದು ನ ಯುಜ್ಯತೇ ಎನ್ನುವುದಕ್ಕೆ ಅರ್ಥವೆಂದು ಹೇಳಲಾಗುವುದಿಲ್ಲ. ಹುಟ್ಟಿದರೂ ನಿಷ್ಕಾರಣವೆಂದು ನ ಯುಜ್ಯತೇ ಎನ್ನುವುದಕ್ಕೆ ಅರ್ಥವೆಂದೂ ಹೇಳಕೂಡದು. ಅಕಾರಣ ಕಾರ್ಯೋತ್ಪತ್ತಿಯು ಪ್ರಮಾಣವಿರುದ್ಧವಾಗಿರುತ್ತದೆ. ಅದಕ್ಕೆ ಕಾರಣವಾಗದಿರುವುದರದೆಶೆಯಿಂದ ಹುಟ್ಟಿದ್ದು ಎಂದು ನ ಯುಜ್ಯತೇ ಎನ್ನುವುದಕ್ಕೆ ಅರ್ಥವೆಂದೂ ಹೇಳಲಾಗುವುದಿಲ್ಲ. ಯಾವುದರಿಂದ ಹುಟ್ಟಿಯದೋ ಅದೇವೇ ಅದಕ್ಕೆ ಕಾರಣವಾಗಿರುವುದರಿಂದ ಅದಕ್ಕೆ ಅದು ಕಾರಣವಲ್ಲವೆನ್ನುವುದು ವ್ಯಾಹತವಾಯಿತು. ಇದರಿಂದ ಬೇರೆಯಾದ ಅನುಪಪನ್ನತ್ವವನ್ನು ಹೇಳಲಿಕ್ಕೆ ಬರುವುದಿಲ್ಲ ಎಂದಾಶಂಕಿಸಿದರೆ) ಪ್ರಶ್ನದೋಷಾಃ = ವಿಕಲ್ಪಪ್ರಶ್ನದೋಷಗಳು, ಸ್ವವ್ಯಾಹತಿಃ = ಸ್ವವ್ಯಾಹತಿಯು, ಅಸಂಗತಿಃ=ಅಸಂಗತಿಯು, ಸಿದ್ಧಾರ್ಥತಾ=ಸಿದ್ಧಸಾಧನತ್ವವು, ವೈಫಲ್ಯಂ=ನಿಷ್ಪ್ರಯೋಜನತ್ವವು, ಹೀಗೆ, ಚತ್ವಾರಃ=ನಾಲ್ಕು. ಹಿ=ಪ್ರಮಾಣಪ್ರಸಿದ್ಧವು. (ಸ. ರ. ವಿ.— ವ್ಯಾಹತಾದಿ ಪ್ರಶ್ನೆಗಳನ್ನು ಮಾಡಿದರೆ ಬಾಧಕವನ್ನು ಹೇಳುತ್ತಾರೆ.) ತೈಃ=ವ್ಯಾಹತಾದಿಪ್ರಶ್ನೆಗಳಿಂದ, ತತ್ವನಿರ್ಣಯಃ=ತತ್ವನಿಶ್ಚಯವು, ನ ಸ್ಯಾತ್=ಆಗಲಾರದು ಅಂದರೆ ಸ್ವವ್ಯಾಹತಾದಿ ಪ್ರಶ್ನೆಗಳು ತತ್ವನಿರ್ಣಯಕ್ಕೆ ವಿರೋಧಿಗಳು.

**ತಾ॥ ಸ. ರ. ವಿ.—**(1) ದ್ರಷ್ಟೃ ಆದ ಆತ್ಮನದೆಶೆಯಿಂದ ಸ್ವಪ್ನವು ಭಿನ್ನವೋ, ಅಭಿನ್ನವೋ, ಭಿನ್ನಾಭಿನ್ನವೋ ಎಂದು ವಿಕಲ್ಪದೂಷಣವಿರಲಿ. ಈ ವಿಕಲ್ಪವೇ ಅಯುಕ್ತವು. ಸ್ವಪ್ನ, ಸ್ವಾಪ್ನಾರ್ಥದ್ರಷ್ಟೃಗಳಿಗೆ ಭೇದವೇ ಅನುಭವದಿಂದ ನಿಶ್ಚಿತವಾಗಿದೆ. ಸ್ಥಾಣುವಿಗೆ ಪುರುಷನದೆಶೆಯಿಂದ ಭೇದವು ನಿಶ್ಚಿತವಾಗೋಣ ಸ್ಥಾಣುಪುರುಷರಿಗೆ ಭೇದವೋ ಅಭೇದವೋ ಎಂದು ವಿಕಲ್ಪವು ಕೂಡುವುದಿಲ್ಲ. (2) ಪ್ರಶ್ನದೋಷಗಳು. ೧ ಸ್ವವ್ಯಾಹತಿ ೨ ಅಸಂಗತಿ ೩ ಸಿದ್ಧಸಾಧನವು ೪ ವಿಫಲತ್ವವು ಎಂದು ನಾಲ್ಕು ವಿಧವು. ೧ ಬಂಜೆಯು ಮಕ್ಕಳುಳ್ಳವಳೋ ಅಲ್ಲವೋ ಎನ್ನುವ ಪ್ರಶ್ನೆಯು ಸ್ವವ್ಯಾಹತವು. ೨ ಬ್ರಹ್ಮನು ಜಗತ್ಕಾರಣನು ಎಂದು ಹೇಳಿದಾಗ ಜಗತ್ತಿಗೆ

ಕ್ಷಣಿಕತ್ವವಿಷಯದಲ್ಲಿ ಪ್ರಮಾಣವೇನೆನ್ನುವ ಪ್ರಶ್ನೆಯು ಅಸಂಗತವು. ೩ ಮುಂಭಾಗದಲ್ಲಿ ಸ್ಪಷ್ಟವಾಗಿ ತೋರಿಕೊಂಡಿರುವ ಘಟವು ಇಲ್ಲಿ ಉಂಟೋ ಇಲ್ಲವೋ ಎನ್ನುವ ಪ್ರಶ್ನೆಯು ಅಸಂದಿಗ್ಧಾರ್ಥವಿಷಯಕವು. (ಸಿದ್ಧಾರ್ಥವಿಷಯಕವು) ೪ ಕಾಗೆಗೆ ಎಷ್ಟು ಹಲ್ಲು ಎನ್ನುವ ಪ್ರಶ್ನೆಯು ನಿಷ್ಫಲವು. ಆದುದರಿಂದ ಸ್ವಪ್ನ-ಸ್ವಾಪ್ನಾರ್ಥದರ್ಶಿಗಳಿಗೆ ಭೇದವೆಂದು ಸರ್ವ ಲೋಕದಲ್ಲಿಯೂ ಸಿದ್ಧವಾದಪ್ರಯುಕ್ತ ಭೇದವೋ ಅಭೇದವೋ ಎನ್ನುವ ಪ್ರಶ್ನೆಯೇ ಅಸಂದಿಗ್ಧ ವಿಷಯವುಳ್ಳದ್ದಾದುದರಿಂದ ಅಯುಕ್ತವು.

**ನ್ಯಾಯಸುಧಾ**— (1) ವಿಪ್ರತಿಪತ್ತಿಮೂಲಕವಾದ ಈ ಸಂಶಯವು ಬೇಡ. ಸಮಾನ ಧರ್ಮದಿಂದ ಸಂಶಯವು ಹುಟ್ಟುವುದು. ಕೆಲವು ವಸ್ತುವು ದ್ರಷ್ಟೃ ಪುರುಷನಿಂದ ಭಿನ್ನವು, ಕೆಲವು ಅಭಿನ್ನವು, ಕೆಲವು ಭಿನ್ನಾಭಿನ್ನವು. ಇದು ವಸ್ತುವು ಆಗಿರುತ್ತದೆ. ಆದುದರಿಂದ ಭಿನ್ನವೋ ಅಭಿನ್ನವೋ ಇತ್ಯಾದಿ ಸಂಶಯವು ಬರುವುದು, ಎಂದರೆ ಹೀಗೆ ಹೇಳಕೂಡದು. ೧ ಸಂಶಯವು ಸಮಾನಧರ್ಮವನ್ನು ನೋಡಿದರಿಂದ ಮಾತ್ರ ಹುಟ್ಟುತ್ತದೋ, ೨ ಅಥವಾ ನಿಶ್ಚಾಯಕಾಭಾವದಿಂದ ಸಹಕೃತವಾದ ಸಮಾನಧರ್ಮದರ್ಶನದೆಶೆಯಿಂದ ಆಗುತ್ತದೋ? ೧ನೇದ್ದು ಕೂಡಲಾರದು. ಎಲ್ಲಾ ಕಡೆಗಳಲ್ಲಿಯೂ ಸಂಶಯವು ಹುಟ್ಟಬೇಕಾಗುವುದು. ಯತ್ಕಿಂಚಿತ್ ಸಾಧರ್ಮ್ಯವು ಎಲ್ಲಾ ಕಡೆಗಳಲ್ಲಿಯೂ ಇದೆ. ೨ನೇಕಲ್ಪದಲ್ಲಿ ಎಲ್ಲಾ ಜನರೂ ಭೇದವನ್ನೇ ನೋಡುವುದರಿಂದ ನಿರ್ಣಾಯಕಾಭಾವವೇ ಸಿದ್ಧಿಸದೆಯಿರುವುದರಿಂದ ಇಲ್ಲಿ ಸಂಶಯವೇ ಹೇಗೆ? ಸಿದ್ಧವಿಷಯವಾಗಿರುವುದರಿಂದ ಪ್ರಶ್ನೆಯೇ ಅಯುಕ್ತವು. ॥ ೧೨ ॥

**ಸ. ರ. ವಿ**— ಅಸಂದಿಗ್ಧಾರ್ಥದಲ್ಲಿಯೂ ವಿಪ್ರತಿಪತ್ತಿಯನ್ನು ಮಾಡುತ್ತಾ ಸ್ವವ್ಯಾಹತಾದಿ ಗಳನ್ನೂ, ಪ್ರಶ್ನೆ ಮಾಡುವವನನ್ನು ಕುರಿತು ತತ್ವವನ್ನು ನಿಶ್ಚಯಿಸಲಿಕ್ಕೆ ಅಸಾಧ್ಯವು. ಆದ ಕಾರಣ ಅಸಂದಿಗ್ಧಾರ್ಥಾದಿಗಳ ಪ್ರಶ್ನೆಯು ತತ್ವನಿರ್ಣಯಕ್ಕೆ ವಿರೋಧಿಯು. ಅಂತಹ ಪ್ರಶ್ನೆಯು ಅಸಂದಿಗ್ಧಾರ್ಥಾದಿಗಳನ್ನು ಪ್ರಶ್ನಿಸುವವನಿಗೆ ತತ್ವನಿರ್ಣಯೋದ್ದೇಶ್ಯಕವಾದ ವಾದಕಥೆಯಲ್ಲಿ ಆಗಲೀ, ವಿಜಿಗೀಷುಕಥೆಯಾದ ಜಲ್ಪಾದಿಗಳಲ್ಲಿ ಆಗಲೀ ಪರಾಜಯಕ್ಕೆ ನಿಮಿತ್ತಕಾರಣವಾಗಿರುವುದ ರಿಂದ ನಿಗ್ರಹಸ್ಥಾನವಾಗುತ್ತದೆ. ವಾದಕಥೆಯು ತತ್ವನಿರ್ಣಯೋದ್ದೇಶ್ಯಕವಾಗಿರುವುದರಿಂದ ತತ್ವ ನಿರ್ಣಯವಾಗುವತನಕ ಪ್ರವರ್ತಿಸಬೇಕಾಗಿರುವುದರಿಂದ ವಾದಕಥೆಯಲ್ಲಿ ನಿಗ್ರಹಸ್ಥಾನವು ಉದ್ಭಾವಿಸಲಿಕ್ಕೆ ಯೋಗ್ಯವಾಗಿದ್ದರೂ ಕಥಾಸಮಾಪ್ತಿಗೆ ಕಾರಣವಾಗುವುದಿಲ್ಲ. ಜಲ್ಪಾದಿಗಳಲ್ಲಿ ಆದರೂ ನಿಗ್ರಹಸ್ಥಾನವು ಕಥಾಸಮಾಪ್ತಿಗೆ ಕಾರಣವಾಗುತ್ತದೆ ಎನ್ನುತ್ತಾರೆ.

**ಮೂ ॥ ತತ್ವನಿರ್ಣಯವೈಲೋಮ್ಯಂ ಸ್ಯಾದ್ವಾದೇಽಪಿ ಹಿ ನಿಗ್ರಹಃ ।**
**ಉದ್ಭಾವನೀಯಮೇವ ಸ್ಯಾನ್ನ ಕಥಾವಸಿತಿರ್ಭವೇತ್ ॥ ೧೪ ॥**
**ವಿಜಗೀಷು ಕಥಾಯಾಂ ತು ಕಥಾವಸಿತಿ ಕಾರಣಂ ।**
**ಪರಿಹಾರೇಽಪಿ ಸಿದ್ಧತ್ವಂ ದೂಷಣಂ ಪ್ರತಿವಾದಿನಃ ॥**
**ಪ್ರತಿಜ್ಞಾಯಾಂ ತದನ್ಯಸ್ಯ ಸಿದ್ಧತೈವ ಹಿ ಸಾಧಿಕಾ ॥ ೧೫ ॥**

ಅ ॥ (ಕೇವಲ ಜಲ್ಪವಿತಂಡಗಳಿಗೇನೇ ನಿಗ್ರಹಸ್ಥಾನವಿರುವುದಲ್ಲ. ಮತ್ತೆ) ವಾದೇಽಪಿ= ವಾದದಲ್ಲಿಯೂ, ತತ್ವನಿರ್ಣಯವೈಲೋಮ್ಯಂ=ತತ್ವನಿರ್ಣಯವಿರೋಧವು, ನಿಗ್ರಹಃ=ನಿಗ್ರಹ ಸ್ಥಾನವು, ಸ್ಯಾತ್ ಹಿ=ಆಗಿಯೇ ಆಗುವುದು. (ಹಾಗಾದರೆ ವಾದಕಥೆಯು ತತ್ವನಿರ್ಣಯೋ ದ್ದೇಶ್ಯಕವು ಎನ್ನುವುದು ವ್ಯಾಹತವಾಗುವುದು. ತಥಾ ಚ ವಿಜಯೋದ್ದೇಶ್ಯಕವಾದ ಜಲ್ಪಾದಿ

ಗಳಿಂದ ಭೇದವೂ ಇಲ್ಲದೆ ಹೋಗಬೇಕಾಗುವುದು. ಅದರಂತೆಯೇ ಸರ್ವ ನಿಗ್ರಹಸ್ಥಾನವೂ ಬರಬೇಕಾಗುವುದು. ಎಂದಾಶಂಕಿಸಿದರೆ) ತತ್ವನಿರ್ಣಯವ್ಯೈಲೋಮ್ಯಂ = ತತ್ವನಿರ್ಣಯ ವಿರೋಧವು, ವಾದೇ = ವಾದದಲ್ಲಿ, ಉದ್ಭಾವನೀಯಮೇವ = ಉದ್ಭಾವಿಸಲಿಕ್ಕೆ ಯೋಗ್ಯವೇ, ಸ್ಯಾತ್=ಆಗುವುದು. ಕಥಾವಸಿತಿಃ=ಕಥಾಸಮಾಪ್ತಿಗೆ ಕಾರಣವು, ನ ಭವೇತ್=ಆಗಲಾರದು. ವಿಜಿಗೀಷುಕಥಾಯಾಂ ತು=ಜಲ್ಪ ವಿತಂಡಾರೂಪವಾದ ವಿಜಿಗೀಷುಕಥೆಯಲ್ಲಿ ಆದರೂ, ಎಲ್ಲವೂ (ನಿಗ್ರಹಸ್ಥಾನವು). ಕಥಾವಸಿತಿಕಾರಣಂ = ಕಥಾಸಮಾಪ್ತಿಗೆ ಕಾರಣವಾದುದು ಆಗುವುದು. ಹೀಗೆ ಸಿದ್ಧಾರ್ಥವಿಷಯತ್ವವು ಪ್ರಶ್ನಕ್ಕೆ ದೂಷಣವು ಉದ್ಭಾವಿಸಲಿಕ್ಕೆ ಯೋಗ್ಯವೂ ಆಗಿದೆ ಎಂದುಪಪಾದಿಸಿ ಅದಕ್ಕೆ ದೂಷಣತ್ವವನ್ನು ಅಂಗೀಕರಿಸದೆ ಇದ್ದರೆ ಅತಿಪ್ರಸಂಗವನ್ನು ಸೂಚಿಸುವುದಕ್ಕಾಗಿ ಹೇಳುತ್ತಾರೆ.) ಸಿದ್ಧವಿಷಯತ್ವವು ಕೇವಲ ಪ್ರಶ್ನದೂಷಣಮಾತ್ರವಲ್ಲ. ಮತ್ತೆ) ಪರಿಹಾರೇಽಪಿ=ಪ್ರತಿವಾದಿಯು ಉತ್ತರಕೊಡತಕ್ಕ ವಾಕ್ಯದಲ್ಲಿಯೂಕೂಡ, ಸಿದ್ಧತ್ವಂ= ಅರ್ಥಕ್ಕೆ ಸಿದ್ಧತ್ವವು, ದೂಷಣಂ=ದೂಷಣವು, (ಪ್ರಶ್ನದಲ್ಲಿ ಆದರೂ ಪ್ರಶ್ನಿಸಲ್ಪಡತಕ್ಕ ಅರ್ಥಕ್ಕೆ ಪ್ರಶ್ನಿಸುವವನನ್ನು ಕುರಿತು ಸಿದ್ಧತ್ವವು ದೂಷಣವು. ಪ್ರತಿವಾದಿಗಾದರೂ ಸಿದ್ಧತ್ವವು ನ್ಯಾಯವೇ. ಉತ್ತರದಲ್ಲಿ ಆದರೂ ಉತ್ತರವಾಕ್ಯದ ಅರ್ಥಕ್ಕೆ ಪ್ರತಿವಾದಿಯನ್ನು ಕುರಿತು ಸಿದ್ಧತ್ವವು ದೂಷಣವು. ವಾದಿಗಾದರೂ ಸಿದ್ಧತ್ವವೇ ನ್ಯಾಯವು. ಉತ್ತರವಾಕ್ಯಾರ್ಥವೆಲ್ಲಾದಕ್ಕೂ ಪ್ರತಿವಾದಿಸಿದ್ಧತ್ವವು ದೂಷಣವೋ ಎಂದರೆ ಅಲ್ಲ. ಮತ್ತೆ) ಪ್ರತಿಜ್ಞಾಯಾಂ = ಪ್ರತಿಜ್ಞೆಯಲ್ಲಿ, ಅರ್ಥಸ್ಯ=ಅರ್ಥಕ್ಕೆ ಅಂದರೆ ವ್ಯಾಪಕಧರ್ಮಕ್ಕೆ ಪಕ್ಷರೂಪ ಧರ್ಮಿಯಿಂದ ಸಂಬಂಧವು ಪ್ರತಿಜ್ಞಾರ್ಥವು ಅದಕ್ಕೆ, ಪ್ರತಿವಾದಿನಃ ಸಿದ್ಧತ್ವಂ=ಪ್ರತಿವಾದಿಯನ್ನು ಕುರಿತು ಸಿದ್ಧತ್ವವು, ದೂಷಣವು. (ಉತ್ತರವಾಕ್ಯದಲ್ಲಿ ಪ್ರತಿಜ್ಞಾಯಾಂ ಎಂದು ಏಕೆ ಹೇಳಿದ್ದು ಎಂದರೆ) ತದನ್ಯಸ್ಯ= ಪ್ರತಿಜ್ಞಾರ್ಥದಿಂದ ಇತರವಾದ ಹೇತ್ವಾದಿ ವಾಕ್ಯಗಳ ಅರ್ಥಕ್ಕೆ, ಸಿದ್ಧತ್ವೈವ ಹಿ =ಸಿದ್ಧತ್ವವೇ, ಸಾಧಿಕಾ=ಸಾಧ್ಯವನ್ನು ಸಾಧಿಸಿಕೊಡುತ್ತದೆ. (ಅಸಿದ್ಧಗಳಾದ ಲಿಂಗಾದಿಗಳು ಸಾಧ್ಯಸಾಧಕ ಗಳಾಗುವುದಾದರೆ ಅತಿಪ್ರಸಂಗವು. ಆದುದರಿಂದ ಪ್ರತಿಜ್ಞಾಯಾಂ ಎಂದು ಹೇಳಿರುವರು. (ಏವಂಚ ಪ್ರತಿಜ್ಞಾರ್ಥವ್ಯತಿರಿಕ್ತವಾದ ಹೇತ್ವಾದ್ಯರ್ಥಕ್ಕೆ ಅಸಿದ್ಧಿಯು ದೂಷಣವೆಂದು ಹೇಳಿದಂತೆ ಆಯಿತು). ॥ ೧೪ ॥ ೧೫ ॥

ಆ ಅಸಿದ್ಧಿಯು ಆಶ್ರಯಾಸಿದ್ಧ್ಯಾದಿ ಭೇದದಿಂದ ಅನೇಕಪ್ರಕಾರವಾದುದು. ಹೇಗೆಂದರೆ- ೧ ಸಾಧ್ಯಧರ್ಮಿಗೆ ಅಸಿದ್ಧಿಯು ಆಶ್ರಯಾಸಿದ್ಧಿಯು. ಉದಾ— 'ಶಶಶೃಂಗಮಸ್ತಿ ಶೃಂಗತ್ವಾತ್ ಗೋಶೃಂಗವತ್' ಶಶದ ಕೋಡು ಇದೆ, ಶೃಂಗವಾದುದರಿಂದ ಗೋವಿನ ಕೋಡಿನಂತೆ. ಇಲ್ಲಿ ಶಶದ ಕೋಡು ಎನ್ನುವ ಆಶ್ರಯವೇ ಅಸಿದ್ಧವಾಗಿರುವುದರಿಂದ ಆಶ್ರಯಾಸಿದ್ಧಿಯು. ೨ ಸಾಧ್ಯಧರ್ಮಾದಿಗಳ ಅಸಿದ್ಧಿಯು ಅಪ್ರಸಿದ್ಧವಿಶೇಷಣತ್ವನಾಮಕವಾದುದು. ಉದಾ— 'ಶುಕ್ತಿರಜತಾದಿಕಂ ಸದಸದ್ವಿಲಕ್ಷಣಂ ಬಾಧ್ಯತ್ವಾತ್' ಬಾಧ್ಯವಾಗಿರುವುದರಿಂದ ಶುಕ್ತಿರಜತವೊದಲಾದುದು ಸದಸದ್ವಿಲಕ್ಷಣವು. ೩ ಲಿಂಗಾಸಿದ್ಧಿಯು. ಉದಾ— 'ವಿಮತಂ ಅಚೇತನಂ ಸದಸದ್ವಿಲಕ್ಷಣತ್ವಾತ್' ಎನ್ನುವಲ್ಲಿ ಸದಸದ್ವಿಲಕ್ಷಣತ್ವರೂಪ ಹೇತುವು ಎಲ್ಲಿಯೂ ಸಿದ್ಧವಾಗಲಿಲ್ಲ. ೪ ಹೇತುವಿಗೆ ಪಕ್ಷಧರ್ಮತ್ವವು ಸಿದ್ಧಿಸದೆ ಇರುವಿಕೆಯು. ಉದಾ—'ಶಬ್ದೋಽನಿತ್ಯಶ್ಚಾಕ್ಷುಷತ್ವಾತ್' ಚಕ್ಷುರಿಂದ್ರಿಯಜನ್ಯಪ್ರತ್ಯಕ್ಷವಿಷಯತ್ವವು ಶಬ್ದರೂಪಪಕ್ಷದಲ್ಲಿ ಇಲ್ಲದಿರುವುದರಿಂದ ಅದಕ್ಕೆ ಪಕ್ಷಧರ್ಮತ್ವಾಸಿದ್ಧಿಯು. (೫) ವ್ಯಧಿಕರಣಾಸಿದ್ಧಿಯು. ಉದಾ= 'ಶಬ್ದಃ ಅನಿತ್ಯಃ ಘಟಸ್ಯ ಕೃತಕತ್ವಾತ್' ಎಂದು. ಇಲ್ಲಿ ಅನಿತ್ಯತ್ವರೂಪ ಸಾಧ್ಯವು ಶಬ್ದದಲ್ಲಿ, ಕೃತಕತ್ವವು ಘಟದಲ್ಲಿ, ಹೀಗೆ ಸಾಧ್ಯಹೇತುಗಳಿಗೆ ಸಾಮಾನಾಧಿಕರಣ್ಯವಿಲ್ಲದಿರುವುದರಿಂದ ವ್ಯಧಿಕರಣಾಸಿದ್ಧಿಯು.

(೬) ವ್ಯಾಪ್ತ್ಯಸಿದ್ಧಿಯು. ಉದಾ='ಯತ್ ಸತ್ ತತ್ ಕ್ಷಣಿಕಂ ಯಥಾ ಪ್ರದೀಪಃ ಸಂಶ್ಚ ಪ್ರಪಂಚ' ಇತಿ ಇಲ್ಲಿ ಸತ್ವಕ್ಕೂ ಕ್ಷಣಿಕತ್ವಕ್ಕೂ ವ್ಯಾಪ್ತಿಯು ಸಿದ್ಧಿಸದೆ ಇದ್ದುದರಿಂದ ವ್ಯಾಪ್ತ್ಯ ಸಿದ್ಧಿಯು. ಈಪ್ರಕಾರವಾಗಿಯೇ 'ಶಬ್ದೋಽನಿತ್ಯಶ್ಚಾಕ್ಷುಷತ್ವೇತಿ ಕೃತಕತ್ವಾತ್' ಇದುಮೊದಲಾದ ವಿಶೇಷಣಾಸಿದ್ಧ್ಯಾದಿಗಳನ್ನು ಇಟ್ಟುಕೊಳ್ಳಬೇಕು. ಅದರಲ್ಲಿ ಎಲ್ಲಾ ಅಸಿದ್ಧಿಗಳಿಗೂ ದೂಷಣತ್ವವು ಪ್ರಾಪ್ತವಾದರೆ ಕೆಲವು ಅಸಿದ್ಧಿಗಳಿಗೆ ದೂಷಣತ್ವವಿಲ್ಲವೆಂದೇ ಹೇಳುತ್ತಾರೆ—

**ಮೂ ॥ ಆಶ್ರಯವ್ಯಾಶ್ರಯಾಸಿದ್ಧೀ ಸಾಧ್ಯಾಸಿದ್ಧಿಶ್ಚ ದೂಷಣಂ ।**
**ಕೇಷಾಂಚಿನ್ನ ಚ ತೇ ದೋಷಾಃ ವ್ಯಾಪ್ತೌ ಸತ್ಯಾಂ ಕಥಂಚನ ॥ ೧೬ ॥**

ಅ ॥ ಆಶ್ರಯವ್ಯಾಶ್ರಯಾಸಿದ್ಧೀ = ಆಶ್ರಯಾಸಿದ್ಧಿಯು (ದೃಷ್ಟಾಂತದಲ್ಲಿ ಆಶ್ರಯ ರಾಹಿತ್ಯವೂ ಕೂಡ) ವ್ಯಧಿಕರಣಾಸಿದ್ಧಿಯು, ಇವುಗಳು, ಸಾಧ್ಯಾಸಿದ್ಧಿಶ್ಚ=ಸಾಧ್ಯಾಪ್ರಸಿದ್ಧಿಯೂ ಕೂಡ, ಯದ್ಯಪಿ, ಕೇಷಾಂಚಿತ್=ನೈಯಾಯಿಕಾದಿಗಳ ಮತದಲ್ಲಿ, ದೂಷಣಂ=ದೂಷಣವು ಆಗುತ್ತದೆ. (ಆದಾಗ್ಯೂ ವಸ್ತುತಃ ಅವುಗಳು ದೋಷಗಳಲ್ಲ.) ಆಶ್ರಯಾಸಿದ್ಧಿಯಾದರೂ ೧ ಅಸದಾಶ್ರಯತ್ವ, ೨ ಅಭಾವಾಶ್ರಯತ್ವ, ೩ ಅಪ್ರತೀತಾಶ್ರಯತ್ವ, ೪ ಪಕ್ಷೀಕೃತವಾದ ಆಕಾರದಿಂದ ಅಸತ್ವವು, ೫ ಸಿದ್ಧಸಾಧನತ್ವವು. ಹೀಗೆ ಅನೇಕ ಪ್ರಕಾರವಾದುದು, ಅವುಗಳಲ್ಲಿ ಒಂದನೇದ್ದು ಎರಡನೇದ್ದೂ ಸಹ ದೋಷಗಳಲ್ಲವೆನ್ನುತ್ತಾರೆ.) ತೇ=ಅವುಗಳು, ಅಸದಾಶ್ರಯತ್ವ, ಅಭಾವಾಶ್ರಯತ್ವ, ವ್ಯಧಿಕರಣಾಸಿದ್ಧಿ, ಸಾಧ್ಯಾಸಿದ್ಧಿ ಇವುಗಳು. ವ್ಯಾಪ್ತೌ ಸತ್ಯಾಂ=ವ್ಯಾಪ್ತಿಯಿದ್ದರೆ, ಕಥಂಚನ=ಯಾವಪ್ರಕಾರದಿಂದಲೂ, ದೋಷಾಃ=ದೋಷಗಳು, ನ ಚ ಆಗುವುದೇ ಇಲ್ಲ. (ಅಪ್ರತೀತಾಶ್ರಯತ್ವಾದಿಗಳು ದೋಷಗಳೇ ॥ ೧೬ ॥

**ಸ. ರ. ವಿ—** ಹಾಗಾದರೆ 'ನೃಶಂಗಮಸ್ತಿ ಶೃಂಗತ್ವಾತ್ ಗೋಶೃಂಗವತ್' ಗೋವಿನ ಕೋಡುವಿನಂತೆ ಶೃಂಗತ್ವವಿದ್ದಪ್ರಯುಕ್ತ ಮನುಷ್ಯಗೆ ಕೋಡು ಇದೆ ಎನ್ನುವ ಅನುಮಾನದಲ್ಲಿ ಆಶ್ರಯಾಸಿದ್ಧಿಯು ಹೇತುದೂಷಣವೆಂದು ದೃಷ್ಟವಾಗಿದೆ. ಇಲ್ಲದಿದ್ದರೆ ಮನುಷ್ಯನಿಗೆ ಕೋಡೂ ಇರಬೇಕಾಗುವುದು ಎಂದರೆ—

**ನ. ಚ. ವಿ—** ಹಾಗಾದರೆ ನೃಶೃಂಗಮಸ್ತಿ ಶೃಂಗತ್ವಾತ್ ಗೋಶೃಂಗವತ್ ಇದು ಮೊದಲಾದುದು ಆಶ್ರಯವಿಲ್ಲದಿರುವುದರಿಂದಲೇ ಅಪ್ರಮಾಣವಷ್ಟೆ, ಎಂದರೆ—

**ನ್ಯಾಯಸುಧಾ—** ಭಾವದಂತೆ ಅಭಾವವೂ ಪ್ರಾಮಾಣಿಕವಾಗಿದೆ. ಧರ್ಮದಿಂದ ಕೂಡಿರುವುದೂ ಆಗಿದೆ. ಆದುದರಿಂದ ಅಭಾವಾಶ್ರಯತ್ವವು ದೋಷವಲ್ಲ. ಅಸದಾಶ್ರಯತ್ವ ಕ್ಕಾದರೂ ಯಾವುದರಿಂದ ದುಷ್ಟತ್ವವು? ೧ 'ನರವಿಷಾಣಮಸ್ತಿ ವಿಷಾಣತ್ವಾತ್' ಎಂದು ಮನುಷ್ಯಗೆ ಕೋಡು ಇದೆ, ಇದು ಮೊದಲಾದ ಅನುಮಾನಕ್ಕೆ ಸಾಧಕತ್ವವು ಬರಬೇಕಾಗುವುದು ಎನ್ನುವ ಅತಿಪ್ರಸಂಗದಿಂದ ದುಷ್ಟತ್ವವನ್ನು ಹೇಳುವುದೋ? ೨ ಅಥವಾ ಅಸತ್ತಿನಲ್ಲಿ ಯಾವ ಧರ್ಮವೂ ಇಲ್ಲದಿರುವುದರಿಂದ ಸಾಧ್ಯಧರ್ಮವೂ ಕೂಡದಿರುವಪ್ರಯುಕ್ತ ಬಾಧಿತವಾದುದರಿಂದ ದುಷ್ಟತ್ವ ವನ್ನು ಹೇಳುವುದೋ? ೩ ಅಥವಾ, ಅಸತ್ತಿನಲ್ಲಿ ಹೇತುವಿಲ್ಲದಿರುವುದರಿಂದ ಸ್ವರೂಪಾಸಿದ್ಧಿಯು ಬರುವುದರಿಂದ ದುಷ್ಟತ್ವವನ್ನು ಹೇಳುವುದೋ? ೪ ಅಥವಾ, ಅಸತ್ತು ಎಲ್ಲಾ ವ್ಯವಹಾರಗಳಿಗೆ ವಿಷಯವಾಗದಿರುವುದರಿಂದ ದುಷ್ಟತ್ವವನ್ನು ಹೇಳುವುದೋ? ೫ ಅಥವಾ, ಅಪ್ರಾಮಾಣಿಕವಾದುದು ಪ್ರಮಾಣಕ್ಕೆ ಅಂಗವಾಗದಿರುವುದರಿಂದ ದುಷ್ಟತ್ವವನ್ನು ಹೇಳುವುದೋ, ೬ ಅಥವಾ, ಅಸದಾ ಶ್ರಯಕ್ಕೆ ವ್ಯಾಪ್ತಿಯು ಕೂಡದಿರುವುದರಿಂದ ದುಷ್ಟತ್ವವನ್ನು ಹೇಳುವುದೋ, ಇವುಗಳಲ್ಲಿ ೧ನೇ ದ್ದನ್ನು ನಿರಾಕರಿಸುತ್ತಾರೆ—

ಮೂ ॥ ದೋಷೋ ವ್ಯಾಹತಿರೇವಾಸ್ತಿ ನೃಶೃಂಗಾಸ್ತಿತ್ವಸಾಧನೇ ।
ಯತ್ರ ವ್ಯಾಹತತಾ ನಾಸ್ತಿ ಕೋಽತಿಸಂಗೋಽಸ್ಯ ಸಾಧನೇ ॥ ೧೭ ॥

ಅ ॥ ನೃಶೃಂಗಾಸ್ತಿತ್ವಸಾಧನೇ=ಮನುಷ್ಯನಿಗೆ ಕೋಡು ಇದೆ ಎಂದು ಸಾಧಿಸಿದರೆ, ವ್ಯಾಹತಿರೇವ ದೋಷಃ = ಪ್ರಮಾಣವಿರೋಧವೇ ದೋಷವು, ಅಸ್ತಿ=ಇದೆ. (ಶೃಂಗತ್ವಹೇತು ವಾದರೂ ಸಾಧಕವಲ್ಲವೆನ್ನುವುದು ಸಮ್ಮತವೇ. ಆ ಶೃಂಗತ್ವದಲ್ಲಿ ಬಾಧಿತವಿಷಯತ್ವವೂ ಅಸ ದಾಶ್ರಯತ್ವವೂ ಕೂಡ ಇದೆ. ಅವುಗಳಲ್ಲಿ ಬಾಧಿತವಿಷಯತ್ವವೇ ಶೃಂಗತ್ವಾನುಮಾನಕ್ಕೆ ಸಾಧಕತ್ವವಿಲ್ಲವೆನ್ನುವ ವಿಷಯದಲ್ಲಿ ಪ್ರಯೋಜಕವು ಅಸದಾಶ್ರಯತ್ವವಲ್ಲ ಎನ್ನುವ ವಿಷಯ ದಲ್ಲಿ ನಿಯಾಮಕವು ಏನು ಎಂದರೆ—) ಯತ್ರ=ಯಾವ ಸಾಧ್ಯದಲ್ಲಿ, ವ್ಯಾಹತತಾ=ಪ್ರಮಾಣ ಬಾಧವೂ, ವ್ಯಭಿಚಾರಾದಿಗಳೂ, ನಾಸ್ತಿ=ಇಲ್ಲವೋ, ಅಸ್ಯ=ಇದನ್ನು, ಸಾಧನೇ=ಅಸದಾಶ್ರಯ ವಾದ ಹೇತುವಿನಿಂದಲೂ ಸಾಧಿಸಿದರೂ, ಕೋಽತಿಸಂಗಃ =ಯಾವ ದೋಷವು? ಯಾವ ದೋಷವೂ ಇಲ್ಲ.

ತಾ ॥ ಸ. ರ. ವಿ —(1) ಪ್ರತ್ಯಕ್ಷವಿರೋಧವು ಬರುವುದರಿಂದಲೇ ಮನುಷ್ಯನಿಗೆ ಕೋಡು ಇದೆ ಎಂದು ಸಾಧಿಸತಕ್ಕ ಶೃಂಗತ್ವಾನುಮಾನವು ದುಷ್ಟವು. ಅಲ್ಲದೆ ಆಶ್ರಯಾಸಿದ್ಧಿಪ್ರಯುಕ್ತವಲ್ಲ. ಆದುದರಿಂದ ಎಲ್ಲಿ ಪ್ರತ್ಯಕ್ಷಾದಿವಿರೋಧವು ಇಲ್ಲವೋ ಅಲ್ಲಿ ಹೇತುವು ಆಶ್ರಯಾಸಿದ್ಧವಾದಾಗ್ಯೂ ಸಾಧಕವಾಗುತ್ತದೆ, ಎಂದು ಹೇಳಿದರೆ ಅತಿಪ್ರಸಂಗವು ಬರುವುದಿಲ್ಲ. ಗಗನಕುಸುಮದಂತೆ ಬಂಜೆಯ ಮಗನಿಗೆ ವಕ್ತೃತ್ವಾಭಾವವನ್ನು ಸಾಧಿಸತಕ್ಕ 'ವಂಧ್ಯಾಸುತಃ ನ ವಕ್ತಾ ಅಸತ್ವಾತ್' ಎನ್ನುವ ಅಸತ್ವಹೇತುವೂ, ಅಸದಾಶ್ರಯವಾದರೂ ಸಾಧಕವಾಗಿಯೇ ದೃಷ್ಟವಾಗಿದೆ.

ನ. ಚ. ವಿ— (1) 'ನೃಶೃಂಗಂ ನಾಸ್ತಿ ಯೋಗ್ಯತ್ವೇ ಸತ್ಯನುಪಲಭ್ಯಮಾನತ್ವಾತ್ ವೈಧರ್ಮ್ಯೇಣ ಘಟವತ್' ಇತ್ಯಾದಿಗಳಲ್ಲಿ ಎಲ್ಲಿ ಪ್ರತ್ಯಕ್ಷಾದಿವಿರೋಧವಿಲ್ಲವೋ, ಅಂತಹ ಅರ್ಥ ವನ್ನು ಸಾಧಿಸಿದರೆ ದೋಷವೇನಿದೆ? ॥ ೧೭ ॥

ಸ. ರ. ವಿ.— ಹಾಗಾದರೆ ಆಶ್ರಯವು ಅಸಿದ್ಧವಾಗಿದ್ದಾಗ್ಯೂ ಹೇತುವು ಸಾಧಕವಾಗುವು ದಾದರೆ ಪ್ರತ್ಯಕ್ಷಾದಿವಿರುದ್ಧಾರ್ಥವನ್ನು ಏಕೆ ಸಾಧಿಸುವುದಿಲ್ಲ ಎಂದರೆ—

ನ. ಚ. ವಿ— ಸ್ವಾಭಾವಿಕವಾಗಿಯೇ ಪ್ರಮಾಣಭೂತವಾದ ಅನುಮಾನಕ್ಕೆ ಪ್ರತ್ಯಕ್ಷಾದಿ ವಿರೋಧವಿದ್ದರೆ ದೌರ್ಬಲ್ಯವು ಹೇಗೆ ಎಂದಾಕಾಂಕ್ಷಾಬಂದರೆ—

ನ್ಯಾಯಸುಧಾ— ಪ್ರಮಾಣವಿರೋಧದಿಂದ ನೃಶೃಂಗತ್ವರೂಪವಾದ ಹೇತುವು ಆಭಾಸ (ದುಷ್ಟ) ವೆಂದು ಹೇಳಿಯದೆ. ಆ ಪ್ರಮಾಣವಿರೋಧಕ್ಕೂ ದೂಷಣತ್ವವು ಹೇಗೆ? ವ್ಯಾಪ್ತಿಮೊದ ಲಾದ ಅಂಗಗಳು ಸಂಪೂರ್ಣವಾಗಿದ್ದರೆ ಸಾಧ್ಯಸಿದ್ಧಿಯು ಅವಶ್ಯಕವಾಗಿದೆ. ವ್ಯಾಪ್ತ್ಯಾದ್ಯಂಗ ಗಳು ಇಲ್ಲವಾದರೆ ಅದರಿಂದಲೇ ಆಭಾಸತ್ವವು. ಪ್ರಮಾಣಬಾಧದಿಂದ ಆಗುವುದೇನು? ಎಂದರೆ-

ಮೂ ॥ ಪ್ರತ್ಯಕ್ಷಾಗಮಮೂಲಾಸ್ತು ನ್ಯಾಯಾಸ್ಸರ್ವೇ ಭವಂತಿ ಹಿ ।
ನ್ಯಾಯಾಭಾಸಾ ಅಮೂಲಾಃ ಸ್ಯುರ್ನ್ಯಾಯಸ್ಯಾನ್ಯಸ್ಯ ತೌ ಪುನಃ ॥
॥ ೧೮ ॥

**ಅ** || ಹಿ=ಯಾವಕಾರಣದ್ದೆಶೆಯಿಂದ, ಸರ್ವೇಽಪಿ=ಎಲ್ಲಾ, ನ್ಯಾಯಾಃ=ನ್ಯಾಯಗಳು, ಪ್ರತ್ಯಕ್ಷಾಗಮಮೂಲಾಸ್ತು = ಪ್ರತ್ಯಕ್ಷ-ಆಗಮಗಳು ಮೂಲವಾಗಿವುಳ್ಳವುಗಳೇ, ಭವಂತಿ= ಆಗುತ್ತವೋ, (ಆದಕಾರಣ) ಅಮೂಲಾಃ=ಸ್ವಮೂಲಭೂತಗಳಾದ ಪ್ರತ್ಯಕ್ಷಾಗಮವಿರುದ್ಧಗಳು, ನ್ಯಾಯಾಭಾಸಾಃ ಸ್ಯುಃ=ನ್ಯಾಯಾಭಾಸಗಳೇ ಆಗಿರುತ್ತಾವೆ. (ಹಾಗಾದರೆ— 'ಚಕ್ಷುಸ್ತೈಜಸಂ ರೂಪಾದಿಷು ಪಂಚಸು ಮಧ್ಯೇ ರೂಪಸ್ಯೈವ ಗ್ರಾಹಕತ್ವಾತ್ ಆಲೋಕವತ್' ಇದುಮೊದಲಾ ದುದು ಅನುಮಾನಮೂಲಕವಾದ ನ್ಯಾಯವೂ ಇದೆ. ಆದಕಾರಣ 'ಪ್ರತ್ಯಕ್ಷಾಗಮಮೂಲಾಃ ಸ್ಯುಃ' ಎನ್ನುವ ಉಕ್ತಿಯು ಹೇಗೆ ಕೂಡುತ್ತದೆ, ಎಂದರೆ—) ಅನ್ಯಸ್ಯಾಪಿ ನ್ಯಾಯಸ್ಯ=ಪ್ರತ್ಯಕ್ಷಾ ಗಮಮೂಲಕವಾದ ನ್ಯಾಯದ್ದೆಶೆಯಿಂದ ಇತರವಾದ ನ್ಯಾಯಕ್ಕೆ, ತೌ ಪುನಃ = ಆ ಪ್ರತ್ಯಕ್ಷಾ ಗಮಗಳೇ ಮೂಲವು. (ಏಕೆಂದರೆ) ಮೂಲಭೂತವಾದ ಇತರ ನ್ಯಾಯಕ್ಕೂ ಪ್ರತ್ಯಕ್ಷಾಗಮ ಗಳೇ ಮೂಲವು. ಹೀಗೆ ಕೊನೆಗೆ ಸರ್ವಥಾ ಪ್ರತ್ಯಕ್ಷ ಆಗಮಗಳನ್ನು ಅತಿಕ್ರಮಿಸದೆ ಇರುವುದ ರಿಂದ ಹಾಗೆ ಹೇಳಿದ್ದು.

**ಸ. ರ. ವಿ.**— ನ್ಯಾಯವು ಪ್ರತ್ಯಕ್ಷಮೂಲಕವಾಗುತ್ತದೆ, ಆಗಮಮೂಲಕವೂ ಆಗು ತ್ತದೆ. ಪ್ರತ್ಯಕ್ಷ ಆಗಮಗಳಲ್ಲಿ ಅನ್ಯತರ ಮೂಲಕವಾದ ನ್ಯಾಯಮೂಲಕವೂ ಆಗುತ್ತದೆ. ಪ್ರತ್ಯಕ್ಷಾದಿಮೂಲವಿಲ್ಲದಿರುವುದು ನ್ಯಾಯಾಭಾಸವೇ. ಆದಕಾರಣ ನ್ಯಾಯವು ಪ್ರತ್ಯಕ್ಷಾದಿ ಗಳನ್ನುಪಜೀವಿಸಿಕೊಂಡು ಬರುವುದರಿಂದ ವಿರುದ್ಧಾರ್ಥದಲ್ಲಿ ಪ್ರವೃತ್ತಿಯು ಕೂಡಲಾರದು.

**ನ್ಯಾಯಸುಧಾ**— (1) ಯದ್ಯಪಿ ನಿಷೇಧರೂಪವಾದ ನಿಷೇಧಕಹೇತುವಿಗೆ ಕೆಲವುಕಡೆ ಆಶ್ರಯವು ಅಪ್ರಾಮಾಣಿಕವಾದುದೂ ಆಗುತ್ತದೆ. ದೃಷ್ಟಾಂತಧರ್ಮಿಯೂ ಆಗುತ್ತದೆ, ಎಂದುಕ್ತವಾಗಿದೆ. ಆದಾಗ್ಯೂ ವಿಧಾಯಕಗಳಾದ ವಿಧಿರೂಪಗಳಾದವುಗಳಿಗೆ ಅವಶ್ಯವಾಗಿ ಪ್ರತ್ಯಕ್ಷಾಗಮಗಳಿಂದ ಗೃಹೀತವಾದ ಆಶ್ರಯವು ಆವಶ್ಯಕವು. (2) ಕೆಲವುಕಡೆ ನಿಷೇಧ ಸ್ವರೂಪವಾದ ನಿಷೇಧಕಕ್ಕೆ ನಿಷೇಧವು ಸಾಧ್ಯವಾದರೆ ಕೆಲವುಕಡೆ ಪ್ರತ್ಯಕ್ಷಾದಿಗೃಹೀತವಾದ ಪ್ರತಿಯೋಗಿಯು ಆವಶ್ಯಕವು. ಲಿಂಗವಾದರೂ ಸ್ವರೂಪತಃ ಸಾಧ್ಯಪ್ರತೀತಿಯನ್ನು ಹುಟ್ಟಿಸಲಿಕ್ಕೆ ಸಮರ್ಥವಲ್ಲ, ಆದರೆ ಪ್ರತ್ಯಕ್ಷ-ಆಗಮಗಳಿಂದ ನಿಶ್ಚಿತಸ್ವರೂಪವ್ಯಾಪ್ತಿಯುಳ್ಳದ್ದು; ಹೀಗೆ ಅನೇಕಪ್ರಕಾರವಾಗಿ ಎಲ್ಲಾ ನ್ಯಾಯಗಳೂ ಪ್ರತ್ಯಕ್ಷ-ಆಗಮಮೂಲವುಳ್ಳವುಗಳೇ ಆಗುತ್ತ ವೆಂದು ಪ್ರಸಿದ್ಧವು. ಪ್ರತ್ಯಕ್ಷ-ಆಗಮಾಖ್ಯಮೂಲವಿಲ್ಲದಿರುವವುಗಳು ನ್ಯಾಯಾಭಾಸಗಳೇ. (3) ಹೀಗೆ ಅನುಮಾನಗಳೂ ಕೂಡ ಉಪಜೀವ್ಯತ್ವಾದಿಗಳಿಂದ ಪ್ರಬಲಗಳಾದ ಪ್ರತ್ಯಕ್ಷ- ಆಗಮಗಳಿಂದ ಬಾಧಿತವಾಗಿರುವುದರಿಂದ ಆವಿಷಯದಲ್ಲಿ ಯಥಾರ್ಥಜ್ಞಾನವನ್ನು ಹುಟ್ಟಿಸಲಿಕ್ಕೆ ಸಮರ್ಥಗಳಲ್ಲ. ಹೀಗೆ ಆಭಾಸಭೂತಗಳೇ ಆಗಿವೆ. (4) ಯದ್ಯಪಿ ಆಗಮವೂ ಕೂಡ ಪ್ರತ್ಯಕ್ಷವೇ ಮೂಲವಾಗಿವುಳ್ಳದ್ದು. ಆದಾಗ್ಯೂ ಕೆಲವುಕಡೆ ಆಗಮವೂ ಕೂಡ ರಾಮಕೃಷ್ಣಾ ದ್ಯವತಾರಗಳಲ್ಲಿ ವಿಷ್ಣುತ್ವ ಪ್ರತ್ಯಕ್ಷಕ್ಕೂ ಮೂಲವಾಗುತ್ತದೆ. ಆದಕಾರಣ ಎರಡನ್ನೂ ಸ್ವೀಕರಿಸಿದ್ದು. ॥ ೧೮ ॥

**ಸ. ರ. ವಿ.**— ಹಾಗಾದರೆ ಪ್ರತ್ಯಕ್ಷಾದಿಗಳಿಂದ ವಿರುದ್ಧವಾದ ಅರ್ಥದಲ್ಲಿ ಚೋದ್ಯಮಾನ ವಾದ ಹೇತುವು ಅವಿರುದ್ಧವಾದ ಅರ್ಥವನ್ನು ಸಾಧಿಸುತ್ತದೆ ಎನ್ನುವ ವಿಷಯದಲ್ಲಿ ಏನು ಪ್ರಮಾಣವೆಂದರೆ—

**ಸ. ಚ. ವಿ.**— ಹಾಗಾದರೆ ಅನುಮಾನವು ದುರ್ಬಲವಾಗಿರುವುದರಿಂದ ಪ್ರತ್ಯಕ್ಷವೂ ಕೂಡ ಕೆಲವುಕಡೆ ಆಭಾಸವಾಗಿ ಕಂಡದರಿಂದ ಪ್ರಾಮಾಣ್ಯನಿರ್ಣಯವು ಹೇಗೆ ಆಗುತ್ತದೆಂದರೆ-

**ಮೂ ॥ ಅದೃಷ್ಟೇ ವ್ಯಭಿಚಾರೇ ತು ಸಾಧಕಂ ತದಿತಿ ಸ್ಫುಟಂ ।**
**ಜ್ಞಾಯತೇ ಸಾಕ್ಷಿಣೈವಾದ್ಧಾ ಮಾನಬಾಧೇ ನ ತದ್ಭವೇತ್ ॥ ೧೯ ॥**

ಅ ॥ ತತ್=ಆ ಧೂಮಾದಿಲಿಂಗವು, ವ್ಯಭಿಚಾರೇ=ಅಗ್ನಿಮೊದಲಾದ ಸಾಧ್ಯವಿಲ್ಲದಿರುವ ಸ್ಥಳದಲ್ಲಿರೋಣವು, ಅದ್ಧಾ=ಸರ್ವಥಾಪಿ, ಅದೃಷ್ಟೇ ತು=ಕಾಣಲ್ಪಡದೇನೇಇದ್ದರೆ, ಸಾಧಕಂ=ಅದನ್ನು ಸಾಧಿಸಿಕೊಡುವುದು. (ವ್ಯಭಿಚಾರವು ತೋರಿದರೆ ಸಾಧಕವಾಗಲಾರದು.) ಇತಿ=ಹೀಗೆ, ಸಾಕ್ಷಿಣೈವ=ಸಾಕ್ಷೀಂದ್ರಿಯದಿಂದಲೇ, ಸ್ಫುಟಂ=ಸ್ಪಷ್ಟವಾಗಿ, ಜ್ಞಾಯತೇ=ತಿಳಿಯಲ್ಪಡುತ್ತದೆ. (ವ್ಯಭಿಚಾರವೇ ಮೊದಲಾದ ದೋಷವಿಲ್ಲವೆಂದು ನಿಶ್ಚಿತವಾದ ಹೇತುವೇ ಸಾಧ್ಯವನ್ನು ಸಾಧಿಸುತ್ತದೆ ಎನ್ನುವುದು, ಸಾಕ್ಷಿಸಿದ್ಧವಾದರೆ ಇವರಿಂದ ಏನಾಯಿತೆಂದರೆ—) ಮಾನಬಾಧೇ=ಪ್ರಮಾಣಬಾಧವಿದ್ದರೆ, ತತ್=ಅದೃಷ್ಟವ್ಯಭಿಚಾರಿತ್ವವು, ನ ಭವೇತ್=ಆಗಲಾರದು. (ಪ್ರತ್ಯಕ್ಷ ಪ್ರಮಾಣ ಬಾಧದಿಂದ ಅಗ್ನ್ಯಾದಿಗಳಲ್ಲಿ ಶೈತ್ಯಾದಿಗಳು ಇಲ್ಲನೆಂದು ಆಗುತ್ತಿರಲು ಅಲ್ಲಿರುವ ಕೃತಕತ್ವಾದಿಲಿಂಗವು ವ್ಯಭಿಚಾರಿಯು ಅಂದರೆ ಸಾಧ್ಯಇಲ್ಲದಿದ್ದಲ್ಲಿದ್ದದ್ದಾಗುವುದು.

ತಾ ॥ ಸ. ರ. ವಿ.— ಬಾಧಕವಿಲ್ಲದಿರುವಾಗ ಈ ಸಾಧನವು ಈ ಸಾಧ್ಯದಲ್ಲಿ ಪ್ರಮಾಣವಾಗುತ್ತದೆ. ಬಾಧಕವಿದ್ದರೆ ಪ್ರಮಾಣವಲ್ಲ, ಹೀಗೆಸರ್ವಪ್ರಮಾಣಗಳ ಪ್ರಾಮಾಣ್ಯವು ಪ್ರಾಮಾಣ್ಯಗ್ರಾಹಕವಾದ ಸಾಕ್ಷಿಯಿಂದಲೇ ನಿಶ್ಚಿತವಾಗುತ್ತದೆ. ಆದುದರಿಂದಲೇ ಸಾಕ್ಷಿವ್ಯವಸಾಯಕ್ಕೆ ವ್ಯಭಿಚಾರವಿಲ್ಲ. ॥ ೧೯ ॥

ಸಾಕ್ಷಿಯಿಂದಲೇ ಎಂದು ಹೇಳಿದ್ದನ್ನು ಪ್ರಸಂಗತಃ ಉಪಪಾದಿಸುತ್ತಾರೆ.—

**ಮೂ ॥ ಯತ್ಸಾಕ್ಷಿಣೈವ ಮಾನತ್ವಂ ಮಾನಾನಾಮವಸೀಯತೇ ।**
**ಅಮಾನಸ್ಯ ತು ಮಾನತ್ವಂ ಮಾನಸತ್ವಾಚ್ಚಲಂ ಭವೇತ್ ॥ ೨೦ ॥**

ಅ ॥ ಯತ್ = ಯಾವಕಾರಣದ್ದೆಶೆಯಿಂದ, ಮಾನಾನಾಂ = ಎಲ್ಲಾಜ್ಞಾನಗಳಿಗೂ, ಮಾನತ್ವಂ=ಪ್ರಾಮಾಣ್ಯವು, ಸಾಕ್ಷಿಣೈವ=ಸಾಕ್ಷೀಂದ್ರಿಯದಿಂದಲೇ, ಅವಸೀಯತೇ=ನಿಶ್ಚಯಿಸಲ್ಪಡುತ್ತದೋ, (ಇಲ್ಲವಾದರೆ ಅಂದರೆ ಪ್ರಾಮಾಣ್ಯಕ್ಕೆ ಜ್ಞಾನಗ್ರಾಹಕ ಸಾಕ್ಷಿಗ್ರಾಹ್ಯತ್ವರೂಪವಾದ ಸ್ವತಸ್ತ್ವವನ್ನು ಹೇಳದೆ ಅನುಮಿತ್ಯಾದಿ ಗ್ರಾಹ್ಯತ್ವರೂಪವಾದ ಪರತಸ್ತ್ವವನ್ನು ಹೇಳಿದರೆ ಅನುಮಿತಿಪ್ರಾಮಾಣ್ಯಕ್ಕೂ ಅನುಮಿತ್ಯಂತರ ಗ್ರಾಹ್ಯತ್ವವನ್ನು ಒಪ್ಪಬೇಕಾಗಿರುವುದರಿಂದ ಅನವಸ್ಥಾದಿದೋಷಗಳು ಬರಬೇಕಾಗುವವು. ಆದಕಾರಣ ಅನುಮಾನಕ್ಕೂ ಪ್ರಾಮಾಣ್ಯವು ಸಾಕ್ಷಿಯಿಂದಲೇ ತಿಳಿಯಲ್ಪಡುತ್ತದೆ.) (ಹಾಗಾದರೆ ಪ್ರಾಮಾಣ್ಯವು ಸಾಕ್ಷಿವೇದ್ಯವಾದರೆ, ಸಾಕ್ಷಿಗೆ ಹಿಂದೆ ಹೇಳಿದ ಯಾಥಾರ್ಥ್ಯನಿಯಮವೂ ಭಗ್ನವಾಗುವುದು. ಏಕೆಂದರೆ— ಕೆಲವುವೇಳೆ ಪ್ರಮಾಣವಿಲ್ಲದಿರುವ ಭ್ರಮಕ್ಕೂ ಪ್ರಾಮಾಣ್ಯವು ಸಾಕ್ಷಿಯಿಂದ ಗೃಹೀತವಾಗುತ್ತದೆಂದು ಹೇಳಬೇಕಾಗುತ್ತದೆ. ಇಲ್ಲದಿದ್ದರೆ ಭ್ರಮದಿಂದ ನಿಶ್ಶಂಕಪ್ರವೃತ್ತಿಯು ಆಗದೆ ಹೋಗುವುದು. ಭ್ರಮಕ್ಕೆ ಯಾಥಾರ್ಥ್ಯಾಭಾವವು ಬಾಧದಿಂದ ನಿಶ್ಚಿತವಾಗಿಯದೆ ಎಂದರೆ,) ಅಮಾನಸ್ಯ ತು = ಪ್ರಮಾಣವಾಗದಿರುವ ಶುಕ್ತಿರಜತಾದಿ ಭ್ರಮಕ್ಕೆ, ಮಾನತ್ವಂ ತು=ಪ್ರಾಮಾಣ್ಯ ಜ್ಞಾನವಾದರೂ, ಮಾನಸತ್ವಾತ್=ಮನೋಜನ್ಯವಾಗಿರುವುದರಿಂದ, ಚಲಂ=ಬಾಧ್ಯವು, ಭವೇತ್=ಆಗುವುದು. (ಸಾಕ್ಷಿಜ್ಞಾನಕ್ಕೇನೇ ಅಬಾಧ್ಯತ್ವ ನಿಯಮವು.)

ತಾ ॥ ಸ. ರ. ವಿ — ಯಾವುದು ಜಗತ್ತು ಕ್ಷಣಿಕವು ಇತ್ಯಾದಿಗಳನ್ನು ಸಾಧಿಸತಕ್ಕ ಅಪ್ರಮಾಣಕ್ಕೇನೇ ಪ್ರಾಮಾಣ್ಯ ನಿಶ್ಚಯವೋ ಅದು ಮಾನಸ ಪ್ರತ್ಯಕ್ಷಮಾತ್ರ ಸಿದ್ಧವಾಗಿರುವುದರಿಂದ ಪ್ರಬಲ ಪ್ರಮಾಣದಿಂದ ಬಾಧ್ಯವೇ ಆಗುವುದು.

ನ್ಯಾಯಸುಧಾ— ಪ್ರಮಾಣವಾಗದಿರುವ ಶುಕ್ತಿರಜತಾದಿ ಜ್ಞಾನಕ್ಕೆ ಯಾವುದು ಪ್ರಾಮಾಣ್ಯವು ಗೃಹೀತವಾಗುತ್ತದೋ ಅದು ಮನಸ್ಸಿನಿಂದಲೇ ಗೃಹೀತವಾಗುತ್ತದೆ. ಸಾಕ್ಷಿಯಿಂದ ಅಲ್ಲ. ಆದುದರಿಂದ ಶುಕ್ತಿರಜತಾದಿಗಳಿಗೆ ಬಾಧ್ಯತ್ವವು ದೋಷಾಧಾಯಕವಾಗುವುದಿಲ್ಲ. ಆದರೂ ಸಾಕ್ಷಿಯು ಪರೀಕ್ಷಾದಿ ಸಾಹಾಯ್ಯವು ಇಲ್ಲದಿದ್ದಾಗ ಪ್ರಾಮಾಣ್ಯಗ್ರಹಣ, ಅಪ್ರಾಮಾಣ್ಯಗ್ರಹಣ ಇವು ಎರಡರಲ್ಲಿಯೂ ಉದಾಸೀನವಾಗಿರುತ್ತದೆ. ಆಗ ರಾಗಾದಿಗಳಿಂದ ಕೂಡಿದ ಮನಸ್ಸು ಪರೀಕ್ಷಾಭಾವದಿಂದ ಒಡಗೂಡಿದ್ದಾಗಿ ಅಪ್ರಮಾಣವಾದ ಭ್ರಮಾದಿಗಳಲ್ಲಿಯೂ ಪ್ರಾಮಾಣ್ಯಜ್ಞಾನವನ್ನುಂಟುಮಾಡುತ್ತದೆ. ಆದುದರಿಂದ ಭ್ರಮಾದಿಗಳಲ್ಲಿ ಪ್ರಾಮಾಣ್ಯ ಜ್ಞಾನವು ಸಾಕ್ಷಿಯಿಂದ ಬಾರದಿರುವುದರಿಂದ ಸಾಕ್ಷಿಯಾಥಾರ್ಥ್ಯ ನಿಯಮಕ್ಕೆ ಭಂಗವಿರುವುದಿಲ್ಲ ॥ ೨೦ ॥

ವ್ಯಭಿಚಾರಿಯಾದ ಲಿಂಗವು ಅಪ್ರಮಾಣವೆಂದುಕ್ತವಾಗಿದೆ. ಅದರಲ್ಲಿ ವಿಶೇಷವನ್ನು ಹೇಳುತ್ತಾರೆ—

**ಮೂ ॥ ಉತ್ಸರ್ಗತೋಽಪಿ ಯತ್ಪ್ರಾಪ್ತಮಪವಾದ ವಿವರ್ಜಿತಂ ॥ ೨೧ ॥**
**ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥**
**ಅತೋ ಹಿ ಭೋಜನಾದೀನಾಮಿಷ್ಟಸಾಧನತಾಽನುಮಾ ।**
**ಮಾನಂ ವ್ಯವಹೃತೌ ನಿತ್ಯಂ ವ್ಯಭಿಚಾರೋ ಹಿ ತತ್ರ ಚ ॥ ೨೨ ॥**

ಅ ॥ ಯತ್=ಯಾವಲಿಂಗವು, ಉತ್ಸರ್ಗತೋಽಪಿ=ಸ್ವಾಭಾವಿಕವಾಗಿಯೇ, ಅಪವಾದ ವಿವರ್ಜಿತಂ=ಸಾಧ್ಯ ವ್ಯಭಿಚಾರದಿಂದ (ಸಾಧ್ಯವು ಇಲ್ಲದಿರುವ ಸ್ಥಳದಲ್ಲಿರೋಣದರಿಂದ) ವಿರಹಿತವಾದುದಾಗಿ, ಪ್ರಾಪ್ತಂ ಅಪಿ=ನಿಶ್ಚಿತವಾದುದಾಗ್ಯೂ, ಅಪವಾದೇನ=ಕಾರಣವಿಶೇಷದಿಂದಲೇವೇ ವ್ಯಭಿಚಾರಿ=ಸಾಧ್ಯವಿಲ್ಲದಿರುವ ಸ್ಥಳದಲ್ಲಿರುತ್ತದೋ, (ಅದು) ಮಾನಮೇವ = ಪ್ರಮಾಣವೇ, ಭವಿಷ್ಯತಿ=ಆಗುವುದು. (ಅಂದರೆ— ಹೇಗೆ ಹೇತುವು ಸಾಧ್ಯವಿದ್ದಲ್ಲಿರೋಣಮಾತ್ರವು ಪ್ರಾಮಾಣ್ಯಕ್ಕೆ ಉಪಯುಕ್ತವಲ್ಲ, ಮತ್ತೆ ನಿರುಪಾಧಿಕವಾದ ಸಾಧ್ಯಸಂಬಂಧನಿಯಮವೇ ಪ್ರಾಮಾಣ್ಯಕ್ಕೆ ಉಪಯುಕ್ತವಾಗುತ್ತದೋ, ಹಾಗೆಯೇ ವ್ಯಭಿಚಾರವೂ ಕೂಡ ನಿರುಪಾಧಿಕವಾಗಿದ್ದರೇನೇ ಅಸಾಧಕತ್ವಕ್ಕೆ ಕಾರಣವಾಗುತ್ತದೆ. ಸೋಪಾಧಿಕ ವ್ಯಭಿಚಾರವು ಅಸಾಧಕತ್ವಕ್ಕೆ ಕಾರಣವಾಗಲಾರದು). (ಇದು ಏಕೆ ಎಂದರೆ) ಅತ ಏವ ಹಿ=ಸೋಪಾಧಿಕವಾದ ವ್ಯಭಿಚಾರಕ್ಕೆ ಅಪ್ರಾಮಾಣ್ಯ ಕಾರಣತ್ವವಿಲ್ಲದಿರುವಪ್ರಯುಕ್ತವೇ, ಭೋಜನಾದೀನಾಂ=ಮುಂದೆ ಆಗತಕ್ಕ ಭೋಜನಾದಿಗಳಿಗೆ, ಇಷ್ಟ ಸಾಧನತಾನುಮಾ=ಇಷ್ಟಸಾಧನತ್ವಾನುಮಾನವು, ಮಾನಂ=ಪ್ರಮಾಣವಾಗುವುದು. (ಉಪಾಧಿ ನಿಮಿತ್ತಕವಾದ ವ್ಯಭಿಚಾರವು ಅಪ್ರಾಮಾಣ್ಯಕ್ಕೆ ಕಾರಣವಾಗಿದ್ದರೆ ಆಗ 'ವಿಮತಂ ಭೋಜನಂ ಇಷ್ಟಸಾಧನಂ ಭೋಜನತ್ವಾತ್ ಹ್ಯಸ್ತನಭೋಜನವತ್'=ವಿವಾದವಿಷಯವಾದ ಭೋಜನವು ಇಷ್ಟಕ್ಕೆ ಸಾಧನವು, ಭೋಜನವಾಗಿರುವುದರಿಂದ ನಿನ್ನೆಮಾಡಿದ ಭೋಜನದಂತೆ, ಎನ್ನುವ ಅನುಮಾನವು ಅಪ್ರಮಾಣವಾಗಬೇಕಾಗುವುದು.) (ಆ ಅನುಮಾನವು ಅಪ್ರಮಾಣವೇ ಆಗಲಿ ಎಂದರೆ—) ವ್ಯವಹೃತೌ=ಪ್ರವೃತ್ತಿಯಲ್ಲಿ, ನಿತ್ಯಂ=ನಿತ್ಯವಾಗಿ ನಿಃಶಂಕವಾಗಿ, ಕಾರಣಂ=ಕಾರಣವಾಗುತ್ತದೆ. (ಅಂದರೆ— ವ್ಯಭಿಚಾರದಿಂದ ಈ ಅನುಮಾನವು ಅಪ್ರಮಾಣವಾಗುವುದಾದರೆ ಆಗ ವ್ಯವಹರಿಸುವವರು ಅಪ್ರಮಾಣವೆಂದೇ ನಿಶ್ಚಯಿಸಿಯಾರು. ತಥಾಚ ಭೋಜನದಲ್ಲಿ ವಿವೇಕಿಗಳಿಗೆ ಪ್ರವೃತ್ತಿಯು

ಬಾರದೆಹೋಗಬೇಕಾಗುವುದು) (ಹಾಗಾದರೆ ವ್ಯಭಿಚಾರಿಯಾದ ಸಾಧನವು ಸಂಶಯವನ್ನು ಹೊಂದಿಸಿಕೊಡುತ್ತದೆ. ಸಂಶಯವೂ ಕೂಡ ಪ್ರವೃತ್ತಿಗೆ ಕಾರಣವಾಗುತ್ತದೆ ಎಂದರೆ— ಸಂಶಯವು ಆಶಂಕೆಯಿಂದ ಕೂಡಿದ ಪ್ರವೃತ್ತಿಯನ್ನೇ ಹುಟ್ಟಿಸುತ್ತದೆ. ನಿರಂಕುಶವಾದ ಪ್ರವೃತ್ತಿಯನ್ನು ಹುಟ್ಟಿಸುವುದಿಲ್ಲ. ಇದಾದರೂ ನಿರಂಕುಶವೆಂದು ಸರ್ವರಿಗೂ ಅನುಭವಸಿದ್ಧವಾಗಿದೆ ಎನ್ನುವ ಅಭಿಪ್ರಾಯದಿಂದ 'ನಿತ್ಯಂ' ಎಂದು ಹೇಳಿರುವರು ) (ಈ ಭೋಜನತ್ವಾನುಮಾನವು ವ್ಯಭಿಚಾರ ವಿಲ್ಲದಿರುವುದರಿಂದಲೇ ಪ್ರಮಾಣವಾಗುತ್ತದೆಂದು ಹೇಳುತ್ತೇವೆಂದಾಶಂಕಿಸಿದರೆ—) ತತ್ರ ಚ= ಭೋಜನತ್ವ ಮೊದಲಾದ ಅನುಮಾನದಲ್ಲಿ, ವ್ಯಭಿಚಾರೋ ಹಿ=ಸಾಧ್ಯವಾದ ಇಷ್ಟಸಾಧನತ್ವದಿಂದ ವ್ಯಭಿಚಾರವು (ಅಂದರೆ ಇಷ್ಟಸಾಧನತ್ವವಿಲ್ಲದಿರುವುದರಲ್ಲಿರೋಣವು) ಸ್ಪಷ್ಟವೇ ಆಗಿದೆ. ಹೇಗೆಂದರೆ— ಕೆಲವು ಅಪಥ್ಯ ಭೋಜನದಲ್ಲಿ ಅನಿಷ್ಟಸಾಧನತ್ವವೂ ತೋರುತ್ತದೆ. ಅಲ್ಲಿ ಭೋಜನತ್ವಾನುಮಾನಕ್ಕೆ ಇಷ್ಟಸಾಧನತ್ವರೂಪ ಸಾಧ್ಯ ವ್ಯಭಿಚಾರವು ಅಪಥ್ಯತ್ವ ಮೊದಲಾದ ಉಪಾಧಿನಿಮಿತ್ತಕವೇ

**ತಾ ॥ ಸ. ರ. ವಿ.—** (1) ಯಾವುದು ಯಾವುದು ಭೋಜನವೋ ಅದು ಅದು ಇಷ್ಟಕ್ಕೆ ಸಾಧನವು ಎಂದು ವ್ಯಾಪ್ತಿಯು. ಕೆಲವುಕಡೆ ಅಪಥ್ಯವಾದ ಭೋಜನವು ಅನಿಷ್ಟಗಳಾದ ರೋಗಾದಿ ಗಳಿಗೆ ಸಾಧನವಾಗಿರುವುದರಿಂದ ವ್ಯಭಿಚಾರಿಯಾಗುತ್ತದೆ. ಆದರೂ ಭೋಜನಪ್ರವೃತ್ತಿ ವ್ಯವ ಹಾರಗಳಿಗೆ ಅಂಗವಾಗುತ್ತದೆ.

**ನ. ಚ. ವಿ.—** (1) 'ಯದ್ಯತ್ ಭೋಜನಂ ತತ್ತದಿಷ್ಟಸಾಧನಂ' ಎಂದು ವ್ಯಾಪ್ತಿ ಯಿದ್ದಾಗ್ಯೂ ಕೆಲವುಕಡೆ ಅಪಥ್ಯ ಭೋಜನವು ಅನಿಷ್ಟಸಾಧನವಾಗಿರುವುದರಿಂದ ವ್ಯಭಿಚಾರವೇ. ಅಷ್ಟರಿಂದ ನಿತ್ಯಭೋಜನಾದಿ ವ್ಯವಹಾರಕ್ಕೆ ಭಂಗವಿಲ್ಲ; ಏವಂಚ ನಿತ್ಯವಾದ ವ್ಯವಹಾರವು ಬೇರೆ ಪ್ರಕಾರ ಕೂಡದಿರುವುದರಿಂದ ಪ್ರಮಾಣಗಳಿಗೆ ಪ್ರಾಮಾಣ್ಯವನ್ನು ಗ್ರಹಿಸತಕ್ಕ ಸಾಕ್ಷಿಯನ್ನು ಅಂಗೀಕರಿಸಬೇಕು ॥ ೨೧ ॥ ೨೨ ॥

**ಸ. ರ. ವಿ.—** ಹೀಗೆ ಆಶ್ರಯಾಸಿದ್ಧಿಯು ದೂಷಣವಲ್ಲವೆಂದು ಹೇಳಿ ಈಗ ವ್ಯಧಿಕರಣಾ ಸಿದ್ಧಿಯೂ ಹೇತು ದೂಷಣವಲ್ಲವೆಂದು ಹೇಳುತ್ತಾರೆ.

**ನ್ಯಾಯಸ.ಧಾ—** (1) ಹಿಂದೆ ಹೇಳಿದಪ್ರಕಾರ ಅಸದಾಶ್ರಯತ್ವಕ್ಕೆ ಹೇತು ದೂಷಣತ್ವ ವನ್ನು ನಿರಾಕರಿಸಿ ವ್ಯಧಿಕರಣಾಸಿದ್ಧಿಗೂ ಕೂಡ ಹೇತು ದೂಷಣತ್ವವನ್ನು ನಿರಾಕರಿಸುತ್ತಾ ವ್ಯಧಿ ಕರಣಾಸಿದ್ಧಿಯು ಹೇತು ದೂಷಣವೆಂದು ಹೇಳುವವರ ಪಕ್ಷದಲ್ಲಿ ವ್ಯಧಿಕರಣವಾದಾಗ್ಯೂ ಹೇತು ವಾಗುತ್ತದೆಂದು ಹೇಳುವುದಾದರೆ ಆಗ 'ಆತ್ಮಾ ನಿತ್ಯಃ ಕಾಕಸ್ಯ ಕಾರ್ಷ್ಣ್ಯಾತ್'=ಜೀವನು ನಿತ್ಯ ನಾಗುವನು, ಕಾಗೆಯು ಕಪ್ಪಾಗಿರುವುದರಿಂದ ಎನ್ನುವುದೂ ಹೇತುವಾಗಬೇಕಾಗುವುದು, ಎನ್ನುವ ೧ ಅತಿಪ್ರಸಂಗದಿಂದಲಾಗಲೀ ವ್ಯಧಿಕರಣತ್ವಕ್ಕೆ ಹೇತು ದೂಷಣತ್ವವನ್ನು ಅಂಗೀಕರಿಸುವುದೋ? ೨ ವ್ಯಾಪ್ತಿಯಿಲ್ಲದಿರುವುದರಿಂದಲೋ? ೩ ಹೇತುವು ಪಕ್ಷದಲ್ಲಿಲ್ಲದಿರುವುದರಿಂದಲೋ? ಎನ್ನುವ ವಿಕಲ್ಪವನ್ನು ಮಾಡಿಕೊಂಡು ಇವುಗಳಲ್ಲಿ ಒಂದನೇದ್ದನ್ನು ನಿರಾಕರಿಸುತ್ತಾರೆ—

**ಮೂ ॥ ವ್ಯಾಪ್ತತ್ವೇ ವ್ಯಾಶ್ರಯತ್ವಂ ತು ಕಥಮೇವ ಹಿ ದೂಷಣಂ ॥ ೨೩ ॥**
**ರೋಹಿಣ್ಯುದಯ ಆಸನ್ನಃ ಕೃತ್ತಿಕಾಭ್ಯುದಿತಾ ಯತಃ ।**
**ಇತ್ಯುಕ್ತೇ ಸಾಧನಂ ನೋ ಕಿಂ ನ ಹ್ಯಾಜ್ಞೈವಾತ್ರ ಸಾಧಿ(ಧ)ಕಾ ॥ ೨೪ ॥**

**ಅ ॥** ವ್ಯಾಪ್ತತ್ವೇ=ಹೇತುವಿಗೆ ಸಾಧ್ಯದಿಂದ ವ್ಯಾಪ್ತಿಯಿದ್ದರೆ, ವ್ಯಾಶ್ರಯತ್ವಂ ತು=ಸಾಧ್ಯಾ ಶ್ರಯುದ್ದೇಶಯಿಂದ ಭಿನ್ನಾಶ್ರಯತ್ವರೂಪವಾದ ವ್ಯಧಿಕರಣಾಸಿದ್ಧಿಯು, ಕಥಮೇವ ಹಿ=ಹೇಗೆ

ತ್ವಸ್ಯ, ದೂಷಣಂ = ದೂಷಣವಾಗುವುದು? (ಹೇಗೂ ದೂಷಣವಾಗಲಾರದು.) (ಕಾಗೆಯ ಕಾರ್ಷ್ಣ್ಯವು ವ್ಯಾಪ್ತಿಯಿಲ್ಲದಿರುವುದರಿಂದಲೇ ನಿತ್ಯತ್ವಕ್ಕೆ ಅಸಾಧಕವು. ಪುನಃ ವ್ಯಧಿಕರಣವಾಗಿರುವುದರಿಂದ ಅಲ್ಲ. ಆದಕಾರಣ ಅತಿಪ್ರಸಂಗವಿಲ್ಲ. ಇದನ್ನು ಏಕೆ ಅಂಗೀಕರಿಸಬೇಕೆಂದರೆ— ವ್ಯಾಪ್ತ್ಯಾದ್ಯಂಗಗಳು ಸಂಪೂರ್ಣವಾಗಿರುವಾಗ ವ್ಯಧಿಕರಣತ್ವಮಾತ್ರದಿಂದ ಹೇತುವು ಸಾಧಕವಲ್ಲವೆನ್ನುವುದು ಎಲ್ಲಿಯೂ ತೋರಿಬರಲಿಲ್ಲ.) (ಮತ್ತು ವ್ಯಾಪ್ತಿ ಮೊದಲಾದ ಅಂಗಗಳು ಸಂಪೂರ್ಣವಾಗಿರುವಾಗ ವ್ಯಧಿಕರಣತ್ವಮಾತ್ರದಿಂದ ಹೇತುವಿಗೆ ದುಷ್ಟತ್ವವು ತೋರಿಬರಲಿಲ್ಲವೆಂದಿಷ್ಟೇ ಅಲ್ಲ. ಮತ್ತೆ ವ್ಯಧಿಕರಣವಾದ ಹೇತುವಿಗೂ ವ್ಯಾಪ್ತ್ಯಾದಿಗಳು ಇರೋಣದರಿಂದ ಸಾಧ್ಯ-ಸಾಧಕತ್ವವು ದೃಷ್ಟವಾಗಿದೆ ಎನ್ನುತ್ತಾರೆ.) ಯತಃ = ಯಾವಕಾರಣದಿಂದ, ಕೃತ್ತಿಕಾ = ಕೃತ್ತಿಕಾನಕ್ಷತ್ರವು, ಅಭ್ಯುದಿತಾ = ಉದಯವನ್ನು ಹೊಂದಿತೋ, (ಅತಃ = ಆದಕಾರಣ,) ರೋಹಿಣ್ಯುದಯಃ = ರೋಹಿಣೀ ನಕ್ಷತ್ರದ ಉದಯವು, ಆಸನ್ನಃ = ಸಮೀಪಿಸಿತು. ಇತಿ = ಹೀಗೆ, ಉಕ್ತೇ = ವ್ಯಧಿಕರಣವಾಗಿ ಹೇಳಿದಾಗ್ಯೂ, (ಈ ಅನುಮಾನವು) ಸಾಧನಂ ನೋ ಕಿಂ = ಸಾಧ್ಯಸಿದ್ಧಿಗೆ ಅಂಗವು ಆಗುವುದಿಲ್ಲವೋ ಏನು? (ಆಗಿಯೇ ಆಗುತ್ತದೆ ) (ಹೇತುಸಾಧ್ಯಗಳಿಗೆ ಸಾಮಾನಾಧಿಕರಣ್ಯ ಬೇಕೆನ್ನುವ ದುರಾಗ್ರಹದಿಂದ ಕಾಲಾದಿರೂಪವಾದ ಒಂದು ಅಧಿಕರಣವನ್ನು ಇಟ್ಟುಕೊಂಡು 'ವಿಮತಃ ಕಾಲಃ ರೋಹಿಣ್ಯುದಯಾಸತ್ತಿಮಾನ್ ಕೃತ್ತಿಕೋದಯವತ್ಕಾಲತ್ವಾತ್ ಅತೀತಕಾಲವತ್' ಎಂದು ಪ್ರಯೋಗ ಏರ್ಪಡಿಸುವುದನ್ನು ಮಾಡಬೇಕೆನ್ನುವಲ್ಲಿ, ೧ ನೈಯಾಯಿಕಾದಿಗಳ ಸಮಯವೇ ನಿಯಾಮಕವೋ? ೨ ಅಥವಾ ಈ ವಿಷಯದಲ್ಲಿ ಪ್ರಮಾಣವಿದೆಯೋ? ೧ನೇದ್ದನ್ನು ದೂಷಿಸುತ್ತಾರೆ). ಅತ್ರ = ಉಪಪತ್ತಿಸಿದ್ಧವಾದ ಅರ್ಥದಲ್ಲಿ, ಆಜ್ಞೈವ = ಸಮಯಮಾತ್ರವೇ, ಸಾಧಿಕಾ = ಸಾಧಕವಾದುದು, ನ ಹಿ = ಅಲ್ಲವಷ್ಟೆ? ಹಿ = ಪ್ರಸಿದ್ಧವು. ಅಂದರೆ— ಹಾಗಿದ್ದರೆ ಎಲ್ಲವನ್ನು ವಾಙ್ಮಾತ್ರದಿಂದಲೇ ಉಪದೇಶಿಸಬೇಕಾಗುವುದು. ಎಲ್ಲಿಯೂ ಪ್ರಮಾಣವನ್ನು ಹೇಳಬೇಕಾಗಿಲ್ಲ. ಇದಕ್ಕೆ ವಿಪರೀತವಾದ ಆಜ್ಞೆಯಿಂದ ಇದಕ್ಕೆ ವಿರುದ್ಧರೀತಿಯೂ ಆಗಬೇಕಾಗುವುದು ಎಂದು ಪ್ರಸಿದ್ಧವು. (೨ನೇದ್ದು ಕೂಡಲಾರದು. ಈ ವಿಷಯದಲ್ಲಿ ಪ್ರಮಾಣವು ಎಲ್ಲಿಯೂ ತೋರಿಬರುವುದಿಲ್ಲ).

**ತಾ ||** **ಸ ರ. ಪಿ.**— (1) ಕೃತ್ತಿಕೋದಯದಿಂದ ರೋಹಿಣೀನಕ್ಷತ್ರಕ್ಕೆ ಆಸತ್ಯನುಮಾನವೂ ಕೂಡ ವ್ಯಧಿಕರಣವಾದುದೂ ಸಾಧ್ಯ-ಸಾಧಕವಾಗಿ ದೃಷ್ಟವಾಗಿದೆ.

**ನ್ಯಾಯಸುಧಾ** — (1) ಹಿಂದೆ ಹೇಳಿದ ಕೃತ್ತಿಕೋದಯವು ವ್ಯಧಿಕರಣವಾದುದೂ ರೋಹಿಣ್ಯುದಯಾಸತ್ತಿಯನ್ನು ಸಾಧಿಸಿಕೊಡುತ್ತದೆಂದು ಇಷ್ಟೇ ಅಲ್ಲ. ಮತ್ತೆ (೧) ಅಧೋದೇಶದಲ್ಲಿ ನದೀಪ್ರವಾಹವನ್ನು ಕಂಡು, ಊರ್ಧ್ವದೇಶದಲ್ಲಿ ಮಳೆಯು ಬಂದದೆ ಎನ್ನುವ ಅನುಮಾನವು. (೨) ಕುಂಬಾರನ ಶಾಲೆಯಲ್ಲಿ ಹಸಿ ಹೊಸ ಗಡಿಗೆ, ಚಕ್ರಭ್ರಮಣಗಳನ್ನು ಕಂಡು ಕುಂಬಾರನು ಇದ್ದಾನೆನ್ನುವ ಅನುಮಾನವು. (೩) 'ನದೀ ವೃಷ್ಟಿಮದುತ್ತರದೇಶಸಂಬದ್ಧಾ ಪೂರತ್ವಾತ್ ಸಮ್ಮತವತ್' ನದಿಯು ವೃಷ್ಟಿಯುಳ್ಳ ಉತ್ತರದೇಶ ಸಂಬಂಧವುಳ್ಳದ್ದು, ಜಲಪ್ರವಾಹವಿರುವುದರಿಂದ, ಸಮ್ಮತವಾದ ನದಿಯಂತೆ. (೪) 'ಪ್ರತ್ಯಗ್ರಘಟಃ ಕುಲಾಲಾಸತ್ತಿಮಾನ್ ಪ್ರತ್ಯಗ್ರತ್ವಾತ್' (೫) 'ಚಕ್ರಭ್ರಮಃ ಕುಲಾಲಾಸತ್ತಿಮಾನ್ ಚಕ್ರಭ್ರಮತ್ವಾತ್ ಸಮ್ಮತವತ್' ಎಂದು ಸಾಮಾನಾಧಿಕರಣ್ಯವನ್ನು ಸಂಪಾದಿಸಿಕೊಂಡು ಅನುಮೇಯಿಸುತ್ತೇವೆಂದರೆ— ಹೀಗೆ ಹೇಳಕೂಡದು. ಏಕೆಂದರೆ— (೬) ಇಲ್ಲಿಯೂ ಕಾಲಾದಿಗಳನ್ನು ಪಕ್ಷವನ್ನಾಗಿಟ್ಟುಕೊಂಡು, ೧ 'ವಿಮತಃ ಕಾಲಃ ರೋಹಿಣ್ಯುದಯಾಸತ್ತಿಮಾನ್ ಕೃತ್ತಿಕೋದಯವತ್ಕಾಲತ್ವಾತ್ ಅತೀತ

ಕಾಲವತ್' ವಿವಾದ ವಿಷಯನಾದ ಕಾಲವು ರೋಹಿಣ್ಯುದಯದ ಆಸತ್ತಿಯುಳ್ಳದ್ದು ಕೃತ್ತಿಕೋದಯವುಳ್ಳ ಕಾಲವಾಗಿರುವುದರಿಂದ ಅತೀತ ಕಾಲದಂತೆ. ಹೀಗೆ ದೇಶವನ್ನಾಗಲೀ, ಕಾಲವನ್ನಾಗಲೀ ಇಟ್ಟುಕೊಂಡು ಸಾಮಾನಾಧಿಕರಣ್ಯವನ್ನು ಹೇಳುವುದಾದರೆ 'ಶಬ್ದಃ ಅನಿತ್ಯಃ ಘಟಸ್ಯ ಕೃತಕತ್ವಾತ್' ಎನ್ನುವ ವ್ಯಧಿಕರಣವೆಂದು ಸರ್ವಸಮ್ಮತವಾದ ಅನುಮಾನದಲ್ಲಿಯೂ, 'ಕಾಲಃ ಶಬ್ದಾನಿತ್ಯತ್ವವಾನ್ ಘಟೀಯ ಕೃತಕತ್ವವತ್ತ್ವಾತ್' ಇತ್ಯಾದಿ ರೂಪದಿಂದ ಎಲ್ಲಾ ಕಡೆಗಳಲ್ಲಿಯೂ ಸಾಮಾನಾಧಿಕರಣ್ಯವನ್ನು ಹೇಳಲಿಕ್ಕೆ ಬರುವುದರಿಂದ ವ್ಯಧಿಕರಣಾನುಮಾನವೇ ಇಲ್ಲವೆಂದಾಗಬೇಕಾಗುವುದರಿಂದ ವ್ಯಧಿಕರಣಾಸಿದ್ಧವೆಂಬ ಹೇತ್ವಾಭಾಸದ ಪರಿಗಣನೆಯೇ ವ್ಯರ್ಥವಾಗುವುದು ಆದುದರಿಂದ ದೇಶಕಾಲಾದಿಗಳನ್ನು ಇಟ್ಟುಕೊಂಡು ಸಾಮಾನಾಧಿಕರಣ್ಯವನ್ನು ಸಾಧಾದಿಸುತ್ತೇವೆಂದು ಹೇಳಕೂಡದು. ಮತ್ತು ಪರೀಕ್ಷಕರ ಅನುಭವವೂ ಕೂಡ ಹೀಗೆ ಇರುವುದಿಲ್ಲ. ಮತ್ತೆ 'ಊರ್ಧ್ವದೇಶೋ ವೃಷ್ಟಿಮಾನ್ ಅಧೋದೇಶೇ ನದೀಪೂರಾತ್', ರೋಹಿಣ್ಯುದಯ ಆಸನ್ನಃ ಕೃತ್ತಿಕಾಯಾಃ ಉದಿತತ್ವಾತ್' ಎಂದೇ ಪರೀಕ್ಷಕರ ಅನುಭವವು. (೬) ಹಾಗಾದರೆ ವ್ಯಧಿಕರಣವಾದ ಹೇತುವಿಗೆ ಪಕ್ಷಧರ್ಮ (ವೃತ್ತಿ)ತ್ವ ರೂಪವಾದ ಅಂಗವಿಲ್ಲದಿರುವುದರಿಂದ ಸಾಧಕತ್ವವು ಹೇಗೆಂದರೆ— ಪಕ್ಷಧರ್ಮತ್ವವು ಎಲ್ಲಾ ಕಡೆಗಳಲ್ಲಿ ಆವಶ್ಯಕವಲ್ಲ. ಸಮುಚಿತ ದೇಶವೃತ್ತಿತ್ವವೇ ಆವಶ್ಯಕವು. ಹಾಗಿದ್ದರೆ ಸಾಧ್ಯನಿಯತದೇಶವೃತ್ತಿತ್ವವು ಹೇಗೆ ಸಿದ್ಧಿಸುವುದೆಂದರೆ— ವ್ಯಾಪ್ತಿಸ್ವಭಾವದಿಂದ ಎನ್ನುತ್ತೇವೆ ಹೇಗೆಂದರೆ— 'ಯತ್ ಕೃತಕಂ ತತ್ ಅನಿತ್ಯಂ' ಎಂದು ಸಾಮಾನಾಧಿಕರಣ್ಯವನ್ನು ಇಟ್ಟುಕೊಂಡು ವ್ಯಾಪ್ತಿಯಿದ್ದ ಪ್ರಯುಕ್ತ ಕೃತಕತ್ವವು ತನ್ನ ಆಶ್ರಯದಲ್ಲಿಯೇ ಅನಿತ್ಯತ್ವವನ್ನು ತಿಳಿಸಿಕೊಡುತ್ತದೆ. ಹಾಗೆಯೇ ಕೃತ್ತಿಕೋದಯವು ವ್ಯಧಿಕರಣವಾದ ರೋಹಿಣ್ಯುದಯಾಸತ್ತಿಯಿಂದ ವ್ಯಾಪ್ತವಾಗಿರುವ ಪ್ರಯುಕ್ತ ಅದನ್ನು ತಿಳಿಸಿಕೊಡುತ್ತದೆ. ಹೇಗೆ ಸಾಮಾನಾಧಿಕರಣ್ಯವಿದ್ದರೂ ಪ್ರದೇಶಾದಿ ನಿಯಮವಿದೆಯೋ, ಹಾಗೆಯೇ ವೈಯಧಿಕರಣ್ಯವಿದ್ದರೂ ಪ್ರದೇಶಾದಿ ನಿಯಮವಿದೆ; ದೋಷವಿಲ್ಲ. ಆದಕಾರಣ ೧ 'ಯತ್ರ=ಇದಂ ತತ್ರ ಇದಂ ಎಲ್ಲಿ ಕೃತಕತ್ವವೋ ಅಲ್ಲಿ ಅನಿತ್ಯತ್ವಮೊದಲಾದುದು ಎನ್ನುವುದರಂತೆ, ೨ ಯದಾ ಇದಂ ತದಾ ಇದಂ= ಯಾವಾಗ ವಿಶಿಷ್ಟಮೇಘೋನ್ನತಿಯೋ ಆಗ ಸುವೃಷ್ಟ್ಯಾದಿಗಳು ಎನ್ನುವುದರಂತೆಯೂ, ೩ ಯತ್ ಏವಂ ತತ್ ಏವಂ = ಯಾವುದು ದ್ರವ್ಯತ್ವಾಶ್ರಯವೋ ಅದು ಗುಣಾಶ್ರಯತ್ವವುಳ್ಳದ್ದು ಇದರಂತೆಯೂ, ೪ ಯದಿ ಇದಂ ತರ್ಹಿ ಇದಂ= ಕೃತ್ತಿಕಾನಕ್ಷತ್ರದ ಉದಯವಾದರೆ ರೋಹಿಣ್ಯುದಯಾಸತ್ತಿಯು ಎಂದು ವ್ಯಾಪ್ತಿಯು ಕೂಡುತ್ತದೆ. ವ್ಯಾಪ್ತಿಯನ್ನು ಅನುಸರಿಸಿಯೇ ಹೇತುಸಿದ್ಧಿಯು ಆವಶ್ಯಕವಾಗಿರುವುದರಿಂದ ಹೇತುವು ಪಕ್ಷದಲ್ಲಿರಬೇಕೆನ್ನುವ ನಿಯಮವು ಅನಾವಶ್ಯಕವಾಗಿರುವುದರಿಂದ ವ್ಯಧಿಕರಣವಾದುದಕ್ಕೂ ಹೇತುತ್ವವು ಯುಕ್ತವೇ. ಅಂತೂ ವ್ಯಧಿಕರಣಾಸಿದ್ಧಿಯು ದೂಷಣವಲ್ಲ ॥ ೨೩ ॥ ೨೪ ॥

**ಸ. ರ. ವಿ** — ಹಾಗಾದರೆ ಜಗತ್ತು ಸದಸದ್ವಿಲಕ್ಷಣವು ಎನ್ನುವ ಪಕ್ಷವನ್ನು ಅಪ್ರಸಿದ್ಧವಿಶೇಷಣತ್ವ ರೂಪವಾದ ದೂಷಣದಿಂದಲೇ ಸಿದ್ಧಾಂತಿಗಳು ದೂಷಿಸಬೇಕಷ್ಟೆ? ಆದಕಾರಣ ಅಪ್ರಸಿದ್ಧಸಾಧ್ಯದೂಷಣವಲ್ಲವೆಂದು ಅಂಗೀಕರಿಸುವುದು ಹೇಗೆ, ಎಂದರೆ—

**ನ್ಯಾಯಸುಧಾ**— (1) ಹೇಗೆ ವ್ಯಧಿಕರಣಾಸಿದ್ಧಿಯು ದೋಷವಲ್ಲವೋ, ಹಾಗೆಯೇ ಸಾಧ್ಯಾಪ್ರಸಿದ್ಧಿಯೂ ಸಿದ್ಧಾಂತದಲ್ಲಿ ದೋಷವಲ್ಲ. ಸಾಧ್ಯಾಪ್ರಸಿದ್ಧಿಯು ದೋಷವೆಂದು ಹೇಳುವವರ ಪಕ್ಷದಲ್ಲಿಯೂ ಸಾಧ್ಯರೂಪವಿಶೇಷಣಾಪ್ರಸಿದ್ಧಿಗೆ ಏಕೆ ದೋಷತ್ವವನ್ನು ಒಪ್ಪುವುದು? ೧ ಜಗತ್ತು ಸದಸದ್ವಿಲಕ್ಷಣವು ಬಾಧ್ಯವಾಗಿರುವುದರಿಂದ ಇತ್ಯಾದಿಗಳಿಗೂ ಪ್ರಾಮಾಣ್ಯವು ಬರಬೇಕಾಗಿರುವುದರಿಂದ ಸಾಧ್ಯಾಪ್ರಸಿದ್ಧಿಯು ದೋಷವೆಂದು ಒಪ್ಪುವುದೋ? ೨ ಅಥವಾ ಸಾಧ್ಯರೂಪವಾದ

ವಿಶೇಷಣವು ಅಪ್ರಸಿದ್ಧವಾದರೆ ಸಾಧ್ಯಸಂದೇಹವೇ ಕೂಡದಿರಲು ಸಂದೇಹ ವಿಶೇಷ್ಯತ್ವರೂಪವಾದ ಪಕ್ಷತ್ವವು ಕೂಡದಿರುವುದರಿಂದ ಹೇತುವಿಗೆ ಪಕ್ಷವೃತ್ತಿತ್ವವು ಕೂಡದೆ ಹೋಗಬೇಕಾಗುವುದರಿಂದ ಸಾಧ್ಯಾಪ್ರಸಿದ್ಧಿಯು ದೋಷವೆಂದು ಒಪ್ಪುವುದೋ? ೩ ಅಥವಾ ಸಾಧ್ಯರೂಪ ವಿಶೇಷಣವು ಅಪ್ರಸಿದ್ಧವಾದರೆ ಸಾಧ್ಯದಿಂದ ಹೇತುವಿಗೆ ವ್ಯಾಪ್ತಿಪ್ರತೀತಿಯು ಕೂಡದೆಹೋಗಬೇಕಾಗುವುದರಿಂದ ಸಾಧ್ಯಾಪ್ರಸಿದ್ಧಿಯು ದೋಷವೋ? ೪ ಅಥವಾ ಪ್ರತಿಜ್ಞಾವಾಕ್ಯದಲ್ಲಿ ಅಪ್ರತೀತಾರ್ಥವುಳ್ಳ ಪದಗಳು ಇದ್ದುದರಿಂದ ಅದು ಬೋಧಕವಾಗದೇನೇ ಹೋಗಬೇಕಾಗುವುದು ಆದಕಾರಣ ಸಾಧ್ಯಾಪ್ರಸಿದ್ಧಿಯು ದೂಷಣವೋ ಎಂದು ವಿಕಲ್ಪಿಸಿ ಇವುಗಳಲ್ಲಿ (೧ನೇ)ಒಂದನೇದ್ದನ್ನು ದೂಷಿಸುತ್ತಾರೆ—

**ಮೂ ॥ ಅನ್ಯತ್ಸದಸತೋರ್ವಿಶ್ವಮಿತಿ ಚ ವ್ಯಾಹತೇರಮಾ ।**
**ಅಸಿದ್ಧಸಾಧನೇ ದೋಷಃ ಕೋ ವ್ಯಾಪ್ತಿರ್ಯದಿ ವಿದ್ಯತೇ ॥**
**ವ್ಯಾಪ್ತಿಶ್ಚ ವ್ಯತಿರೇಕೇಣ ತತ್ರ ಕ್ಲೈಶ್ಯಾ (ಕ್ಲೃ)ಪ್ತಗವ್ಯತೇ ॥ ೨೫ ॥**

ಅ ॥ (ಸತ್ತು ಅಲ್ಲವೆಂದು ಹೇಳಿದಾಗ ಅಸತ್ವವು ಹೇಳಿದಂತೆ ಆಯಿತು. ಅಸತ್ವವು ಸತ್ವಾಭಾವರೂಪವಾಗಿದೆ. ಪುನಃ ಅಸತ್ತಲ್ಲ ಎಂದು ಹೇಳಿದರೆ ಸ್ವವಚನವ್ಯಾಹತಿಯು. ಹೀಗೆಯೇ ಅಸತ್ತಲ್ಲ ಎಂದು ಹೇಳಿದಾಗ ಸತ್ವವು ಲಬ್ಧವಾಗುತ್ತದೆ. ಪುನಃ ಸತ್ತು ಅಲ್ಲ ಎಂದು ಹೇಳಿದರೆ ಸ್ವವ್ಯಾಹತಿಯೇ. ಹೀಗೆ) ವಿಶ್ವಂ=ಜಗತ್ತು, ಸದಸತೋಃ=ಸದಸತ್ತುಗಳ ಸಕಾಶದ್ದೆಶೆಯಿಂದ, ಅನ್ಯತ್=ವಿಲಕ್ಷಣವು. ಇತಿ ಚ=ಸತ್ತೂ ಅಲ್ಲ ಅಸತ್ತೂ ಅಲ್ಲ ಎನ್ನುವ ಪ್ರತಿಜ್ಞೆಯು, ವ್ಯಾಹತೇಃ=ಸ್ವವಚನವಿರೋಧವು ಬರುವುದರಿಂದಲೇ, ಅಮಾ=ಅಪ್ರಮಾಣವು. (ಸಾಧನಕ್ಕೆ ಅಂಗವಾಗುವುದಿಲ್ಲ. ವಿಶೇಷಣವಾದ ಸದಸದ್ವೈಲಕ್ಷಣ್ಯವು ಅಪ್ರಸಿದ್ಧವಾಗಿರುವುದರಿಂದ ಸಾಧನಾಂಗವಾಗುವುದಿಲ್ಲವೆಂದಲ್ಲ. ಏಕೆಂದರೆ— ಸ್ವವ್ಯಾಹತಿಯು 'ಮೇ ಮಾತಾ ವಂಧ್ಯಾ' ಇತ್ಯಾದಿಗಳಲ್ಲಿ ದೂಷಣವೆಂದು ನಿಶ್ಚಿತವಾಗಿದೆ. ಸ್ವವಚನವಿರೋಧ, ಸ್ವನ್ಯಾಯವಿರೋಧ, ಸ್ವಕ್ರಿಯಾವಿರೋಧ, ಸ್ವಸಿದ್ಧಾಂತವಿರೋಧ ಇವುಗಳು ಇಲ್ಲದಿರುವ ಉಕ್ತಿಯೇ ಸಾಧನಾಂಗವೂ, ದೂಷಣಾಂಗವೂ ಆಗಿದೆ). (ಸಾಧ್ಯಾಪ್ರಸಿದ್ಧಿಯಿಂದ ಎಲ್ಲಿ ಪಕ್ಷವೃತ್ತಿತ್ವಾಸಿದ್ಧಿಯು ಹೇಳಲ್ಪಡುತ್ತದೋ ಅಲ್ಲಿ ವ್ಯಾಪ್ತಿ ಮೊದಲಾದ ಇತರಾಂಗಗಳು ಸಂಪೂರ್ಣವಾಗಿ ಇವೆಯೋ, ಇಲ್ಲವೋ, ಇಲ್ಲದಿದ್ದರೆ ಅದರಿಂದಲೇ ಅನುಮಾನವು ದುಷ್ಟವಾಯಿತು. ಸಾಧ್ಯರೂಪವಾದ ವಿಶೇಷಣಾಪ್ರಸಿದ್ಧಿಯಿಂದ ಅಲ್ಲ). ಯದಿ=ಯಾವ ಪಕ್ಷದಲ್ಲಿ, ವ್ಯಾಪ್ತಿಃ=ವ್ಯಾಪ್ತಿಮೊದಲಾದುದು, ವಿದ್ಯತೇ=ಇರುತ್ತದೋ, ಆಗ ಅಸಿದ್ಧಸಾಧನೇ=ಅಪ್ರಸಿದ್ಧವಾದುದನ್ನು ಸಾಧಿಸಿದರೆ, ಕಃ ದೋಷಃ=ಯಾವ ದೋಷವು? ಯಾವ ದೋಷವೂ ಇಲ್ಲವೇಇಲ್ಲ. (ಅಂದರೆ- ಸಂಧಿಗ್ಧಸಾಧ್ಯವುಳ್ಳದ್ದು ಪಕ್ಷವೆಂದು ಇಟ್ಟುಕೊಂಡರೆ— ತಿಳಿದವನು ಮತ್ತೊಬ್ಬನನ್ನು ಪರೀಕ್ಷಿಸುವುದಕ್ಕಾಗಿ ಪ್ರಮಾಣವೇನೆಂದು ಪ್ರಶ್ನಿಸುವನು. ಆಗ ಸಂದೇಹವಿಲ್ಲದಿರುವುದರಿಂದ ಆಗ ಪ್ರಮಾಣವಾಗಿ ಉದಾಹರಿಸಿದ ಅನುಮಾನವು ಅಪ್ರಮಾಣವಾಗಬೇಕಾಗುವುದು. ಆದಕಾರಣ ಸಂಧಿಗ್ಧ ಸಾಧ್ಯವುಳ್ಳದ್ದು ಪಕ್ಷವು ಇದು ಮೊದಲಾದುದು ಸಂಭಾವಕಗಳು. ಪಾರಮಾರ್ಥಿಕವಾಗಿ ಅನುಮಿತಿವಿಷಯವೇ ಪಕ್ಷವು. ಆದಕಾರಣ ಸಂದೇಹವಿಲ್ಲವಾದರೆ ಪಕ್ಷತ್ವವು ಕೂಡುವುದಿಲ್ಲವೆನ್ನುವುದು ಇಲ್ಲದಿರುವುದರಿಂದ ಅಪ್ರಸಿದ್ಧವಾದುದನ್ನು ಸಾಧಿಸಿದರೂ ಪಕ್ಷಧರ್ಮತ್ವಾಸಿದ್ಧಿರೂಪದೋಷವಿಲ್ಲ.) (೩ನೇದ್ದನ್ನು ನಿರಾಕರಿಸುತ್ತಾರೆ.) ತತ್ರ= '೧ ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ವಾತ್ ೨ ಭೂಃ ಇತರೇಭ್ಯೋಭಿದ್ಯತೇ ಗಂಧವತ್ವಾತ್' ೩ ಈಶ್ವರಃ ಸರ್ವಜ್ಞಃ ಸರ್ವಕರ್ತೃತ್ವಾತ್' ಇದುಮೊದಲಾದ ಕೇವಲ ವ್ಯತಿರೇಕಿಯಾದ ಸಾಧನಗಳ ಸಮುದಾಯದಲ್ಲಿ, ಕ್ಲೈಶ್ಯಾ = ಅಪ್ರಸಿದ್ಧಗಳಾದ ಸಾತ್ಮಕತ್ವ ಮೊದಲಾದ ಸಾಧ್ಯಗಳಿಂದ

ವ್ಯಾಪ್ತಿಶ್ಚ=ವ್ಯಾಪ್ತಿಯೂ ಕೂಡ ಇದೆ. ಪಕ್ಷಧರ್ಮತ್ವಮಾತ್ರವಿರುವುದಲ್ಲ. ವ್ಯತಿರೇಕೇಣ= ವ್ಯತಿರೇಕಲಿಂಗದಿಂದ ಅಂದರೆ, ಸಾಧ್ಯಾಭಾವವು ಸಾಧನಾಭಾವದಿಂದ ವ್ಯಾಪ್ತವಾಗಿರುವಪ್ರಯುಕ್ತ ಸಾ=ವ್ಯಾಪ್ತಿಯು, ಅವಗಮ್ಯತೇ ಚ=(ಗಮ್ಯತೇ ಏವ ಚ) ತಿಳಿಯಲ್ಪಡುತ್ತದೆ. (ಕೇವಲ ವ್ಯತಿರೇಕ್ಯನುಮಾನವು ಪ್ರಮಾಣವೆಂದು ಹೇಳಬೇಕು. ಅಲ್ಲಿ ವ್ಯಾಪ್ತಿ ಇದೆ ಎಂದೂ ವ್ಯಾಪ್ತಿಜ್ಞಾನವಾಗುತ್ತದೆಂದೂ ಹೇಳಬೇಕು. ಅಲ್ಲಿ ಸಾಧ್ಯವು ಪ್ರಸಿದ್ಧವೆಂದು ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ- ಪಕ್ಷದಲ್ಲಿಯೇ ಪ್ರಸಿದ್ಧವೆಂದು ಹೇಳಿದರೆ ಸಿದ್ಧಸಾಧನತ್ವವು ಬರುವುದು. ಬೇರೆಕಡೆ ಸಾಧ್ಯವು ಪ್ರಸಿದ್ಧವೆಂದು ಹೇಳಿದರೆ ಅಲ್ಲಿ ಹೇತುವಿದ್ದರೆ ಕೇವಲ ವ್ಯತಿರೇಕಿತ್ವವೇ ಕೂಡಲಾರದು. ಅಲ್ಲಿ ಹೇತು ಇಲ್ಲವಾದರೆ ಸಪಕ್ಷವ್ಯಾವರ್ತತ್ವರೂಪವಾದ ಅಸಾಧಾರಣ್ಯವು ಬರುವುದು. ಆದುದರಿಂದ ಸಾಧ್ಯವು ಪಕ್ಷದಲ್ಲಿಯೂ, ಬೇರೆ ಕಡೆಯಲ್ಲಿಯೂ ಪ್ರಸಿದ್ಧವಲ್ಲವೆಂದೇ ಹೇಳಬೇಕು. ಅಂತಹ ಅಪ್ರಸಿದ್ಧ ಸಾಧ್ಯದಿಂದಲೂ ಹೇತುವಿಗೆ ವ್ಯಾಪ್ತಿ ಇದೆಯೆಂದೂ, ಆ ವ್ಯಾಪ್ತಿಜ್ಞಾನವಾಗುತ್ತದೆಂದೂ ಒಪ್ಪಬೇಕು.) (ವ್ಯತಿರೇಕಿಗೆ ವ್ಯಾಪ್ತಿಯು ಎಲ್ಲಿ? ಯಾವುದರಿಂದ ತಿಳಿಯಲ್ಪಡುತ್ತದೆ? ಎಂದರೆ— ಪಕ್ಷವಲ್ಲಿಯೇ ಸಾಧ್ಯಾಭಾವಕ್ಕೆ ಸಾಧನಾಭಾವವ್ಯಾಪ್ತತ್ವರೂಪವಾದ ಲಿಂಗದಿಂದ ವ್ಯಾಪ್ತಿಯು ತಿಳಿಯಲ್ಪಡುತ್ತದೆ; ಪಕ್ಷಾದಿಗಳನ್ನು ವಿಭಾಗಮಾಡುವುದಕ್ಕಿಂತ ಮೊದಲು ಘಟಾದಿಗಳಲ್ಲಿ ಸಾತ್ಮಕತ್ವಾಭಾವ, ಪ್ರಾಣಾದಿಮತ್ವಾಭಾವಗಳಿಗೆ ವ್ಯಾಪ್ತಿಬಲದಿಂದಲಾಗಲೀ, ಆಪ್ತೋಪದೇಶದಿಂದಲಾಗಲೀ, ಜೀವಚ್ಛರೀರದಲ್ಲಿ ಸಾತ್ಮಕತ್ವ ಪ್ರಾಣಾದಿಮತ್ವಗಳಿಗೆ ತಿಳಿದ ವ್ಯಾಪ್ತಿಯು ಜೀವಚ್ಛರೀರವೆಲ್ಲವೂ ಪಕ್ಷವಾಗಿರುವುದರಿಂದ 'ಯತ್ಪ್ರಾಣಾದಿಮತ್ ತತ್ ಸಾತ್ಮಕಂ ಯಥಾ ಜೀವಚ್ಛರೀರಂ' ಎಂದು ವಿಪ್ರತಿಪನ್ನನಿಗೆ ತೋರಿಸಲಿಕ್ಕೆ ಅಶಕ್ಯವಾಯಿತು. ಆದಕಾರಣ 'ಪ್ರಾಣಾದಿಮತ್ವಂ ಸಾತ್ಮಕತ್ವೇನ ವ್ಯಾಪ್ತಂ ತದಭಾವ ವ್ಯಾಪಕಾಭಾವ ಪ್ರತಿಯೋಗಿತ್ವಾತ್' ಎನ್ನುವ ವ್ಯತಿರೇಕ ವ್ಯಾಪ್ತಿಯಿಂದ ಪ್ರಾಣಾದಿಮತ್ವಕ್ಕೆ ಸಾತ್ಮಕತ್ವದಿಂದ ವ್ಯಾಪ್ತಿಯು ಗೃಹೀತವಾಗುತ್ತದೆ). (ಕೇವಲ ವ್ಯತಿರೇಕಿಸಾಧನಕ್ಕೆ ಸಾಧ್ಯದಿಂದ ವ್ಯಾಪ್ತಿಯನ್ನಾಗಲೀ, ವ್ಯತಿರೇಕದಿಂದ ಅದರ ಜ್ಞಾನವನ್ನಾಗಲೀ ನಾವು ಮಾತ್ರ ಅಂಗೀಕರಿಸುವುದಲ್ಲ. ಮತ್ತೆ) ತೈಶ್ಚ=ಅಪ್ರಸಿದ್ಧ ವಿಶೇಷಣತ್ವಕ್ಕೆ ದೂಷಣತ್ವವನ್ನು ಹೇಳತಕ್ಕ ನೈಯಾಯಿಕರಿಂದಲೂ, ಅವಗಮ್ಯತೇ=ಅಂಗೀಕರಿಸಲ್ಪಡುತ್ತದೆ.

ತಾ || ಸ. ರ. ವಿ.—(1) ಸದ್ವಿಲಕ್ಷಣತ್ವವು ಅಸದ್ವಿಲಕ್ಷಣಕ್ಕೆ ವಿರೋಧಿಯು. ಸದ್ವಿಲಕ್ಷಣದಲ್ಲಿ ಅಸತ್ವವು ನಿಯತವಾಗಿದೆ. ಅಸದ್ವಿಲಕ್ಷಣತ್ವವು ಸದ್ವಿಲಕ್ಷಣಕ್ಕೆ ವಿರೋಧಿಯು. ಅಸದ್ವಿಲಕ್ಷಣದಲ್ಲಿ ಸತ್ವವು ನಿಯತವಾಗಿದೆ. ಹೀಗೆ ಸ್ವವ್ಯಾಹತಿಯು ಬರುವುದರಿಂದ ಅನುಮಾನವು ಅಪ್ರಮಾಣವು.

ನ. ಚ. ವಿ.— 'ಸರ್ವಕಾರ್ಯಂ ಸರ್ವವಿತ್ಕರ್ತೃ ಪೂರ್ವಕಂ ಕಾದಾಚಿತ್ಕತ್ವಾತ್ ವ್ಯತಿರೇಕೇಣಾತ್ಮವತ್' ಎಲ್ಲಾ ಕಾರ್ಯವೂ ಸರ್ವಜ್ಞನಾದ ಕರ್ತನಿಂದ ಹುಟ್ಟಿದ್ದು, ಕೆಲವು ವೇಳೆಯೇ ಇರುವುದರಿಂದ ವ್ಯತಿರೇಕದಿಂದ ಜೀವನಂತೆ, ಎಂದು ನೈಯಾಯಿಕಾದಿಗಳಿಂದಲೂ ಸರ್ವಜ್ಞಕರ್ತೃಕತ್ವವು ಅಪ್ರಸಿದ್ಧವಾದಾಗ್ಯೂ ಅದರಿಂದ ಕಾದಾಚಿತ್ಕತ್ವರೂಪ ಹೇತುವಿಗೆ ವ್ಯಾಪ್ತಿಯು ಅಂಗೀಕರಿಸಲ್ಪಡುತ್ತದೆ || ೨೫ ||

ನ. ಚ. ವಿ.— ಹಾಗಾದರೆ 'ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಎನ್ನುವ ಕಾರ್ಯತ್ವ ಹೇತುವಿನಿಂದ ಸಕರ್ತೃಕತ್ವಮಾತ್ರವು ಸಿದ್ಧವಾಗುತ್ತಿರಲು ಪುನಃ ಪಕ್ಷಧರ್ಮತಾ ಬಲದಿಂದ ಕರ್ತನಿಗೆ ಸರ್ವಜ್ಞತ್ವವನ್ನು ಸಾಧಿಸುತ್ತೇನೆಂದರೆ—

**ನ್ಯಾಯಸುಧಾ**— (1) ಕೇವಲ ವ್ಯತಿರೇಕಿಯಿಂದ ಅಭಾವವನ್ನು ಸಾಧಿಸಬೇಕು. ಭಾವವು ಸಾಧ್ಯವಾದರೆ ವ್ಯತಿರೇಕವ್ಯಾಪ್ತಿಯಲ್ಲಿ ಭಾವರೂಪವಾದ ವಸ್ತುವಿನ ಅಭಾವಕ್ಕೆ ಪ್ರತಿಯೋಗಿಜ್ಞಾನದ ಅಪೇಕ್ಷೆ ಇದ್ದ ಪ್ರಯುಕ್ತ ವಿಶೇಷಣ ಪ್ರಸಿದ್ಧಿಯು ಆವಶ್ಯಕವೇ. ಅಭಾವವು ಸಾಧ್ಯವಾದರೆ ಈ ದೋಷವೇ ಇಲ್ಲ. ಅಭಾವಾಭಾವವು ಭಾವರೂಪವಾಗಿರುವುದರಿಂದ ಪ್ರತಿಯೋಗಿಜ್ಞಾನದ ಅಪೇಕ್ಷೆಯಿಲ್ಲ. ಹೀಗೆ ವ್ಯಾಪ್ತ್ಯಾದಿಗಳನ್ನು ಹೇಳಲಿಕ್ಕೆ ಬಾರದಿರುವ ಸ್ಥಳಗಳಲ್ಲಿ ಅಪ್ರಸಿದ್ಧ ವಿಶೇಷಣತ್ವವು ದೂಷಣವೇ. ಆದ ಕಾರಣ ಕೇವಲ ವ್ಯತಿರೇಕಿಗೆ ಪ್ರಾಮಾಣ್ಯವನ್ನು ಅಂಗೀಕರಿಸಿ, ಅಪ್ರಸಿದ್ಧ ವಿಶೇಷಣತ್ವಕ್ಕೆ ದೂಷಣತ್ವವನ್ನು ನಿರಾಕರಿಸಕೂಡದು ಎಂದಾಶಂಕಿಸಿದರೆ—

**ಮೂ || ಅಪ್ರಸಿದ್ಧಸ್ಯ ಸಾಧ್ಯಸ್ಯ ಸಾಧಕತ್ವಂ ಯದೇಷ್ಯತೇ |**
**ಲಿಂಗಸ್ಯೋಕ್ತೌ ವಿಶೇಷೋಽಯಂ ಕೇನ ಮಾನೇನ ಗಮ್ಯತೇ || ೨೬ ||**

ಅ || (ಕೇವಲ ವ್ಯತಿರೇಕಿಯಲ್ಲಿ ಉಕ್ತಿವಿಶೇಷವನ್ನು ಪ್ರಾಣಾದಿಮತ್ವಾನುಮಾನಕ್ಕೆ ಸಾಮಾನ್ಯ ವ್ಯಾಪ್ತಿಯನ್ನು ತಿಳಿಸಿಕೊಡುವ 'ಯತ್ಕಾರ್ಯವತ್ ತತ್ಕಾರಣವತ್ ಯಥಾ ಅಂಕುರವತೀ ಭೂಮಿಃ ಬೀಜಗರ್ಭಾ' ಇತ್ಯಾದಿಗಳನ್ನುಇಟ್ಟುಕೊಳ್ಳಬೇಕು, ಎನ್ನುವಲ್ಲಿ ನಿಯಾಮಕ ವಿದ್ದರೆ ಅಪ್ರಸಿದ್ಧ ವಿಶೇಷಣತ್ವಕ್ಕೆ ದೂಷಣತ್ವವಿಲ್ಲವೆಂದಾಗಬಹುದಿತ್ತು, ನಿಯಾಮಕವೇ ಇಲ್ಲ. ಹೇಗೆಂದರೆ— ೧ ಈ ಉಕ್ತಿವಿಶೇಷದಿಂದ ಕೇವಲ ವ್ಯತಿರೇಕ್ಯನುಮಾನವು ಅನ್ವಯವ್ಯಾಪ್ತಿಯುಳ್ಳ ತನವನ್ನು ಹೊಂದುತ್ತದೋ, ಇಲ್ಲವೋ ಎನ್ನಬೇಕು. ೧ನೇದ್ದು ಕೂಡಲಾರದು. ವಚನವು ಅರ್ಥವೈಪರೀತ್ಯವನ್ನು ತಂದುಕೊಡಲಾರದು. ೨ನೇ ಕಲ್ಪದಲ್ಲಿ) ಯದಾ = ಯಾವಾಗ, ಲಿಂಗಸ್ಯ = ಹೇತುವಿಗೆ, ಅಪ್ರಸಿದ್ಧಸ್ಯ ಸಾಧ್ಯಸ್ಯ = ಅಪ್ರಸಿದ್ಧವಾದ ಸಾಧ್ಯದ, ಸಾಧಕತ್ವಂ = ಸಾಧಕತ್ವವು, ಇಷ್ಯತೇ=ಅಂಗೀಕರಿಸಲ್ಪಡುತ್ತದೋ, (ಅಂದರೆ ವಚನವಿಶೇಷದಿಂದಲೂ ಲಿಂಗವು ಕೇವಲ ವ್ಯತಿರೇಕಿಸಾಧ್ಯವನ್ನೇ ಸಾಧಿಸುವುದು, ಅನ್ವಯಿತ್ವವನ್ನು ಹೊಂದುವುದಿಲ್ಲ, ಎಂದು ಅಂಗೀಕರಿಸಲ್ಪಡುವುದಾದರೆ—) ಆಗ, ಅಯಂ=ಈದಾವ, ಉಕ್ತೌ=ವಚನದಲ್ಲಿ, ವಿಶೇಷಃ= ವಿಶೇಷವು, ಕೇನ ಮಾನೇನ=ಯಾವ ಪ್ರಮಾಣದಿಂದ, ಗಮ್ಯತೇ=ಕರ್ತವ್ಯವೆಂದು ತಿಳಿಯಲ್ಪಡುತ್ತದೆ. (ಯಾವುದರಿಂದಲೂ ತಿಳಿಯಲ್ಪಡುವುದಿಲ್ಲ. ಆದ ಕಾರಣ ಅಪ್ರಸಿದ್ಧಿವಿಶೇಷಣವುಳ್ಳ ಕೇವಲ ವ್ಯತಿರೇಕಿಯು ಸಾಧಕವಾಗಿದೆ. ಆದುದರಿಂದ ಅಪ್ರಸಿದ್ಧವಿಶೇಷಣತ್ವಕ್ಕೆ ದೋಷತ್ವವಿಲ್ಲ.) || ೨೬ ||

**ನ್ಯಾಯಸುಧಾ**— (1) ಹಿಂದೆ ಹೇಳಿದ ಉಕ್ತಿವಿಶೇಷವು ಕರ್ತವ್ಯವೆನ್ನುವ ವಿಷಯದಲ್ಲಿ ನಿಯಾಮಕವಿದ್ದೇ ಇದೆ. ಹೇಗೆಂದರೆ— ಯದ್ಯಪಿ ಉಕ್ತಿವಿಶೇಷವು ವ್ಯತಿರೇಕವ್ಯಾಪ್ತಿಯುಳ್ಳದ್ದನ್ನು ಅನ್ವಯವ್ಯಾಪ್ತಿಯುಳ್ಳದ್ದನ್ನಾಗಿ ಮಾಡುವುದಿಲ್ಲ. ಆದಾಗ್ಯೂ ಹೇತುವಿಗೆ ಸಾಧ್ಯದಿಂದ ವ್ಯಾಪ್ತಿಯು ಆವಶ್ಯಕವು. ಕೇವಲ ವ್ಯತಿರೇಕಿಯಲ್ಲಿ ಆ ವ್ಯಾಪ್ತಿಯನ್ನು ಸಾಕ್ಷಾತ್ತಾಗಿ ತೋರಿಸಲಿಕ್ಕೆ ಶಕ್ಯವಲ್ಲ. ಅನ್ವಯವ್ಯಾಪ್ತಿಯನ್ನು ತೋರಿಸತಕ್ಕ ಸ್ಥಳವು ವಿಪ್ರತಿಪತ್ತಿಯಿಂದ ತೋರಿಸಲಿಕ್ಕೆ ಅಶಕ್ಯವಾಗಿದೆ. ಆದಕಾರಣ ಸಾಧ್ಯಾಭಾವಕ್ಕೆ ಸಾಧನಾಭಾವದಿಂದ ಸಾಧ್ಯಸಾಧನಗಳು ಇಲ್ಲದಿರುವ ಸ್ಥಳದಲ್ಲಿ ವ್ಯಾಪ್ತಿಯನ್ನು ತೋರಿಸಿ ಉಪಪಾದಿಸಬೇಕು. (2) ವ್ಯತಿರೇಕವ್ಯಾಪ್ತಿಯೇ ಸಾಧ್ಯಸಿದ್ಧಿಗೆ ಅಂಗವೆಂದು ಹೇಳಿದರೂ ವ್ಯತಿರೇಕವ್ಯಾಪ್ತಿಜ್ಞಾನವು ಆವಶ್ಯಕವು. ವ್ಯತಿರೇಕವು ಪ್ರತಿಯೋಗಿಜ್ಞಾನಾಧೀನಜ್ಞಾನವುಳ್ಳದ್ದು. ಲಿಂಗಗಳು ಪ್ರತಿಯೋಗಿಗಳು. ಅದರಲ್ಲಿ ಲಿಂಗವು ಪಕ್ಷದಲ್ಲಿ ಪ್ರತೀತವೇ ಆಗಿದೆ. ಸಾಧ್ಯವು ಪಕ್ಷದಲ್ಲಿಯೂ ಪ್ರತೀತವಾಗಲಿಲ್ಲ. ಬೇರೆ

ಕಡೆಯಲ್ಲಿಯೂ ಪ್ರತೀತವಾಗಲಿಲ್ಲ. ಆದ ಕಾರಣ ಅಭಾವಗಳಿಗೂ ವ್ಯಾಪ್ತಿಯನ್ನು ಹೇಗೆ ಗ್ರಹಿಸುವುದು? ಈ ಹಿಂದೆ ಹೇಳಿದ ಉಕ್ತಿವಿಶೇಷಗಳಿಂದ ಕಥಂಚಿತ್ ಪ್ರತಿಯೋಗಿಯಾದ ಸಾಧ್ಯವು ಜ್ಞಾತವಾಗುತ್ತಿರಲು ವ್ಯಾಪ್ತಿಯನ್ನು ಸುಖದಿಂದ ತಿಳಿಯಬಹುದು. ಪ್ರತಿಜ್ಞಾವಾಕ್ಯವು ಅಜ್ಞಾತಾರ್ಥಕಪದವುಳ್ಳದ್ದು ಆಗುವುದಿಲ್ಲ. ಎಂದರೆ—

**ಮೂ ॥ ಸಾಧನಂ ಪರಮಾಣ್ವಾದೇರ್ಯದ್ಯ (ದಾ) ಸಿದ್ಧಸ್ಯ ಚೇಷ್ಯತೇ ॥ ೨೭ ॥**
**ಯಥಾನುಭವಮೇವೈತನ್ನಾಂಗೀಕಾರ್ಯಂ ಕುತಸ್ತದಾ ।**
**ಯತ್ರ ನಾತಿಪ್ರಸಂಗೋಽಸ್ತಿ ಮಾನಂ ನ ಚ ವಿಪರ್ಯಯೇ ।**
**ಕ್ಲಿಷ್ಟಕಲ್ಪನಯೈವಾತ್ರ ಸಾಧ್ಯಮಿತ್ಯತಿದುರ್ವಚಃ ॥ ೨೮ ॥**

ಅ ॥ ಯದಾ = ಯಾವಾಗ, ಅಸಿದ್ಧಸ್ಯ ಚ = ಅತ್ಯಂತಾಪ್ರಸಿದ್ಧವಾದುದಾಗ್ಯೂ, ಪರಮಾಣ್ವಾದೇಃ = ಪರಮಾಣುಮೊದಲಾದುದಕ್ಕೆ, ಯಥಾನುಭವಂ=ಅನುಭವಮಾರ್ಗವನ್ನು ಅತಿಕ್ರಮಿಸದೆ, ಸಾಧನಂ=ಸಾಧನವು, ಇಷ್ಯತೇ=ಅಂಗೀಕರಿಸಲ್ಪಡುತ್ತದೋ, ತದಾ=ಆಗ, ಏತತ್=ಈ ವ್ಯತಿರೇಕಿಸಾಧ್ಯಸಾಧನವೂ ಕೂಡ, ಯಥಾನುಭವಮೇವ=ಅನುಭವಾನುಸಾರವಾಗಿಯೇ, ಕುತಃ=ಯಾವ ಕಾರಣದ್ದೆಶೆಯಿಂದ, ನಾಂಗೀಕಾರ್ಯಂ=ಅಂಗೀಕರಿಸಕೂಡದು. (ಉಪಸಂಹಾರ ಮಾಡುತ್ತಾರೆ). (ನ. ಚ. ವಿ.—) ಯತ್ರ = ಯಾವ ಅಸಿದ್ಧಸಾಧನದಲ್ಲಿ, ಅತಿಪ್ರಸಂಗಃ = ಅತಿಪ್ರಸಂಗವು, ನಾಸ್ತಿ = ಇಲ್ಲವೋ, ವಿಪರ್ಯಯೇ ಮಾನಂ ಚ ನಾಸ್ತಿ= ವಿಪರೀತಾರ್ಥಕವಾದ ಪ್ರಮಾಣವೂ ಇಲ್ಲವೋ, ಅಥವಾ ಯತ್ರ=ಯಾವ ಕೇವಲ ವ್ಯತಿರೇಕಿ ವಿಷಯದಲ್ಲಿ, ಮಾನಂ ನ ಚ=ಹಿಂದೆ ಹೇಳಿದ ಪ್ರಕಾರ ಅನ್ವಯವ್ಯಾಪ್ತ್ಯಾದಿಗಳನ್ನು ಹೇಳಿಕೊಂಡು ಸಾಧಿಸಬೇಕೆಂದು ನಿಯಾಮಕವಾದ ಪ್ರಮಾಣವಿಲ್ಲವೋ, ವಿಪರ್ಯಯೇ = ಹಾಗೆ ಸಾಧಿಸದೆ ಇದ್ದರೆ, ಅತಿಪ್ರಸಂಗಶ್ಚ=ಅತಿಪ್ರಸಂಗವೂ ಕೂಡ, ನಾಸ್ತಿ=ಇಲ್ಲವೋ, ಅತ್ರ=ಈ ವಿಷಯದಲ್ಲಿ, ಕ್ಲಿಷ್ಟಕಲ್ಪನಯೈವ = ಅಣುಪರಿಮಾಣ ತಾರತಮ್ಯವು ಎಲ್ಲಿಯೋ ಒಂದು ಕಡೆ ವಿಶ್ರಾಂತವಾಗಿದೆ, ಇತ್ಯಾದಿ ರೂಪದಿಂದ ಕ್ಲಿಷ್ಟವಾದುದನ್ನು ಕಲ್ಪಿಸಿಯೇ, ಸಾಧ್ಯಂ = ಸಾಧ್ಯವನ್ನು ಸಾಧಿಸಬೇಕು. ಇತಿ=ಹೀಗೆ, ಅತಿದುರ್ವಚಃ=ಅತಿದುಷ್ಟವಾದ ವಚನವು.

ತಾ ॥ ಸ. ರ. ವಿ.— (1) ಸದ್ವಿಲಕ್ಷಣತ್ವವು ಅಸದ್ವಿಲಕ್ಷಣತ್ವಕ್ಕೆ ವಿರೋಧಿಯು. ಅಸದ್ವಿಲಕ್ಷಣತ್ವವು ಸದ್ವಿಲಕ್ಷಣತ್ವಕ್ಕೆ ವಿರೋಧಿಯು. ಹೀಗೆ ಸದಸದ್ವಿಲಕ್ಷಣತ್ವವು ಸ್ವವ್ಯಾಹತವಾದ ಪ್ರಯುಕ್ತವೇ ಅಪ್ರಾಮಾಣಿಕವು, ಅಪ್ರಸಿದ್ಧವಾದುದರಿಂದ ಅಲ್ಲ. ಸ್ವವ್ಯಾಹತಿಯಿಲ್ಲದಿರುವ ಸಾಧ್ಯವು ಅಪ್ರಸಿದ್ಧವಾದುದಾಗ್ಯೂ ಅದನ್ನು ಹೇತುವು ವ್ಯಾಪ್ತಿಯಿಂದ ಸಾಧಿಸಿ ಕೊಡುತ್ತದೆ ಎಂದು ಹೇಳಿದರೆ ಅತಿಪ್ರಸಂಗವಿಲ್ಲ. ಅಪ್ರಸಿದ್ಧವಾದ ಸಾಧ್ಯದಿಂದ ಹೇತುವಿಗೆ ವ್ಯಾಪ್ತಿಯು ಕೂಡುವುದಿಲ್ಲವೆಂದು ಹೇಳಕೂಡದು. ವ್ಯತಿರೇಕವ್ಯಾಪ್ತಿಯು ಕೂಡಬಹುದು. 'ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ವಾತ್ ನ ಯತ್ ಏವಂ ನ ತತ್ ಏವಂ ಯಥಾ ಘಟಃ' ಎನ್ನುವ ಅನುಮಾನದಲ್ಲಿ ವ್ಯತಿರೇಕವ್ಯಾಪ್ತಿಯಿಂದ ಹೇತುವಿಗೆ ಸಾಧಕತ್ವವು ದೃಷ್ಟವಾಗಿದೆ. ಆದ ಕಾರಣ ಅತಿಪ್ರಸಂಗವಿಲ್ಲದಿರುವುದರಿಂದ, ವಿಪರೀತಪ್ರಮಾಣವಿಲ್ಲದಿರುವುದರಿಂದ, ರೀತ್ಯಂತರದಿಂದ ಸಾಧ್ಯಸಿದ್ಧಿಯನ್ನು ಕಲ್ಪಿಸುವುದು ವ್ಯರ್ಥವಾಗಿರುವುದರಿಂದ ಪರಮಾಣುವಿನಂತೆಯೇ ಅಪ್ರಸಿದ್ಧವಾದಾಗ್ಯೂ ಸಾಧ್ಯವನ್ನು ಲಿಂಗವು ಸಾಧಿಸುತ್ತದೆ.

**ನ್ಯಾಯಸುಧಾ**— (1) ಕಾರ್ಯಗಳಿಗೆ ಪರಮಾಣುಗಳು ಕಾರಣಗಳು ಎಂದಂಗೀಕರಿಸುವ ವೈಶೇಷಿಕಾದಿಗಳು, ಪರಮಾಣುಗಳು ಇವೆ ಎಂದು ಸಾಧಿಸುತ್ತಾರೆ. ಹಾಗೆಯೇ ಪ್ರಧಾನವೇ ಉಪಾದಾನ ಕಾರಣವೆಂದು ಸಾಧಿಸುವ ಸಾಂಖ್ಯನು ಪ್ರಧಾನವಿದೆ ಎಂದು ಸಾಧಿಸುತ್ತಾನೆ. ಹೀಗೆಯೇ ಇತರ ಸಮವಾಯಾದಿಗಳನ್ನು ಆಯಾಯ ವಾದಿಗಳು ಸಾಧಿಸುತ್ತಾರೆ. ಅದರಲ್ಲಿ-- ಯಾರು ಪರಮಾಣ್ವಾದಿಗಳನ್ನು ಅಂಗೀಕರಿಸುತ್ತಾರೋ, ಅವರನ್ನು ಕುರಿತು ಪರಮಾಣುಗಳಿವೆ ಎಂದು ಸಾಧಿಸುವುದೋ, ಅಥವಾ ಪರಮಾಣುಗಳು ಇಲ್ಲವೆಂದು ಅಂಗೀಕರಿಸುವವರನ್ನು ಕುರಿತು ಸಾಧಿಸುವುದೋ? ೧ನೇದ್ದು ಸಿದ್ಧಸಾಧನವು ಬರುವುದರಿಂದ ಕೂಡಲಾರದು. ೨ನೇ ಕಲ್ಪದಲ್ಲಿ ಬುದ್ಧಿಯಲ್ಲಿಯೇ ವಿಷಯವಾಗದಿರುವ ಪರಮಾಣ್ವಾದಿಗಳನ್ನು ಸಾಧಿಸಲಿಕ್ಕೆ ವಾದಿಯ ಪ್ರಯತ್ನವು ಹೇಗೆ ಕೂಡುತ್ತದೆ? ಪ್ರತಿವಾದಿಯು ತಿಳಿಯದಿರುವುದರಿಂದ ಪರಮಾಣ್ವಭಾವವನ್ನು ವಾದಿಯು ಹೇಗೆ ತಿಳಿಯುವನು? (2) ಕಣಾದಾದಿಗಳ ಉಪದೇಶದಿಂದಲಾಗಲೀ, ಸಾಮಾನ್ಯತೋ ದೃಷ್ಟನ್ವಾರ್ಥಾನುಮಾನದಿಂದಲಾಗಲೀ ತಾನು ತಿಳಿದ ಪರಮಾಣ್ವಾದಿಗಳನ್ನು ವಾದಿಗೆ ಸಾಧಿಸಲಿಕ್ಕೆ ಶಕ್ಯವೇ ಆಗುವುದು. ವಾದಿವಾಕ್ಯದಿಂದ ಪ್ರತಿಯೋಗಿಯಾದ ಪರಮಾಣ್ವಾದಿಗಳ ಜ್ಞಾನ ಬಂದರೆ ಪರಮಾಣ್ವಾದಿಗಳ ಅಭಾವಜ್ಞಾನವು ಪ್ರತಿವಾದಿಗೆ ಯುಕ್ತವೇ ಆಗಿದೆ. ಪ್ರಮಾಣದಿಂದಲೇ ಪ್ರತಿಯೋಗಿಯನ್ನು ತಿಳಿಯಬೇಕೆನ್ನುವ ನಿಯಮವಿಲ್ಲ. ಶಶವಿಷಾಣಾದಿಗಳು ಇಲ್ಲವೆನ್ನುವ ಜ್ಞಾನವೂ ಬಾರದೆ ಹೋಗಬೇಕಾಗುವುದು. (3) ಹೀಗೆ ಪರಮಾಣ್ವಾದಿಗಳು ಅತ್ಯಂತವಾಗಿ ಅಪ್ರಸಿದ್ಧಗಳಾದಾಗ್ಯೂ ಅನುಭವಾನುಸಾರವಾಗಿ ಅವುಗಳನ್ನು ಸಾಧಿಸುವುದಾದರೆ ಆಗ ವ್ಯತಿರೇಕಿಸಾಧ್ಯಸಾಧನವನ್ನು ಅನುಭವಾನುಸಾರವಾಗಿಯೇ ಏಕೆ ಅಂಗೀಕರಿಸಕೂಡದು? ಏಕೆಂದರೆ— ಪತ್ಯಕ್ಷದಿಂದಲಾಗಲೀ, ಉಪದೇಶದಿಂದಲಾಗಲೀ ಸಾತ್ಮಕತ್ವ ಪ್ರಾಣಾದಿಮತ್ವಾದಿರೂಪಗಳಾದ ಅಸಾಧಾರಣ ಧರ್ಮಗಳನ್ನು ಒಂದು ಕಡೆ ಕಂಡವನಿಗೆ ಅದರಿಂದ ಬೇರೆ ಎಲ್ಲಾ ಕಡೆಗಳಲ್ಲಿಯೂ ಅಸಾಧಾರಣ ಧರ್ಮಗಳ ಅಭಾವವು ತೋರುವುದರಿಂದ ವಾದಿಗೆ ವ್ಯತಿರೇಕವ್ಯಾಪ್ತಿಜ್ಞಾನವು ಸುಖದಿಂದಲೇ ಆಗುವುದು. ಪ್ರತಿವಾದಿಗೂ ಕೂಡ ವಾದಿವಾಕ್ಯದಿಂದ ಪ್ರತಿಯೋಗಿಜ್ಞಾನವು ಬಂದರೆ ಅದರ ಅಭಾವಜ್ಞಾನವು ಕೂಡುವುದರಿಂದ, ವ್ಯತಿರೇಕವ್ಯಾಪ್ತಿಜ್ಞಾನವು ಬಂದೇಬರುತ್ತದೆ. ಅಂತೂ ಹಿಂದೆಹೇಳಿದ ಪ್ರಕಾರ ಪ್ರಸಿದ್ಧವಾದ ಸಾಧ್ಯಸಾಧನವು ಕೂಡುವಾಗ ಈ ಕ್ಲಿಷ್ಟಕಲ್ಪನೆಗಳಿಂದ ಏನು ಪ್ರಯೋಜನವು? ಏವಂಚ ಪ್ರತಿಜ್ಞಾವಾಕ್ಯವು ತಿಳಿಯದೆ ಇದ್ದ ಅರ್ಥವುಳ್ಳ ಪದವುಳ್ಳದ್ದಾಗಲಿಲ್ಲ. ॥ ೨೭ ॥ ೨೮ ॥

**ಸ. ರ. ವಿ.**— ಹಾಗಾದರೆ ಸಪಕ್ಷವಿಲ್ಲದಿರುವುದರಿಂದ ಸಪಕ್ಷೇ ಸತ್ವವೆನ್ನುವ ಅವಯವವು ಕಡಿಮೆಯಾದುದರಿಂದ ನ್ಯೂನಾವಯವವುಳ್ಳ ಅನುಮಾನವು ಅಪ್ರಸಿದ್ಧವಾದ ಸಾಧ್ಯವನ್ನು ಹೇಗೆ ಸಾಧಿಸುತ್ತದೆಂದರೆ—

**ನ್ಯಾಯಸುಧಾ**— ಕೇವಲ ವ್ಯತಿರೇಕಿಯು ಅನುಮಾನವಾಗಿದ್ದರೆ ಇದಾಗಬಹುದಿತ್ತು. ಹೀಗೆ ಇಲ್ಲ. ೧ ಹೇತುವಿಗೆ ಪಕ್ಷದಲ್ಲಿರುವಿಕೆ, ೨ ಸಪಕ್ಷದಲ್ಲಿರುವಿಕೆ, ೩ ವಿಪಕ್ಷದಲ್ಲಿಲ್ಲದಿರುವಿಕೆ, ೪ ಅಬಾಧಿತವಾದ ಸಾಧ್ಯವಿರುವಿಕೆ, ೫ ಸತ್ಪ್ರತಿಪಕ್ಷವಾಗದಿರುವಿಕೆ, (ಸಾಧ್ಯಾಭಾವವನ್ನು ಸಾಧಿಸಿಕೊಡುವ ಹೇತ್ವಂತರವಿಲ್ಲದಿರುವಿಕೆ) ಹೀಗೆ ಐದು ರೂಪಗಳಿಂದ ಯುಕ್ತವಾದುದು ಅನುಮಾನವು. ಹೀಗೆಯೇ ಕೇವಲಾನ್ವಯಿಗೂ ವಿಪಕ್ಷವಿಲ್ಲದಿರುವುದರಿಂದ ವಿಪಕ್ಷದಲ್ಲಿಲ್ಲದಿರುವಿಕೆ ಎನ್ನುವ ರೂಪವಿಲ್ಲದಿರುವುದರಿಂದ ಅದು ಅನುಮಾನವಾಗದೆ ಹೋಗಬೇಕಾದೀತು ಎಂದು ಹೇಳಕೂಡದು. ಅನ್ವಯವ್ಯಾಪ್ತಿ, ವ್ಯತಿರೇಕವ್ಯಾಪ್ತಿಯುಳ್ಳದ್ದೇ ಅನುಮಾನವಾಗಿರುವುದರಿಂದ ಕೇವಲಾನ್ವಯಿಗೆ

ಅನುಮಾನತ್ವವು ಕೂಡದೆಹೋಗಬೇಕಾದೀತು ಎನ್ನುವುದು ಅನಿಷ್ಟವಲ್ಲ, ಇಷ್ಟವೇ ಆಗಿರುತ್ತದೆ. ಕೇವಲ ವ್ಯತಿರೇಕಿಗೆ ಸಪಕ್ಷವಿಲ್ಲದಿರುವುದರಿಂದ ಸಪಕ್ಷದಲ್ಲಿರುವಿಕೆ ಎನ್ನುವ ೨ನೇ ರೂಪವಿರುವುದಿಲ್ಲ. ಕೇವಲ ವ್ಯತಿರೇಕಿಯಾದುದರಿಂದ ಐದು ರೂಪಗಳ ಮಧ್ಯದಲ್ಲಿ ಒಂದು ರೂಪವಿಲ್ಲದಿರುವುದರಿಂದ ಅನುಮಾನರೂಪಪ್ರಮಾಣವಲ್ಲ ಎನ್ನುವ ಪಕ್ಷವನ್ನು ತಿರಸ್ಕರಿಸುತ್ತಾರೆ—

**ಮೂ ॥ ಪರಿಶೇಷೋ ಮಿಥಸ್ಸಿದ್ಧಿಶ್ಚಕ್ರಕಸ್ವಾಶ್ರಯಾದಯಃ ॥ ೨೯ ॥**
**ಅಸಿದ್ಧಸಾಧಕತ್ವೇನ ಪಂಚಾವಯವತಾಂ ವಿನಾ ।**
**ಅಂಗೀಕಾರ್ಯಾಃ ಸಮಸ್ತೈಸ್ತನ್ನಿಯಮಃ ಕಿಂನಿಬಂಧನಃ ॥ ೩೦ ॥**

ಅ ॥ ಪರಿಶೇಷಃ= ಪ್ರಸಕ್ತಗಳಾದ ಎರಡರ ಮಧ್ಯದಲ್ಲಿ ಒಂದನ್ನು ಪ್ರತಿಷೇಧ ಮಾಡಿದರೆ ಅವಿಶಿಷ್ಟವಾದ ವಸ್ತು ವಿಷಯಕ ಬುದ್ಧಿಯು, ಮಿಥಸ್ಸಿದ್ಧಿಃ=ಎರಡು ವಸ್ತುಗಳಿಗೆ ಪರಸ್ಪರ ಅಪೇಕ್ಷೆಯಿಂದ ಉತ್ಪತ್ತಿಯಾಗಲೀ ಜ್ಞಪ್ತಿಯಾಗಲೀ ಅಂಗೀಕರಿಸುವಿಕೆಯು, ಚಕ್ರಕ ಸ್ವಾಶ್ರಯಾದಯಃ, ಚಕ್ರಕ=ಅನೇಕ ವಸ್ತುಗಳಿಗೆ ಚಕ್ರದಂತೆ ಪರಸ್ಪರಾಪೇಕ್ಷೆಯಿಂದ ಉತ್ಪತ್ತಿಯು ಮತ್ತು ಜ್ಞಪ್ತಿಯು, ಸ್ವಾಶ್ರಯ=ತನ್ನನ್ನು ಅಪೇಕ್ಷಿಸಿಯೇ ತನಗೆ ಉತ್ಪತ್ತಿಯು, ಜ್ಞಪ್ತಿಯು (ಅಜ್ಞಾನಕ್ಕೆ ಅಜ್ಞಾನಕಲ್ಪಿತತ್ವವಿದ್ದರೆ ಆತ್ಮಾಶ್ರಯತ್ವವೂ, ತರ್ಕದಿಂದ ಅಜ್ಞಾನನಿರಾಕರಣವೂ) ಇವುಗಳೇ, ಆದಯಃ=ಮೊದಲಾಗಿವುಳ್ಳ; ಅಪ್ರಾಮಾಣಿಕ ಅನಂತ ಸಜಾತೀಯ ಪದಾರ್ಥಕಲ್ಪನಾ ವಿಶ್ರಾಂತ್ಯಭಾವರೂಪವಾದ ಅನವಸ್ಥೆ ಮೊದಲಾದವುಗಳು, (ಅವಸ್ಥಿತಿಯಿಲ್ಲದಿರುವ, ಅಸಿದ್ಧವಾದ, ಉತ್ಪಾದಕ ಜ್ಞಾಪಕ ಮೊದಲಾದವುಗಳ ಪರಂಪರಾಪೇಕ್ಷಾರೂಪವಾದ ಅನವಸ್ಥೆ ಮೊದಲಾದವುಗಳು) ಅಸಿದ್ಧಸಾಧಕತ್ವೇನ=ಅಸಿದ್ಧವಾದ ಅರ್ಥವನ್ನು ಸಾಧಿಸಿಕೊಡುವುದರಿಂದ, ಪಂಚಾವಯವತಾಂ=ಪಂಚರೂಪಗಳಿಂದ ಕೂಡಿರುವಿಕೆಯನ್ನು, ವಿನಾ= ಹೊರತು, ಸಮಸ್ತೈಃ=ಎಲ್ಲಾ ವಾದಿಗಳಿಂದಲೂ, ಅಂಗೀಕಾರ್ಯಾಃ=ಅನುಮಾನಗಳೆಂದು ಅಂಗೀಕರಿಸಲ್ಪಡಬೇಕು. (ದೂಷಣಾಂತರವನ್ನು ಹೇಳುತ್ತಾರೆ.)ತನ್ನಿಯಮಃ=ಅನುಮಾನದಲ್ಲಿ ಪಕ್ಷಧರ್ಮತ್ವಮೊದಲಾದ ಹಿಂದೆ ಹೇಳಿದ ಐದು ರೂಪಗಳು ಆವಶ್ಯಕಗಳು ಎನ್ನುವ ನಿಯಮವು, ಕಿಂನಿಬಂಧನಃ=ಯಾವ ನಿಯಾಮಕವುಳ್ಳದ್ದು? ಅಂದರೆ ಈ ನಿಯಮಕ್ಕೆ ಕಾರಣವೇ ಇಲ್ಲದಿರುವುದರಿಂದ ಪಕ್ಷಧರ್ಮತ್ವ ಮೊದಲಾದ ಐದು ರೂಪಗಳು ಇಲ್ಲದಿದ್ದುದಕ್ಕೂ ಅನುಮಾನತ್ವವಿದ್ದರೆ ಬಾಧಕವಿಲ್ಲದಿರುವುದರಿಂದಲೂ ಈ ದೋಷವು ಅಯುಕ್ತವು.

**ತಾ ॥ ಸ. ರ. ವಿ.—** (1) ಭೋಕ್ತೃತ್ವಕ್ಕೆ ಅಚೇತನಧರ್ಮತ್ವವನ್ನು ನಿಷೇಧ ಮಾಡಿದರೆ ಪರಿಶೇಷರೂಪವಾದ ಅನುಮಾನದ್ದೆಶೆಯಿಂದ ಚೇತನಧರ್ಮತ್ವವು ಬೇರೆಕಡೆ ಅಪ್ರಸಿದ್ಧವಾದುದು ಸಿದ್ಧಿಸುತ್ತದೆ. (2) ಅಜ್ಞಾನಕ್ಕೆ ಭ್ರಾಂತಿಯು ಕಾರಣವಾದರೆ, ಭ್ರಾಂತಿಗೆ ಅಜ್ಞಾನವು ಕಾರಣವಾಗಿರುವುದರಿಂದ ಅಜ್ಞಾನ ಭ್ರಮಗಳಿಗೆ ಅನ್ಯೋನ್ಯಾಶ್ರಯತ್ವರೂಪ ನಿರಾಕರಣತರ್ಕದಿಂದ ಅವುಗಳಿಗೆ ಅಸಿದ್ಧಿಯು ಬೇರೆಕಡೆ ಅಪ್ರಸಿದ್ಧವಾದುದು ಸಿದ್ಧಿಸುತ್ತದೆ. (3) ಹೀಗೆಯೇ ನಿರಾಕರಣತರ್ಕರೂಪಗಳಾದ ಚಕ್ರಕಾದಿಗಳಿಗೆ ಸಾಧ್ಯವು ಅಪ್ರಸಿದ್ಧವಾದುದರಿಂದ ಅನುಮಾನಕ್ಕೆ ಸಾಧರ್ಮ್ಯದೃಷ್ಟಾಂತಾದ್ಯವಯವನಿಯಮವು ಸಿದ್ಧಿಸುವುದಿಲ್ಲ. ಅಂತೂ ಪರಿಶೇಷಾದಿಗಳಿಗೆ ಐದು ರೂಪಗಳು ಇಲ್ಲದಿದ್ದರೂ ಅದರಂತೆ ಅನುಮಾನತ್ವವು ಅಂಗೀಕೃತವಾಗಿರುವುದರಿಂದ ವ್ಯತಿರೇಕಿ ಅನುಮಾನಕ್ಕೆ ಐದು ರೂಪಗಳು ಇಲ್ಲದೆಯಿದ್ದರೂ ಅನುಮಾನತ್ವವು ಕೂಡಬಹುದು. ತಥಾಚ ಆಶ್ರಯಾಸಿದ್ಧ್ಯಾದಿಗಳು ಹೇತುದೂಷಣವಲ್ಲವೆಂದು ಸಿದ್ಧವಾಯಿತು- ॥ ೨೯ ॥ ೩೦ ॥

**ಸ. ರ. ವಿ.**— ಪ್ರತಿವಾದಿಗಳಿಗೆ ಸಂಪ್ರತಿಪನ್ನವಾದ ಅರ್ಥದ ಪ್ರತಿಜ್ಞೆಯು ಪರಿಹಾರ ದೂಷಣವೆಂದು ಯಾವುದು ಹೇಳಲ್ಪಟ್ಟದೋ ಅದೂ ಕೂಡ ವಾದಕಥೆಯಲ್ಲಿ ಸಂದಿಗ್ಧವಾಗದಿರುವ ಅರ್ಥವಿಷಯಕ ಪ್ರಶ್ನದಂತೆ ಕಥಾಸಮಾಪ್ತಿಗೆ ಕಾರಣವಲ್ಲವೆನ್ನುತ್ತಾರೆ.

**ನ್ಯಾಯಸುಧಾ**— (1) ಹೀಗೆ ಆಶ್ರಯಾಸಿದ್ಧ್ಯಾದಿಗಳು ದೂಷಣವಲ್ಲವೆನ್ನುವುದನ್ನುಪ ಪಾದಿಸಿ ಉತ್ತರವಾಕ್ಯದಲ್ಲಿಯೂ ಸಿದ್ಧತ್ವವು ದೂಷಣವು ಎಂದು ಯಾವುದು ಹೇಳಲ್ಪಟ್ಟದೋ, ಅದು ಅಯುಕ್ತವು. ವಾದದಲ್ಲಿ ನಿಗ್ರಹಸ್ಥಾನವಿಲ್ಲವೆಂದು ಹೇಳಲ್ಪಟ್ಟದೆ ಎನ್ನುವ ಆಶಂಕೆ ಯನ್ನು ಪರಿಹರಿಸುತ್ತಾರೆ—

**ಮೂ || ಸಿದ್ಧಸಾಧನತಾಯಾಂ ಚ ನ ಕಥಾವಸತಿರ್ಭವೇತ್ ।**
**ವ್ಯಭಿಚಾರೋ ಹೇತ್ವಸಿದ್ಧಿರೇಕಪಕ್ಷೇಽಪಿ ದೂಷಣಂ || ೩೧ ||**

**ಅ ||** (ಹೇಗೆ ಸಿದ್ಧಪ್ರಶ್ನಾದಿಗಳನ್ನು ಮಾಡಿದರೂ ವಾದಕಥೆಗೆ ಅವಸಾನವಾಗುವುದಿಲ್ಲವೋ ಮತ್ತೆ ತತ್ವನಿರ್ಣಯಕ್ಕೆ ವಿರೋಧಿಯಾಗಿರುವುದರಿಂದ ಅದನ್ನು ಉದ್ಭಾವಿಸಿ ಬಿಡಿಸಬೇಕೋ, ಹೀಗೆಯೇ) ಸಿದ್ಧಸಾಧನತಾಯಾಂ ಚ=ಸಿದ್ಧಾರ್ಥವನ್ನು ಸಾಧಿಸಿದರೂ, ಕಥಾವಸತಿಃ=ಕಥಾ ಸಮಾಪ್ತಿಯು, ನ ಭವೇತ್=ಆಗಲಾರದು. ('ತದನ್ಯಸ್ಯ ಸಿದ್ಧತ್ವೈವ ಹಿ ಸಾಧಿಕಾ ' ಎನ್ನುವು ದರಿಂದ ಹೇತುವಿಗೆ ವ್ಯಾಪ್ತ್ಯಸಿದ್ಧಿಯೂ, ಸ್ವರೂಪಾಸಿದ್ಧಿಯೂ ದೂಷಣವೆಂದು ಸೂಚಿತ ವಾಯಿತು. ಅದರಲ್ಲಿ ಕೆಲವರು ಹೇಳುತ್ತಾರೆ. ೧ ವಾದಿಪ್ರತಿವಾದಿಗಳ ಮಧ್ಯದಲ್ಲಿ ಒಬ್ಬರ ಮತದಿಂದ ವ್ಯಾಪ್ತ್ಯಭಾವಾದಿಗಳು, ೨ ಇಬ್ಬರ ಮತದಿಂದಲೂ ವ್ಯಾಪ್ತ್ಯಭಾವಾದಿಗಳು, ಎಂದು ವ್ಯಾಪ್ತ್ಯಭಾವಾದಿಗಳು ಎರಡು ಪ್ರಕಾರವೆನ್ನುತ್ತಾರೆ. ಇನ್ನು ಕೆಲವರು, ಒಂದು ಹೇತುವಿಗೆ ವ್ಯಾಪ್ಯತ್ವ ಅವ್ಯಾಪ್ಯರೂಪ ವಿರುದ್ಧಸ್ವಭಾವತ್ವವು ಕೂಡದಿರುವುದರಿಂದ ಅನ್ಯತರಾವ್ಯಾಪ್ತ್ಯಾದಿ ಗಳೆನ್ನುವುದು ಇಲ್ಲವೇ ಇಲ್ಲವೆನ್ನುತ್ತಾರೆ. ಅದರಲ್ಲಿ ತತ್ವವು ಯಾವುದೆಂದು ಜಿಜ್ಞಾಸಾ ಬಂದರೆ ಅದನ್ನು ಹೇಳುತ್ತಾರೆ). ವ್ಯಭಿಚಾರಃ = ಅವ್ಯಾಪ್ತಿಮಾತ್ರವು, ಹೇತ್ವಸಿದ್ಧಿಃ=ಹೇತು ಸಿದ್ಧಿಸದೆ ಇರುವುದೂ ಕೂಡ, ಏಕಪಕ್ಷೇಽಪಿ=ಕೇವಲ ಉಭಯಪಕ್ಷದಲ್ಲಿ ಅಲ್ಲ. ಮತ್ತೆ ವಾದಿ ಪ್ರತಿ ವಾದಿಗಳಲ್ಲಿ ಒಂದು ಪಕ್ಷದಲ್ಲಿಯೂ, ದೂಷಣಂ=ಹೇತುದೂಷಣವೇ.

**ತಾ ||** **ಸ. ರ. ವಿ.**— (1) ಶಬ್ದವು ನಿತ್ಯವೋ, ಅನಿತ್ಯವೋ ಎಂದು ವಿವಾದವಿರುವಾಗ ವಾದಿಯು ಪ್ರಮಾದದಿಂದ 'ಶಬ್ದಃ ಪ್ರಮೇಯಃ' ಎಂದು ಸಂಪ್ರತಿಪನ್ನವಾದ ಅರ್ಥದ ಪ್ರತಿಜ್ಞೆ ಯನ್ನು ಮಾಡಿದರೆ ತತ್ವವನ್ನು ನಿಶ್ಚಯಿಸತಕ್ಕ ಕಥೆಯು ಸಮಾಪ್ತವಾಗುವುದಿಲ್ಲ. ಹೇಗೆ ಸಂಪ್ರತಿಪನ್ನವಾದ ಅರ್ಥವಿರುವಿಕೆಯು ಪ್ರತಿಜ್ಞೆಗೆ ದೂಷಣವೋ, ಹಾಗೆಯೇ ವ್ಯಭಿಚಾರವೂ ಅಸಿ ದ್ಧಿಯೂ ಹೇತುವಿಗೆ ದೋಷವೇ. ಅದು ವಾದಿ ಪ್ರತಿವಾದಿಗಳಲ್ಲಿ ಒಬ್ಬನ ಅಂಗೀಕಾರದಿಂದಲೂ ದೂಷಣವಾಗುತ್ತದೆ. ಹೇಗೆ? 'ಪ್ರಪಂಚಃ ಮಿಥ್ಯಾ ಜ್ಞೇಯತ್ವಾತ್ ಶುಕ್ತಿ ರಜತವತ್' = ಎಂದು ಮಾಯಾವಾದಿಗಳಿಂದ ಶುಕ್ತಿರಜತವನ್ನು ದೃಷ್ಟಾಂತೀಕರಿಸಿಕೊಂಡು ಪ್ರಪಂಚ ಮಿಥ್ಯಾತ್ವದಲ್ಲಿ ಪ್ರಯುಕ್ತವಾದ ಜ್ಞೇಯತ್ವ ಹೇತುವು ಆತ್ಮನಲ್ಲಿದ್ದರೂ ಮಿಥ್ಯಾತ್ವರೂಪ ಸಾಧ್ಯವಿಲ್ಲದಿರುವುದರಿಂದ ಜ್ಞೇಯತ್ವ ಹೇತುವಿಗೆ ಆತ್ಮನಲ್ಲಿ ವ್ಯಭಿಚಾರವು ಪ್ರತಿವಾದಿ ಸಿದ್ಧವಾದಾಗ್ಯೂ ದೂಷಣವೋ, ಹೇಗೆ? 'ವೇದಃ ಅನಿತ್ಯಃ ಕೃತಕತ್ವಾತ್ ಘಟವತ್' = ಘಟವನ್ನು ದೃಷ್ಟಾಂತೀಕರಿಸಿಕೊಂಡು ವೇದಕ್ಕೆ ಅನಿತ್ಯತ್ವವಿಷಯದಲ್ಲಿ ತಾರ್ಕಿಕರಿಂದ ಪ್ರಯುಕ್ತವಾದ ಕೃತಕತ್ವ ಹೇತುವಿಗೆ ಪ್ರತಿವಾದಿಯಿಂದ ಅಂಗೀಕೃತವಾದ ಅಸಿದ್ಧತ್ವವು ದೂಷಣವೋ? ಹಾಗೆಯೇ ಸವಿಶೇಷಣವಾದುದಕ್ಕೂ, ವಿಶೇಷಣ ವೈಯರ್ಥ್ಯವು ದೂಷಣವೇ || ೩೧ ||

ದೃಷ್ಟಾಂತ ದೋಷಗಳು ಯಥಾ ಯೋಗ್ಯವಾಗಿ ಹೇತುದೋಷಗಳಲ್ಲಿಯೇ ಸೇರುವುದರಿಂದ ಅವುಗಳು ಪ್ರತ್ಯೇಕ ದೋಷಗಳೇ ಅಲ್ಲವೆಂದು ಕೆಲವರು ಹೇಳುತ್ತಾರೆ. ಅವರನ್ನು ಕುರಿತು ಹೇಳುತ್ತಾರೆ—

**ಮೂ || ಸಾಧ್ಯಸಾಧನವೈಕಲ್ಯಂ ದೃಷ್ಟಾಂತಸ್ಯ ವಿಶೇಷಣೇ |**
**ವೈಯರ್ಥ್ಯಮೇಕಾಸಿದ್ಧೌ ಚ ವಿಶಿಷ್ಟಾಸಿದ್ಧಿರೇವ ಹಿ || ೩೨ ||**

ಅ || ಸಾಧ್ಯಸಾಧನವೈಕಲ್ಯಂ=ಸಾಧ್ಯವೈಕಲ್ಯವು, ಸಾಧನವೈಕಲ್ಯವು, ದೃಷ್ಟಾಂತಸ್ಯ= ದೃಷ್ಟಾಂತದ (ದೂಷಣವು.) (ಸಾಧ್ಯವೈಕಲ್ಯಾದಿಗಳು ಹೇತ್ವಾಭಾಸದಲ್ಲಿ ಅಂತರ್ಭೂತಗಳಾ ದಾಗ್ಯೂ ದೃಷ್ಟಾಂತವನ್ನು ಆಶ್ರಯಿಸಿಕೊಂಡಿವೆ ಎಂದು ಸ್ಪಷ್ಟವಾಗಿ ತೋರುತ್ತವೆ. ಪ್ರತಿಭಾಸಾನು ಸಾರವಾಗಿಯೇ ಉದ್ಭಾವಿಸಲಿಕ್ಕೆ ಯೋಗ್ಯವಾಗಿರುವುದರಿಂದ ದೃಷ್ಟಾಂತದೋಷವೆಂದು ಹೇಳು ವುದು ಯುಕ್ತವು). (ಕೆಲವರು ೧ ಸಾಧ್ಯವೈಕಲ್ಯ, ೨ ಸಾಧನವೈಕಲ್ಯ, ೩ ಉಭಯವೈಕಲ್ಯ, ೪ ಆಶ್ರಯಹೀನತ್ವ ಹೀಗೆ ನಾಲ್ಕು ಸಾಧರ್ಮ್ಯದೃಷ್ಟಾಂತ ದೋಷಗಳು. ೧ ಸಾಧ್ಯಾವ್ಯಾವೃತ್ತಿ, ೨ ಸಾಧನಾವ್ಯಾವೃತ್ತಿ, ೩ ಉಭಯಾವ್ಯಾವೃತ್ತಿ, ೪ ಆಶ್ರಯಹೀನತ್ವ ಹೀಗೆ ನಾಲ್ಕು ವೈಧರ್ಮ್ಯ ದೃಷ್ಟಾಂತ ದೋಷಗಳು. ಹೀಗೆ ದೃಷ್ಟಾಂತ ದೋಷಗಳು ಎಂಟು (೮) ಎಂದು ಹೇಳುತ್ತಾರೆ. ಅದು ಅಲ್ಲವೆನ್ನುತ್ತಾರೆ). ಸಾಧ್ಯಸಾಧನವೈಕಲ್ಯಂ = ಸಾಧ್ಯವೈಕಲ್ಯ, ಸಾಧನವೈಕಲ್ಯವೇ, ದೃಷ್ಟಾಂತಸ್ಯ=ದೃಷ್ಟಾಂತದೂಷಣವು. (ಬೇರೆ ಯಾವುದೂ ಇಲ್ಲ. ಹೇಗೆಂದರೆ— ಉಭಯ ವೈಕಲ್ಯವನ್ನು ಪ್ರತ್ಯೇಕ ಹೇಳಕೂಡದು. ಸಾಧ್ಯವೈಕಲ್ಯ, ಸಾಧನವೈಕಲ್ಯ ಎನ್ನುವ ಒಂದೊಂದ ರಿಂದಲೇ ದೃಷ್ಟಾಂತವು ದುಷ್ಟವಾಗುವಾಗ ಮಿಳಿತಗಳನ್ನು ಕಲ್ಪಿಸುವುದು ವ್ಯರ್ಥವು. ಸಮುದಿತ ಗಳನ್ನೇ ಕಲ್ಪಿಸುವುದಾದರೆ ಸಾಧ್ಯವೈಕಲ್ಯ, ಸಾಧನವೈಕಲ್ಯ ಇವು ಒಂದೊಂದು ದೂಷಣವಾಗದೆ ಹೋಗಬೇಕಾಗುವುದು.) (ಅಥವಾ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ, ಸಾಧನವೈಕಲ್ಯವೂ ವ್ಯಭಿಚಾರಾದಿಗಳಂತೆ ಉಭಯರೀತಿಯಿಂದ, ಅನ್ಯತರ ರೀತಿಯಿಂದ ಹೀಗೆ ಎರಡುವಿಧವೆಂದು ತಿಳಿಯತಕ್ಕದು. ಪುನಃ ಏಕವಿಧವೇ ಅಲ್ಲ; ಅಭಿಮಾನದಿಂದ ದ್ವೈವಿಧ್ಯವೂ ಕೂಡಬಹುದು ಎನ್ನುತ್ತಾರೆ.) ದೃಷ್ಟಾಂತಸ್ಯ ಸಾಧ್ಯಸಾಧನವೈಕಲ್ಯಂ=ದೃಷ್ಟಾಂತಕ್ಕೆ ಸಾಧ್ಯವೈಕಲ್ಯ, ಸಾಧನ ವೈಕಲ್ಯವು, ಏಕಪಕ್ಷೇಽಪಿ=ಒಂದು ಪಕ್ಷದಲ್ಲಿಯೂ, ದೂಷಣಂ=ದೂಷಣವು. (ಶಬ್ದಃ ಅನಿತ್ಯಃ ಸಾಮಾನ್ಯವತ್ವೇ ಸತಿ ಕೃತಕತ್ವಾತ್ ಇತ್ಯಾದಿಗಳಲ್ಲಿ ವ್ಯಾಪ್ತಿಪಕ್ಷಧರ್ಮತೆಗಳಿಗೆ ಹಾನಿ ಇಲ್ಲದಿರುವುದರಿಂದ ಹೇತುವಿಗೆ ವ್ಯರ್ಥವಿಶೇಷಣತ್ವವೂ ವ್ಯರ್ಥವಿಶೇಷ್ಯತ್ವವೂ ಕೂಡ ದೂಷಣ ವಲ್ಲವೆಂದು ಕೆಲವರು ಹೇಳುತ್ತಾರೆ. ಅವರನ್ನು ಕುರಿತು ಹೇಳುತ್ತಾರೆ—) ವಿಶೇಷಣೇ= ವಿಶೇಷಣವು ಕೊಟ್ಟರೆ, ವೈಯರ್ಥ್ಯಂ = ವಿಶೇಷ್ಯಕ್ಕಾಗಲೀ, ವಿಶೇಷಣಕ್ಕಾಗಲೀ ಯಾವುದು ವೈಯ್ಯರ್ಥ್ಯವಿದೆಯೋ, (ಅದೂ ಕೂಡ ಹೇತುವಿಗೆ ದೂಷಣವೇ. ವ್ಯಾಪ್ತಿಗೆ ಉಪಯುಕ್ತವಾಗಿ ಹೇತುವಿನಲ್ಲಿ ವಿಶೇಷಣವನ್ನು ಇಟ್ಟುಕೊಳ್ಳಬೇಕು. ವೈಯರ್ಥ್ಯವಿದ್ದರೆ ಅಂತಹ ವ್ಯರ್ಥವಿಶೇಷಣ ವಿಶಿಷ್ಟದಲ್ಲಿ ವ್ಯಾಪ್ತಿಗ್ರಾಹಕವಾದ ಪ್ರಮಾಣವು ಪ್ರವೃತ್ತವಾಗದಿರುವುದರಿಂದ ವ್ಯಾಪ್ತಿಯೇ ಇಲ್ಲದಿರುವುದರಿಂದ ಅದಕ್ಕೆ ಹೇತುದೋಷತ್ವವು ಯುಕ್ತವು). (ವ್ಯರ್ಥವಿಶೇಷಣತ್ವಾದಿಗಳೂ ಉಭಯರೀತಿಯಾಗಿ, ಅನ್ಯತರರೀತಿಯಾಗಿ ಹೀಗೆ ಎರಡುವಿಧವೆಂದು ತಿಳಿಯಬೇಕು. ಪುನಃ ಏಕವಿಧವಲ್ಲವೇ ಅಲ್ಲವೆನ್ನುತ್ತಾರೆ.) ವಿಶೇಷಣೇ=ವಿಶೇಷಣವನ್ನು ಕೊಟ್ಟರೆ, ವೈಯರ್ಥ್ಯವು ಏಕಪಕ್ಷದಲ್ಲಿಯೂ ದೂಷಣವು. (ವಿಶೇಷಣಾಸಿದ್ಧಿಯೂ ವಿಶೇಷ್ಯಾಸಿದ್ಧಿಯೂ ಕೂಡ ಹೇತುದೋಷ ವಾಗುವುದಿಲ್ಲ. ವಿಶೇಷಣಮಾತ್ರವಾಗಲೀ ವಿಶೇಷ್ಯಮಾತ್ರವಾಗಲೀ ಹೇತುವಲ್ಲ, ಆದುದರಿಂದ

ಅವರ ಅಸಿದ್ಧಿಯು ಹೇಗೆ ಹೇತುದೂಷಣವಾಗುವುದು? ಎಂದು ಕೆಲವರು ಹೇಳುತ್ತಾರೆ. ಅವರನ್ನು ಕುರಿತು ಹೇಳುತ್ತಾರೆ-) ಏಕಾಸಿದ್ಧೌ ಚ=(ವಿಶಿಷ್ಟವೇ ಹೇತುವು, ವಿಶೇಷಣಾದಿಮಾತ್ರ ವಲ್ಲ, ವಿಶೇಷಣ ವಿಶೇಷ್ಯಗಳಲ್ಲಿ) ಒಂದು ಸಿದ್ಧವಾಗದೆ ಇದ್ದರೂ, ವಿಶಿಷ್ಟಾಸಿದ್ಧಿರೇವ=ವಿಶಿಷ್ಟಕ್ಕೆ ಅಸಿದ್ಧಿಯೇ ಸಿದ್ಧವಾಗುತ್ತದೆ. (ದಂಡವಮಾತ್ರವಿಲ್ಲಹೊದರೂ ಪುರುಷನು ಮಾತ್ರ ಇಲ್ಲದಿದ್ದರೂ ದಂಡೀ ನಾಸ್ತಿ ಎನ್ನುವ ಅನುಭವವು ಇದೆ. ಆದಕಾರಣ ವಿಶೇಷಣವು ಸಿದ್ಧಿಯಾಗದೆ ಇದ್ದರೂ ವಿಶಿಷ್ಟ ಹೇತ್ವಸಿದ್ಧಿಯನ್ನು ಅಂಗೀಕರಿಸಬೇಕಾದುದರಿಂದ ಅದಕ್ಕೆ ಹೇತುದೋಷತ್ವವು ಯುಕ್ತವೇ. ಅದೂ ಕೂಡ ಉಭಯ ರೀತಿಯಿಂದ, ಅನ್ಯತರರೀತಿಯಿಂದ ಹೀಗೆ ಎರಡು ವಿಧವೇ. ಆದಕಾರಣ ವ್ಯರ್ಥವಿಶೇಷಣಾಸಿದ್ಧ್ಯಾದಿಗಳು ಹೇತುದೋಷಗಳಾಗಿರುವುದರಿಂದ ಪರರು ಹೇಳಿದ ಅಸಿದ್ಧಿ ಪ್ರಭೇದಗಳಲ್ಲಿ ಆಶ್ರಯಾಸಿದ್ಧಿ, ವ್ಯಧಿಕರಣಾಸಿದ್ಧಿ, ಸಾಧ್ಯಾಪ್ರಸಿದ್ಧಿ ಈ ಮೂರೇ ದೋಷಗಳಲ್ಲ ವೆಂದು ಹೇಳಿದ್ದು ಯುಕ್ತವು).

ತಾ || ಸ. ರ. ವಿ.— ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೂ, ಸಾಧನವೈಕಲ್ಯವೂ ದೂಷಣವು. ಹಾಗೆಯೇ ಸವಿಶೇಷಣಕ್ಕೂ ವಿಶೇಷಣ ವೈಯ್ಯರ್ಥ್ಯವು ದೂಷಣವು. ವಿಶೇಷಣ ವಿಶೇಷ್ಯಗಳಲ್ಲಿ ಒಂದಕ್ಕೆ ವೈಯ್ಯರ್ಥ್ಯದಿಂದ ಅಸಿದ್ಧಿಯಿದ್ದರೆ ವಿಶಿಷ್ಟಾಸಿದ್ಧಿಯೂ ತಪ್ಪಿದ್ದಲ್ಲ. ಹೇಗೆಂದರೆ— ೧ 'ಶಬ್ದೋ ನಿತ್ಯಃ ಪ್ರಮೇಯತ್ವೇ ಸತಿ ಕೃತಕತ್ವಾತ್' ಎಂದು ವ್ಯರ್ಥವಿಶೇಷಣಾ ಸಿದ್ಧವು. ೨ 'ಕೃತಕತ್ವೇ ಸತಿ ಪ್ರಮೇಯತ್ವಾತ್' ಎನ್ನುವುದು ವ್ಯರ್ಥವಿಶೇಷ್ಯಾಸಿದ್ಧವು.

ಸ. ಚ. ವಿ.— (1) ಸಾಧ್ಯಸಾಧನ ವೈಕಲ್ಯವು ದೃಷ್ಟಾಂತ ದೋಷವು. ಉದಾ= ಶುಕ್ತಿರಜತ ದೃಷ್ಟಾಂತದಲ್ಲಿ ಸದಸದ್ವಿಲಕ್ಷಣತ್ವವಿಲ್ಲದಿರುವುದರಿಂದ ಸಾಧ್ಯವೈಕಲ್ಯವು. ವಿನಾಶಿತ್ವ ಹೇತುವಿನಿಂದ ಜಗತ್ತಿಗೆ ಬಾಧ್ಯತ್ವವನ್ನು ಸಾಧಿಸಿದರೆ ಶುಕ್ತಿರಜತದಲ್ಲಿ ಸಾಧನವೈಕಲ್ಯವು. ಹೇತ್ವಾದಿಗಳಲ್ಲಿ ವಿಶೇಷಣದಲ್ಲಿ ವೈಯರ್ಥ್ಯವು ದೂಷಣವು. (2) ವಿಶೇಷ್ಯ ವಿಶೇಷಣಗಳಲ್ಲಿ ಒಂದು ವ್ಯರ್ಥವಾಗಿರುವುದರಿಂದ ಅಸಿದ್ಧವಾದರೆ ಅವುಗಳ ಸಮುಚ್ಚಯರೂಪವಾದ ವಿಶಿಷ್ಟಕ್ಕೂ ಅಸಿ ದ್ಧಿಯೇ. ಉದಾ= 'ವಿಶಾಲತ್ವೇಸತಿ ಧೂಮವತ್ವಾತ್' ಎನ್ನುವಲ್ಲಿ ವ್ಯರ್ಥವಿಶೇಷಣಾಸಿದ್ಧಿಯು. 'ಧೂಮವತ್ವೇ ಸತಿ ವಿಶಾಲತ್ವಾತ್' ಎನ್ನುವಲ್ಲಿ ವಿಶೇಷ್ಯಾಸಿದ್ಧಿಯು. ॥ ೩೨ ॥

(1) 'ಪ್ರಶ್ನದೋಷಾಶ್ಚತ್ವಾರಃ' ಎಂದು ಯಾವುದು ಹೇಳಲ್ಪಟ್ಟದೋ ಅದರಲ್ಲಿ ವೈಫಲ್ಯಕ್ಕೂ ಅಸಂಗತಿಗೂ ದೋಷತ್ವಹೇಳಿದ್ದು ಅಯುಕ್ತವು. ಆ ದೋಷಗಳನ್ನು ಉದ್ಭಾವಿಸುವುದೇ ಅಶಕ್ಯವು. ಹೇಗೆಂದರೆ— 'ಶಬ್ದಃ ಅನಿತ್ಯಃ ಅಸ್ಮದಾದಿ ಬಾಹ್ಯೇಂದ್ರಿಯಗ್ರಾಹ್ಯತ್ವಾತ್' ಎಂದು ನೈಯ್ಯಾಯಿಕನು ಶಬ್ದಗಳಿಗೆ ಅನಿತ್ಯತ್ವವನ್ನು ಸಾಧಿಸುವುದಕ್ಕಾಗಿ ಅನುಮಾನವನ್ನು ಪ್ರಯೋಗಿ ಸುತ್ತಿರಲು ಶಬ್ದಗಳಿಗೆ ನಿತ್ಯತ್ವವನ್ನು ಹೇಳುವವನು ಸಾಮಾನ್ಯವು ನಿತ್ಯವೋ, ಅನಿತ್ಯವೋ? ಎಂದು ಪ್ರಶ್ನಿಸುವನು. ಅದರಲ್ಲಿ ವೈಫಲ್ಯನ್ನುದ್ಭಾವಿಸಿದರೆ ನಿರನುಯೋಜ್ಯಾನುಯೋಗರೂಪವಾದ ನಿಗ್ರಹಸ್ಥಾನದಿಂದ ಶಬ್ದಗಳಿಗೆ ನಿತ್ಯತ್ವವನ್ನು ಹೇಳುವವನು ನೈಯಾಯಿಕರನ್ನು ನಿಗ್ರಹಿಸಿ ಯಾನು. ಹೇಗೆಂದರೆ— ಸಾಮಾನ್ಯ ನಿತ್ಯತ್ವವನ್ನು ಉಭಯರಿಗೂ ಸಮ್ಮತವನ್ನು ಮಾಡಿಕೊಂಡು ಅಲ್ಲಿ ಅನೈಕಾಂತಿಕತ್ವೋದ್ಭಾವನರೂಪ ಪ್ರಯೋಜನವು ಪರರಿಗೆ ಹೇಳಲಿಕ್ಕೆ ಯೋಗ್ಯವೇ ಆಗಿದೆ. (2) ಆ ಶಬ್ದಾನಿತ್ಯತ್ವಪ್ರಯೋಗದಲ್ಲಿಯೇ ಸಾಮಾನ್ಯವು ಅನುಗತವೋ ಅಲ್ಲವೋ ಎಂದು ಪರನು ಪ್ರಶ್ನಿಸುವನು. ಅಲ್ಲಿ ಅಸಂಗತಿಯನ್ನುದ್ಭಾವಿಸಿದರೆ ನಿರನುಯೋಜ್ಯಾನು ಯೋಗವು ಬರುವುದು. ಅನುಗತವಾಗಿರುವುದರಿಂದ ಸಾಮಾನ್ಯಕ್ಕೆ ನಿತ್ಯತ್ವವನ್ನು ಸಾಧಿಸಿ, ಸಾಮಾ ನ್ಯದಲ್ಲಿ ಅನೈಕಾಂತಿಕತ್ವವನ್ನು ಹೇಳುವೆನು ಎಂದು ಉಪೋದ್ಘಾತರೂಪ ಸಂಗತಿಯು ಪರರಿಗೆ

ಹೇಳಲಿಕ್ಕೆ ಯೋಗ್ಯವೇ ಆಗಿದೆ. ಉದ್ಭಾವಿಸಲಿಕ್ಕೆ ಅಶಕ್ಯವಾದುದು ದೂಷಣವೇ ಆಗಲಿಕ್ಕಿಲ್ಲ ಎಂದಾಶಂಕಿಸಿದರೆ—

ಮೂ ॥ ಅಪ್ರಯೋಜನತಾ ತತ್ರ ಪ್ರಥಮಪ್ರಶ್ನದೂಷಣಂ ।
ಸಿದ್ಧಪ್ರಶ್ನಾದಿಕಂ ಯತ್ತದಾಧಿಕ್ಯಾಂತರ್ಗತಂ ಭವೇತ್ ॥ ೩೩ ॥

ಅ ॥ ತತ್ರ=ಆ ಪ್ರಶ್ನದೋಷಗಳ ಮಧ್ಯದಲ್ಲಿ, ಅಪ್ರಯೋಜನತಾ=ಪ್ರಯೋಜನವಿಲ್ಲ ವೆನ್ನುವುದು, (ಯದ್ಯಪಿ ಉತ್ತರೋತ್ತರ ಪ್ರಶ್ನೆಗಳಲ್ಲಿ ನಿಶ್ಚಯಿಸುವುದು ಅಸಾಧ್ಯವು. ಆದಾಗ್ಯೂ) ಪ್ರಥಮಪ್ರಶ್ನದೂಷಣಂ=ಪ್ರಥಮಪ್ರಶ್ನದಲ್ಲಿ ಸಂಭಾವಿತವಾದುದು ದೂಷಣವೆಂದು ಉದ್ಭಾವಿಸಲಿಕ್ಕೆ ಶಕ್ಯವೇ ಆಗಿದೆ. (ಕಥೆಯ ಉಪಕ್ರಮ ಕಾಲದಲ್ಲಿ ಪ್ರಧಾನಪ್ರಮೇಯ ಪ್ರಶ್ನವನ್ನು ಬಿಟ್ಟು ಇಂತಹ ಪ್ರಶ್ನೆಯು ಕೂಡಲಾರದು.) (ಹೀಗಾದರೆ ಆರೇ (೬) ನಿಗ್ರಹಸ್ಥಾನಗಳು ಎನ್ನುವ ನಿಯಮಕ್ಕೆ ಭಂಗ ಬರುವುದು. ಸ್ವವ್ಯಾಹತಿ-ಅಸಂಗತಿಗಳು ವಿರೋಧ ಅಸಂಗತಿಗಳಲ್ಲಿ ಅಂತರ್ಭೂತ ಗಳಾಗುವುದಾದರೂ ಸಿದ್ಧಾರ್ಥತ್ವ ವೈಫಲ್ಯಗಳು ಅತಿರಿಕ್ತಗಳಾಗಿವೆ ಎಂದರೆ) ಸಿದ್ಧಪ್ರಶ್ನಾದಿಕಂ= ಸಿದ್ಧಪ್ರಶ್ನ, ಸಿದ್ಧಸಾಧನ, ವ್ಯರ್ಥವಿಶೇಷಣಾದಿಗಳು, ಯತ್=ಯಾವುದೋ, ತತ್=ಅದು, ಆಧಿಕ್ಯಾಂತರ್ಗತಂ=ಆಧಿಕ್ಯದಲ್ಲಿ ಅಂತರ್ಗತವಾದುದು, ಭವೇತ್ ಆಗುವುದು.

ತಾ ॥ ಸ. ರ. ವಿ.— (1) ಪ್ರಶ್ನದೂಷಣವೈಫಲ್ಯವು ಯಾವುದು ಹೇಳಲ್ಪಟ್ಟದೋ, ಅದು ಪ್ರಥಮಪ್ರಶ್ನೆಗೇನೇ ದೂಷಣವು. ಉತ್ತರೋತ್ತರ ಪ್ರಶ್ನೆಯು ಪೂರ್ವಪೂರ್ವ ಪ್ರಶ್ನೆಗೆ ಉಪಯುಕ್ತವೂ ಆಗುವುದು. ಪೂರ್ವಪ್ರಶ್ನೆಗೆ ಅನುಪಯುಕ್ತವಾದ ಪ್ರಶ್ನೆಯಾದರೂ ಅಸಂಗತ ಪ್ರಶ್ನೆಯಲ್ಲಿಯೇ ಅಂತರ್ಭೂತವಾಗುವುದು. ಪ್ರಸಿದ್ಧಾರ್ಥಪ್ರಶ್ನೆ, ನಿಷ್ಪ್ರಯೋಜನಾರ್ಥಪ್ರಶ್ನೆ, ಸಿದ್ಧಸಾಧನ-ಇವುಗಳಿಗೆ ಅಧಿಕೋಕ್ತಿರೂಪವಾದ ನಿಗ್ರಹಸ್ಥಾನದಲ್ಲಿ ಅಂತರ್ಭಾವವು. ಆದ ಕಾರಣ ವಿರೋಧ, ಅಸಂಗತಿ ಮೊದಲಾದ ಆರು ನಿಗ್ರಹಸ್ಥಾನಗಳಿಂದ ಅತಿರಿಕ್ತವಾದುದು, ನಿಗ್ರಹಸ್ಥಾನವನ್ನು ಶಂಕಿಸಕೂಡದು. ॥ ೩೩ ॥

ನ. ಚ. ವಿ.— ಕೆಲವರು ಅರ್ಥಾಪತ್ತ್ಯಾದಿಗಳನ್ನು ಅನುಮಾನಾದಿಗಳಿಂದ ಪ್ರತ್ಯೇಕ ಪ್ರಮಾಣವೆನ್ನುತ್ತಾರೆ. ಅದನ್ನು ನಿರಾಕರಿಸುತ್ತಾರೆ.

ನ್ಯಾಯಸುಧಾ— (1) ದೂಷಣಾಂತರ್ಭಾವವನ್ನು ಹೇಳುವ ಪ್ರಸಕ್ತಿಯಿಂದ ಹಿಂದೆ ಹೇಳಿದ ಮೂರೇ ಪ್ರಮಾಣಗಳು ಎನ್ನುವ ನಿಯಮವು ಸಿದ್ಧಿಯಾಗುವುದಕ್ಕಾಗಿ ಪರರು ಪ್ರತ್ಯೇಕ ಪ್ರಮಾಣಗಳೆಂದು ಅಂಗೀಕರಿಸಿದ ಅರ್ಥಾಪತ್ತ್ಯಾದಿಗಳಿಗೆ ಯಥಾಯೋಗ್ಯವಾಗಿ ಪ್ರತ್ಯಕ್ಷಾದಿಗಳ ಲ್ಲಿಯೇ ಅಂತರ್ಭಾವವೆನ್ನುತ್ತಾರೆ—

ಮೂ ॥ ಅರ್ಥಾಪತ್ತ್ಯುಪಮಾಭಾವಾಃ ಅನುಮಾಂತರ್ಗತಾಃ ಕ್ವಚಿತ್ ।
ಪ್ರತ್ಯಕ್ಷಾಂತರ್ಗತೋಽಭಾವಃ ಸುಖಾದೇರ್ನಿಯಮೇನ ಚ ।
ಅನ್ಯತ್ರ ಝುಟಿತಿ ಪ್ರಾಪ್ತಃ (ಪ್ರಾರಂಭಾದ್ಯಾಶ್ಚ ಯುಕ್ತಯಃ) ॥ ೩೪ ॥

ಅ ॥ ಅರ್ಥಾಪತ್ತ್ಯುಪಮಾಭಾವಾಃ=ಅರ್ಥಾಪತ್ತಿ ಉಪಮಾನ ಅಭಾವಗಳು, ಕ್ವಚಿತ್= ಕೆಲವುಕಡೆ, ಅನುಮಾಂತರ್ಗತಾಃ = ಅನುಮಾನದಲ್ಲಿಯೇ ಸೇರುತ್ತವೆ. (ಅಭಾವಗ್ರಾಹಕ ಪ್ರಮಾಣವು ನಿಯಮದಿಂದ ಅನುಮಾನದಲ್ಲಿ ಅಂತರ್ಗತವಾಗುತ್ತದೋ ಏನು? ಎಂದರೆ—) ಕ್ವಚಿತ್=ಕೆಲವುವೇಳೆ, ಅಭಾವಃ=ಘಟಾದ್ಯಭಾವ ಗ್ರಾಹಕ ಪ್ರಮಾಣವು, ಪ್ರತ್ಯಕ್ಷಾಂತರ್ಗತಃ=

ಪ್ರತ್ಯಕ್ಷದಲ್ಲಿ ಸೇರುತ್ತದೆ. (ಹಾಗಾದರೆ ಪ್ರತ್ಯಕ್ಷ ಯೋಗ್ಯಗಳಾದ ಎಲ್ಲಾ ಅರ್ಥಗಳ ಅಭಾವವೂ ಪ್ರತ್ಯಕ್ಷ ಅನುಮಾನಗಳಿಂದ ವೇದ್ಯವೋ ಏನು ಎಂದಾಶಂಕಿಸಿದರೆ—) ಸುಖಾದೇಃ=ಸುಖ ಮೊದಲಾದ ಆಂತರವಾದ ಸಾಕ್ಷಿವೇದ್ಯವಾದ ವಸ್ತುವಿನ, ಅಭಾವಸ್ತು=ಅಭಾವವಾದರೂ, ನಿಯಮೇನ=ನಿಯಮವಾಗಿ ಸಾಕ್ಷಿಪ್ರತ್ಯಕ್ಷದಿಂದಲೇ ಗ್ರಾಹ್ಯವಾಗುವುದು; ಅಥವಾ ಸುಖಾದಿಗಳ ಅಭಾವವನ್ನು ಗ್ರಹಿಸತಕ್ಕ ಅಭಾವರೂಪ ಪ್ರಮಾಣವು ನಿಯಮವಾಗಿ ಪ್ರತ್ಯಕ್ಷದಲ್ಲಿಯೇ ಸೇರುತ್ತದೆ. (ಇದರಿಂದ ಬಾಹ್ಯಗಳಾದ ಪ್ರತ್ಯಕ್ಷಯೋಗ್ಯಗಳಾದ ಘಟಾದಿಗಳ ಅಭಾವವು ಪ್ರತ್ಯಕ್ಷದಿಂದಲೂ, ಅನುಮಾನದಿಂದಲೂ ವೇದ್ಯವಾಗುತ್ತದೆಂದು ಹೇಳಲ್ಪಟ್ಟಿದೆ. ಅದು ಅಯುಕ್ತವು. ಒಂದೇ ಜ್ಞಾನವು ಸ್ವತಂತ್ರಗಳಾದ ಎರಡು ಕಾರಣಗಳಿಂದ ಹುಟ್ಟುತ್ತದೆನ್ನುವುದು ಅಯುಕ್ತವು. ಪರಸ್ಪರ ವಿರುದ್ಧಗಳಾದ ಪರೋಕ್ಷತ್ವ-ಅಪರೋಕ್ಷತ್ವ ರೂಪಗಳಾದ ಎರಡು ಆಕಾರಗಳೂ ಪ್ರಾಪ್ತಗಳಾಗಬೇಕಾಗುವುವು ಎಂದರೆ— ಕ್ವಚಿತ್ ಎಂದು ಹೇಳಿರುವರು. ಆದಾಗ್ಯೂ ಪ್ರತ್ಯಕ್ಷಗ್ರಾಹ್ಯವಾದ ಅರ್ಥದಲ್ಲಿ ಅನುಮಾನಕ್ಕೆ ಅವಕಾಶವಿಲ್ಲದಿರುವುದರಿಂದ ಅದು ಅಯುಕ್ತವೇ ಎಂದಾಶಂಕಿಸಿದರೆ—) ಅನ್ಯತ್ರ = ಸುಖಾದಿಗಳಿಂದ ಇತರಗಳಾದ ಘಟಾದಿಗಳು ಪ್ರತಿಯೋಗಿಗಳಾಗಿರುವಾಗ, ಅಭಾವಃ=ಯಾವುದು ಅಭಾವಪ್ರಮಾಣವು, ಝಟಿತಿ=ಶೀಘ್ರವಾಗಿ, ಪ್ರಾಪ್ತಃ=ಪ್ರಾಪ್ತವಾಗುತ್ತದೋ, (ಅದು ಪ್ರತ್ಯಕ್ಷವು).

**ತಾ ॥ ಸ. ರ. ವಿ.**— (1) ಅರ್ಥಾಪತ್ತಿ ಉಪಮಾನ ಅಭಾವಾಖ್ಯ ಪ್ರಮಾಣಗಳಿಗೆ ಅನುಮಾನಾದಿಗಳಲ್ಲಿ ಅಂತರ್ಭಾವವು. ಹೇಗೆಂದರೆ— ೧ ಯಾವ ಕಾರಣದಿಂದ ಅಪ್ರಸಿದ್ಧವಾದ ಸಾಧ್ಯವನ್ನು ಸಾಧಿಸಿಕೊಡತಕ್ಕ ದೃಷ್ಟವಾದ ಅಥವಾ ಶ್ರುತವಾದ ಲಿಂಗಕ್ಕೆ ಅನ್ಯಥಾನುಪಪತ್ತಿಯೇ ಅರ್ಥಾಪತ್ತಿಯು. ಆದಕಾರಣ ಅರ್ಥಾಪತ್ತಿಯು ವ್ಯತಿರೇಕ ವ್ಯಾಪ್ತಿಮೂಲಕವಾದ ಅನುಮಾನವೇ. ೨ ಇದರಲ್ಲಿರತಕ್ಕ ಸಾದೃಶ್ಯಕ್ಕೆ ಪ್ರತಿಯೋಗಿಯಾಗಿರುವುದರಿಂದ ಅದು ಇದರಿಂದ ಸದೃಶವಾದುದು ಎನ್ನುವ ಉಪಮಾನವೂ ಅನುಮಾನವೇ. ಉದಾ:— ಆ ಗೋವು ಈ ಗವಯದಿಂದ ಸದೃಶವು ಎಂದು ಸಾದೃಶ್ಯದಿಂದ ಅದನ್ನು ತಿಳಿಸಿಕೊಡುತ್ತದೆ. ಯಾವುದು ಯಾವುದನ್ನು ತನ್ನ ಸಾದೃಶ್ಯದಿಂದ ತಿಳಿಸುತ್ತದೋ ಅದು ಅದರಿಂದ ಸದೃಶವು. ಉದಾ: — ತಂದೆಯಿಂದ ಮಗನು ಸದೃಶನು. ಉಪಮಾನವು ಶಬ್ದದಲ್ಲಿಯೂ ಅಂತರ್ಗತವಾಗುತ್ತದೆ. ಉದಾ:— ಗವಯವು ಎಂತಹುದು ಎಂದು ಪ್ರಶ್ನಿಸಿದರೆ— ಗೋವಿನಂತೆ ಗವಯವೂ ಎನ್ನುವನು. (2) ಎಲ್ಲಿ ಪ್ರಮಾಣಾಭಾವಕ್ಕೆ ಲಿಂಗತ್ವವನ್ನು ನಿಶ್ಚೈಸಿಕೊಂಡು ಯೋಗ್ಯವಾಗಿದ್ದು ಕಾಣದಿರುವುದರಿಂದ ಮೇರುಪರ್ವತದಂತೆ ಇಲ್ಲಿ ಸಾಸ್ಮೆಯಿಲ್ಲ ಎನ್ನುವುದರಂತೆ ಪ್ರಮೇಯಾಭಾವವು ನಿಶ್ಚಿತವಾಗುತ್ತದೋ ಅಲ್ಲಿ ಅಭಾವವು ಅನುಮಾನದಲ್ಲಿ ಅಂತರ್ಭೂತವಾಗುತ್ತದೆ. (3) ಸುಖದುಃಖಾದಿಗಳ ಅಭಾವವಾದರೂ ಸುಖಾದಿಗಳ ಸ್ಥಿತಿಯಂತೆ ಸಾಕ್ಷಿಪ್ರತ್ಯಕ್ಷದಿಂದಲೇ ವೇದ್ಯವಾಗುವುದು. ಯೋಗ್ಯಾನುಪಲಬ್ಧಿರೂಪಲಿಂಗದಿಂದ ಅನುಮೇಯವಲ್ಲ. (4) ಎಲ್ಲಿ ಯೋಗ್ಯಾನುಪಲಬ್ಧಿಯೇ ಲಿಂಗವೆಂದು ಅನುಸಂಧಾನಮಾಡಿಕೊಂಡು ಘಟಾದಿಗಳ ಅಭಾವವನ್ನು ಶೀಘ್ರದಲ್ಲಿ ತಿಳಿಯುತ್ತಾನೋ ಅಲ್ಲಿ ಇದು ಪ್ರತ್ಯಕ್ಷವೆಂದು ತಿಳಿಯತಕ್ಕದ್ದು. ಆದಕಾರಣ ಅರ್ಥಾಪತ್ಯಾದಿಗಳು ಪ್ರತ್ಯಕ್ಷ ಅನುಮಾನ ಆಗಮಗಳಿಂದ ಪ್ರತ್ಯೇಕ ಪ್ರಮಾಣವಲ್ಲ.

**ನ. ಚ. ವಿ**— (1) ದೃಷ್ಟವಾದ, ಅಥವಾ ಶ್ರುತವಾದ ಲಿಂಗದ ಅನ್ಯಥಾನುಪಪತ್ತಿಯಿಂದ ಲಿಂಗಿಗೆ (ಸಾಧ್ಯಕ್ಕೆ) ಅರ್ಥಾತ್ ಪ್ರಾಪ್ತಿಯೇ ಅರ್ಥಾಪತ್ತಿಯು. ಉದಾ:—ಜೀವಿಸಿಕೊಂಡಿರುವ ದೇವದತ್ತನು ಮನೆಯೊಳಗೆ ಇಲ್ಲ ಎನ್ನುವುದರಿಂದ ಹೊರಗೆ ಇದ್ದಾನೆನ್ನುವುದು ಸಿದ್ಧಿಸುತ್ತದೆ.

(2) ಇದರಲ್ಲಿರತಕ್ಕ ಸಾದೃಶ್ಯಕ್ಕೆ ಪ್ರತಿಯೋಗಿಯಾಗಿರುವುದರಿಂದ ಅದು ಇದರಿಂದ ಸದೃಶವಾದುದು ಎನ್ನುವುದು ಉಪಮಾನವು. ಉದಾ:— ಗೋವಿಗೆ ಸದೃಶವಾದ ಗವಯುವನ್ನು ಕಂಡಿರುವುದರಿಂದ ಗವಯು ಸದೃಶವಾದುದು ಗೋವು ಎನ್ನುವ ಜ್ಞಾನವು. (3) ಪ್ರಮಾಣಾಭಾವವೇ ಲಿಂಗವಾಗಿವುಳ್ಳ ಪ್ರಮೇಯಾಭಾವಜ್ಞಾನವು ಅಭಾವಪ್ರಮಾಣವು. ಇವುಗಳೆಲ್ಲವೂ ಅನುಮಾನದಲ್ಲಿ ಅಂತರ್ಭೂತಗಳಾಗುತ್ತವೆ. ಹೇಗೆಂದರೆ— ೧ 'ದೇವದತ್ತೋ ಬಹಿರಸ್ತಿ ಜೀವಿತ್ವೇ ಸತಿ ಗೃಹಾಭಾವಿತ್ವಾತ್' ದೇವದತ್ತನು ಹೊರಗೆ ಇದ್ದಾನೆ, ಬದುಕಿಕೊಂಡು ಇದ್ದು ಮನೆಯಲ್ಲಿ ಇಲ್ಲದಿರುವುದರಿಂದ, ೨ 'ಸ ಗೌಃ ಏತದ್ಗವಯುಸದೃಶಃ ಅಸ್ಯ ಗವಯುಸ್ಯ ತದ್ಗೋಸದೃಶತ್ವಾತ್ ಯೋ ಯುತ್ಸದೃಶಃ ಸಃ ತತ್ಸದೃಶಃ ಯಥಾ ಭ್ರಾತಾ' ಆ ಗೋವು ಈ ಗವಯುಕ್ಕೆ ಸದೃಶವು, ಈ ಗವಯುಕ್ಕೆ ಆ ಗೋವಿನ ಸಾದೃಶ್ಯವಿದ್ದಪ್ರಯುಕ್ತ ಯಾರು ಯಾರಿಗೆ ಸದೃಶನೋ ಅವನು ಅವನಿಗೆ ಸದೃಶನು ಅಣ್ಣನಂತೆ, ೩ 'ವಿಮತಃ ಸರ್ಪೋಽತ್ರ ನಾಸ್ತಿ ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್ ಯಥಾ ಪರ್ವತಃ' ವಿವಾದವಿಷಯುವಾದ ಸಾಸ್ಮೆಯು ಇಲ್ಲಿ ಇಲ್ಲ, ಯೋಗ್ಯವಾಗಿದ್ದು ಕಾಣದೆ ಇರುವುದರಿಂದ ಪರ್ವತದಂತೆ. (4) ಕೆಲವು ಕಡೆ ಲಿಂಗಕ್ಕಿಂತ ಶೀಘ್ರದಲ್ಲಿ ಹುಟ್ಟತಕ್ಕ ಘಟಪಟಾದಿಗಳ ಅಭಾವಜ್ಞಾನವು ಪ್ರತ್ಯಕ್ಷದಲ್ಲಿ ಸೇರುತ್ತದೆ. ಸುಖದುಃಖಾದಿಗಳು ಇಲ್ಲವೆನ್ನುವ ಜ್ಞಾನವು ಸಾಕ್ಷಿಜ್ಞಾನವಾಗಿರುವುದರಿಂದ ನಿಯುಮದಿಂದ ಪ್ರತ್ಯಕ್ಷದಲ್ಲಿಯೇ ಸೇರುತ್ತದೆ. ಆದಕಾರಣ ಮೂರೇ ಪ್ರಮಾಣಗಳು ಎನ್ನುವುದು ಯುಕ್ತವೇ ॥ ೩೪ ॥

ಸ. ರ. ವಿ.— ಉಪಕ್ರಮೋಪಸಂಹಾರಾದಿಗಳೂ ವಾಕ್ಯಪ್ರಕರಣಾದಿಗಳೂ ಯುಕ್ತಿಯಲ್ಲಿಯೇ ಅಂತರ್ಭೂತಗಳಾಗುತ್ತವೆ. ಪ್ರತ್ಯೇಕಪ್ರಮಾಣಗಳಲ್ಲ ಎನ್ನುತ್ತಾರೆ.

ನ್ಯಾಯುಸುಧಾ— ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದಗಳು ಪ್ರಮಾಣಗಳಿವೆ. ಆದಕಾರಣ ಪ್ರಮಾಣಗಳು ಮೂರೇ ಎನ್ನುವ ನಿಯುಮವು ಹೇಗೆ ಎಂದಾಶಂಕಿಸಿದರೆ—

**ಮೂ ॥ (ಅನ್ಯತ್ರ ಝುಟಿತಿ ಪ್ರಾಪ್ತಃ) ಪ್ರಾರಂಭಾದ್ಯಾಶ್ಚ ಯುಕ್ತಯಃ ।**
**ಆಗಮಾವಸಿತ್ಯರ್ಥಾಃ ನಿಯುತವ್ಯಾಪ್ತಯೋಽಖಿಲಾಃ ॥ ೩೫ ॥**
**ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾಃ ।**
**ಕುರುಪಾಂಡವವತ್ತೇಷಾಮುಪಪತ್ತೇಃ ಪೃಥಗ್ವಚಃ ॥ ೩೬ ॥**

ಅ ॥ ಪ್ರಾರಂಭಾದ್ಯಾಶ್ಚ=ಉಪಕ್ರಮಾದಿಗಳಾದರೂ, (ಅಂದರೆ ಪ್ರಕರಣದ ಆದಿಯು ಉಪಕ್ರಮವು. ಪ್ರಕರಣದ ಅಂತ್ಯವು ಉಪಸಂಹಾರವು. ಏಕಪ್ರಕಾರವಾದ ಅಸಕೃದುಕ್ತಿಯು ಅಭ್ಯಾಸವು. ಪ್ರಚುರವಾಗಿ ಪ್ರಮಾಣಾಂತರದಿಂದ ಅಸಿದ್ಧವಾದ ಅರ್ಥವುಳ್ಳದ್ದು ಅಪೂರ್ವತ್ವವು. ಫಲವನ್ನು ಪ್ರತಿಪಾದಿಸುವುದು ಫಲವು. ವಿಧಿಶೇಷವು ಅರ್ಥವಾದವು. ಯುಕ್ತಿಯು ಉಪಪತ್ತಿಯು) ಯುಕ್ತಯಃ=ಅನುಮಾನಗಳು, (ಏಕೆಂದರೆ) ಅಖಿಲಾಃ = ಉಪಕ್ರಮಾದಿಗಳೆಲ್ಲವೂ, ನಿಯುತವ್ಯಾಪ್ತಯಃ=ಯಾವುದು ಎಲ್ಲಿ ಪ್ರಾರಂಭಿಸಲ್ಪಡುತ್ತದೋ ಅದು ಅಲ್ಲಿ ಪ್ರತಿಪಾದಿಸಲ್ಪಡುತ್ತದೆ ಇತ್ಯಾದಿರೂಪವಾದ ವ್ಯಾಪ್ತಿಯುನ್ನು ಅಪೇಕ್ಷಿಸುವವಗಳಾಗಿಯೇ, ಆಗಮಾರ್ಥಾವಸಿತ್ಯರ್ಥಾಃ= ಆಗಮಾರ್ಥಗಳ ನಿಶ್ಚಯುವೇ ಪ್ರಯೋಜನವುಳ್ಳವುಗಳಾಗುತ್ತವೋ, ಆದಕಾರಣ ಯುಕ್ತಿಗಳೇ. (ಉಪಕ್ರಮಾದಿಗಳು ಆಗಮಾರ್ಥವನ್ನೇ ವಿಷಯಿಾಕರಿಸಿಕೊಂಡಿರತಕ್ಕವುಗಳು, ಅರ್ಥಾಪತ್ತಿ, ಉಪಮಾನ, ಅಭಾವಗಳು ಹಾಗಲ್ಲ, ಆದಪ್ರಯುಕ್ತ ಬೇರೆ ಹೇಳಿರುವರು.) (ವಾಕ್ಯಮೊದಲಾದ

ಪ್ರಮಾಣಗಳೂ ಅನುಮಾನದಲ್ಲಿ ಅಂತರ್ಭೂತಗಳೆನ್ನುತ್ತಾರೆ.) (ಯಾವ ಕಾರಣದಿಂದ) ವಾಕ್ಯಂ= ಪರ್ಯವಸಿತಗಳಾದ ಆಕಾಂಕ್ಷಾವುಳ್ಳ ಪದಗಳು, ಪ್ರಕರಣಂ=ಒಂದು ಪ್ರಮೇಯವನ್ನು ಪ್ರತಿಪಾದಿಸತಕ್ಕ ಅನೇಕ ವಾಕ್ಯಗಳು, ಸ್ಥಾನಂ=ಅನೇಕ ಪ್ರಮೇಯಗಳನ್ನು ಪ್ರತಿಪಾದಿಸತಕ್ಕದ್ದು, ಒಂದು ಅರ್ಥದಲ್ಲಿ ತಾತ್ಪರ್ಯವಿರತಕ್ಕದು. ಸಮಾಖ್ಯಾ=ನಿರ್ಣೀತಸ್ಥಳದಲ್ಲಿ ಸಮಾನವಾದ ಉಕ್ತಿಯು,(ರೂಢಿಯಿಂದ ವಸ್ತುವನ್ನು ಪ್ರತಿಪಾದಿಸತಕ್ಕ ಶಬ್ದವು ಶ್ರುತಿಯು. ಅಸಾಧಾರಣಧರ್ಮವನ್ನು ಪ್ರತಿಪಾದಿಸತಕ್ಕ ಶಬ್ದವು ಲಿಂಗವು.) ತಥಾವಿಧಾಃ=ವ್ಯಾಪ್ತಿಯನ್ನು ಅಪೇಕ್ಷಿಸಿಕೊಂಡೇ ಆಗಮಾರ್ಥವನ್ನು ನಿಶ್ಚಯಿಸಿಕೊಡತಕ್ಕವುಗಳು ಆಗುತ್ತವ್ಯೋ, (ಆದಕಾರಣ ಅಂತಹವುಗಳು ಯುಕ್ತಿಗಳೇ.) (ಉಪಕ್ರಮಾದಿಗಳಲ್ಲಿ ಉತ್ತರೋತ್ತರ ಪ್ರಾಬಲ್ಯವು. ವಾಕ್ಯಾದಿಗಳಲ್ಲಿ ಪೂರ್ವ-ಪೂರ್ವಕ್ಕೆ ಪ್ರಾಬಲ್ಯವು.) (ಉಪಕ್ರಮಾದಿಗಳೂ ವಾಕ್ಯಾದಿಗಳೂ ಕೂಡ ಅನುಮಾನದಲ್ಲಿ ಅಂತರ್ಭೂತಗಳಾಗುವುದಾದರೆ, **'ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ'** ಎಂದು ಅನುಮಾನಾಪರಪರ್ಯಾಯವಾದ ಉಪಪತ್ತಿಯುದ್ದೇಶೆಯಿಂದ ಉಪಕ್ರಮಾದಿಗಳಿಗೆ ಪ್ರತ್ಯೇಕ ಉಕ್ತಿಯು ಹೇಗೆ ಕೂಡುತ್ತದೆ? ಹಾಗೆಯೇ **'ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ'** ಎಂದು ವಾಕ್ಯಾದಿಗಳಿಗೆ ಲಿಂಗದ್ದೇಶೆಯಿಂದ ಪ್ರತ್ಯೇಕವಾಗಿ ಉಕ್ತಿಯು ಹೇಗೆ ಕೂಡುತ್ತದೆ? ಎಂದಾಶಂಕಿಸಿದರೆ—) ಕುರುಪಾಂಡವವತ್=ಕುರುಪಾಂಡವರಂತೆ, (ಅಂದರೆ, ಪಾಂಡವರಿಗೂ ಕುರುವಿಶೇಷತ್ವವಿದ್ದರೂ ಸಾಮಾನ್ಯ ವಿಶೇಷವನ್ನು ಅಪೇಕ್ಷಿಸಿ **'ಸಂತಾನಬೀಜಂ ಕುರುಪಾಂಡವಾನಾಂ'** ಇತ್ಯಾದಿಗಳಲ್ಲಿ ಕುರುಗಳದ್ದೇಶೆಯಿಂದ ಪ್ರತ್ಯೇಕವಚನವಿದೆಯೋ ಹಾಗೆಯೇ, ತೇಷಾಂ= ಉಪಕ್ರಮಾದಿಗಳಿಗೂ ವಾಕ್ಯಾದಿಗಳಿಗೂ ಅನುಮಾನತ್ವವಿದ್ದಾಗ್ಯೂ, ಉಪಪತ್ತೇಃ=ಉಪಪತ್ತಿಯುದ್ದೇಶೆಯಿಂದಲೂ, ಲಿಂಗದ್ದೇಶೆಯಿಂದಲೂ, ಪೃಥಗ್ವಚಃ=ಪ್ರತ್ಯೇಕ ವಚನವು, (ಯುಕ್ತವು).

**ತಾ ॥ ಸ. ರ. ವಿ.**— (1) ಉಪಕ್ರಮೋಪಸಂಹಾರಾದಿಗಳಾದರೂ ವ್ಯಾಪ್ತಿಯಿಂದ ನಿರ್ಣಾಯಕಗಳಾಗಿರುವುದರಿಂದ ಯುಕ್ತಿಗಳೇ. (2) ಉಪಕ್ರಮಾದಿಗಳು ಯುಕ್ತಿಯಲ್ಲಿ ಅಂತರ್ಭೂತಗಳಾಗುವುದಾದರೂ **'ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ। ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ'** ಎನ್ನುವ ಬೃಹತ್ಸಂಹಿತೆಯಲ್ಲಿ ಉಪಪತ್ತಿ ಶಬ್ದದಿಂದ ನಿರ್ದಿಷ್ಟವಾದ ಯುಕ್ತಿಯುದ್ದೇಶೆಯಿಂದ ಅವುಗಳನ್ನು ಪ್ರತ್ಯೇಕ ಹೇಳಿದ್ದು ಕುರುಪಾಂಡವರಂತೆ ಸಾಮಾನ್ಯವಿಶೇಷಭಾವದಿಂದ ಕೂಡುತ್ತದೆ.

**ನ. ಚ. ವಿ.**— (1) **'ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ'** ॥ ಎಂದು ಬೃಹತ್ಸಂಹಿತೆಯಲ್ಲಿ ಇವುಗಳಿಗೆ ತಾತ್ಪರ್ಯ ಲಿಂಗತ್ವವು ಉಕ್ತವಾಗಿದೆ, ಹೇಗೆಂದರೆ— **'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್'** ಎನ್ನುವ ಉಪಕ್ರಮುದ್ದೇಶೆಯಿಂದ ಈ ಆಗಮದಲ್ಲಿ ಶ್ರೀಹರಿಯು ಪ್ರತಿಪಾದಿಸಲ್ಪಡುತ್ತಾನೆ. ಇತ್ಯಾದಿ ರೂಪದಿಂದ ಆಗಮಾರ್ಥನಿಶ್ಚಯವು ಆಗುತ್ತದೆ. (2) **'ನಮೋ ವಿಷ್ಣವೇ ಮಹತೇ ಕರೋಮಿ'** ಎಂದು ಉಪಸಂಹಾರವು. (3) ಅನೇಕಾವರ್ತಿ ಹೇಳುವಿಕೆಯು ಅಭ್ಯಾಸವು. ಉದಾ:— **'ಬ್ರಹ್ಮವಿದಾಪ್ನೋತಿ ಪರಂ ಯೋಽನ್ನಂ ಬ್ರಹ್ಮೋಪಾಸತೇ ಯೋ ಪ್ರಾಣಂ ಬ್ರಹ್ಮೋಪಾಸತೇ'** ಇತ್ಯಾದಿಗಳು. (4) ಪ್ರಮಾಣಾಂತರದಿಂದ ತಿಳಿಯಲ್ಪಡದಿರುವಅರ್ಥಪ್ರತಿಪಾದಕತ್ವವು ಅಪೂರ್ವತ್ವವು. **'ತದ್ಯದಾ ಸ್ತ್ರಿಯಂ ಸಿಂಚತಿ । ಅಥೈನಂ ಜನಯತಿ । ತದಸ್ಯ ಪ್ರಥಮಂ ಜನ್ಮ । ಯದಿ ಕುಮಾರಂ ಜನ್ಮನೋಽಗ್ರೇಧಿಹಾಪಯತಿ'** ಎನ್ನುವ ಉಕ್ತಿಯಿಂದಲೂ, **'ತದಸ್ಯ**

**ದ್ವಿತೀಯಂ ಜನ್ಮ ಸ ಇತಃ ಪ್ರಯನ್ನೇವ ಪುನರ್ಜಾಯತೇ ತದಸ್ಯ ತೃತೀಯಂ ಜನ್ಮ'** ಎನ್ನುವ ಅಭ್ಯಾಸದ್ದೆಶೆಯಿಂದ ಜೀವನಿಗೆ ವಾಚ್ಯತ್ವವು ತೋರಿದಾಗ್ಯೂ ಜೀವನು ಪ್ರತ್ಯಕ್ಷಾದಿಗಳಿಗೆ ವಿಷಯನಾಗಿರುವುದರಿಂದ ಜ್ಞಾತನೇ ಆಗಿರುವುದರಿಂದ ಆತನನ್ನು ಬಿಟ್ಟು ಅಪೂರ್ವನಾಗಿರುವುದ ರಿಂದ, ಹುಟ್ಟತಕ್ಕ ಜೀವಾಂತರ್ಯಾಮಿಯಾದ ಶ್ರೀ ಪರಮಾತ್ಮನಲ್ಲಿ ತಾತ್ಪರ್ಯವು ನಿಶ್ಚಿತ ವಾಗುವುದು. (5) ಫಲವು ಉದಾ:- **'ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾ-ಕಶೀತಿ'** ಎನ್ನುವಲ್ಲಿ ಪಕ್ಷಿಜ್ಞಾನವು ನಿಷ್ಫಲವಾಗಿರುವುದರಿಂದ ಅವುಗಳನ್ನು ಹೇಳುತ್ತದೆಂದು ಅಂಗೀ ಕರಿಸುವುದಿಲ್ಲ. ಜೀವೇಶ್ವರ ಜ್ಞಾನವು ಸಫಲವಾಗಿರುವುದರಿಂದ ಅದನ್ನು ಹೇಳುತ್ತದೆಂದು ಅಂಗೀ ಕರಿಸಬೇಕು. (6) ಯಾವುದಕ್ಕಾಗಿ ಇತರವಾದ ಅರ್ಥದ ವಾದವೋ ಅದು ಅದಕ್ಕೆ ಅರ್ಥವಾದವು. ಉದಾ:— ಶ್ರೀಹರಿಗೆ ಸರ್ವೋತ್ತಮತ್ವವನ್ನು ತಿಳಿಸಿಕೊಡುವುದಕ್ಕಾಗಿ **'ಸ ಇಮಾಲ್ಲೋಕಾ ನಸೃಜತ'** ಇತ್ಯಾದಿಗಳಿಂದ ಸೃಷ್ಟಿಯನ್ನು ಹೇಳಿದ್ದು. (7) ಬೇರೆಕಡೆ ಸರ್ವಥಾ ಕೂಡದಿರುವ ಲಿಂಗವು ಉಪಪತ್ತಿಯು. ಉದಾ:- **'ವಿಶ್ವಸ್ಮಾದಿಂದ್ರ ಉತ್ತರಃ । ನಕಿರಿಂದ್ರ ತ್ವದುತ್ತರೋ ನ ಜ್ಯಾಯಾನಸ್ತಿ ವೃತ್ರಹನ್ । ನಕಿರೇವ ಯಥಾ ತ್ವಂ'** ಇತ್ಯಾದಿಗಳಲ್ಲಿ ಸಮಾಧಿಕರು ಇಲ್ಲದಿರುವುದರಿಂದ ಇಂದ್ರಶಬ್ದವಾಚ್ಯನು ವಿಷ್ಣುವು. **'ಪರಾಹೀಂದ್ರ ಧಾವಸೀವೃಷಾಕಪೇರ ತೀವ್ಯಯಿಃ'** ಎಂದು ಇಂದ್ರನಿಗೆ ವಿಷ್ಣುವಿನಿಂದ ಪರಾಜಯವನ್ನು ಹೇಳಿರುವುದರಿಂದ ಸಮಾಧಿಕ ರಾಹಿತ್ಯವು ಕೂಡಲಾರದು. (8) **ಶ್ರುತಿರ್ನಾಮಸಮುದ್ದಿಷ್ಟಂ ಲಿಂಗಂ ತಲ್ಲಕ್ಷಣಂ ಸ್ಮೃತಂ । ಪದಾನಿ ನಿರಪೇಕ್ಷಾಣಿ ವಾಕ್ಯಂ ಪ್ರಕರಣಂ ತಥಾ । ಏಕಸ್ಯ ಪ್ರತಿಪತ್ತ್ಯಂಗ ವಚನಂ ಸ್ಥಾನಮುಚ್ಯತೇ । ಅನ್ಯತ್ರ ತತ್ಸಮೋಕ್ತಿಸ್ತು ಸಮಾಖ್ಯಾ ಸ್ಥಾನಮೇವ ಚ । ಅಧ್ಯಾಯಾದಿಪ್ರಬಂಧಸ್ತು ಪ್ರಭೇದಾ ಆಗಮಸ್ಯ ಚ'** ಎನ್ನುವ ವಚನದ್ದೆಶೆಯಿಂದ ವಾಕ್ಯಾದಿಗಳ ಲಕ್ಷಣಗಳು ಅವಗತಗಳಾಗುತ್ತವೆ.

**ನ್ಯಾಯಸುಧಾ—** (1) ಶಾಕುನ, ಲಿಪ್ಯಕ್ಷರ (ರೇಖಾರೂಪಾಕ್ಷರ) ಕರ-ನೇತ್ರಾದಿಗಳ ಚೇಷ್ಟಾ ಸಂಭವ ಐತಿಹ್ಯ ಪರಿಶೇಷಗಳು ಪ್ರತ್ಯೇಕ ಪ್ರಮಾಣಗಳಿವೆ ಎಂದರೆ— ಶಾಕುನ, ಲಿಪ್ಯಕ್ಷರ, ಕರನೇತ್ರಾದಿ ಚೇಷ್ಟೆಗಳು ಅನುಮಾನಾದಿಗಳಲ್ಲಿ ಅಂತರ್ಭೂತಗಳಾಗುತ್ತವೆ. ಸಂಭವ ಐತಿಹ್ಯಗಳು ಅನುಮಾನ ಆಗಮಗಳಲ್ಲಿ ಅಂತರ್ಭೂತಗಳಾಗುತ್ತವೆ. ಪರಿಶೇಷವು ಅನುಮಾನದಲ್ಲಿ ಸೇರುತ್ತದೆ. ॥ ೩೫ ॥ ೩೬ ॥

**ಸ. ರ. ವಿ—** ಯಾವುದು ಭೇದಕ್ಕೆ ಅನುಮಾನದಿಂದ ಅನಿರ್ವಚನೀಯತ್ವವನ್ನು ಸಾಧಿಸಿದರೆ ಅಪ್ರಸಿದ್ಧ ವಿಶೇಷಣತ್ವರೂಪವಾದ ದೂಷಣವು ಪರರನ್ನು ಕುರಿತು ಉದ್ಭಾವಿಸ ಲ್ಪಟ್ಟದೋ ಅಂತಹ ತಾನು ದೂಷಣವೆಂದು ಒಪ್ಪದಿರುವ ಅಪ್ರಸಿದ್ಧ ವಿಶೇಷಣತ್ವರೂಪ ದೂಷಣ ವನ್ನು ಪರರನ್ನು ಕುರಿತು ಉದ್ಭಾವಿಸಿದರೆ ಅಪಸಿದ್ಧಾಂತವೆಂದಾಶಂಕಿಸಿ ಹೇಳುತ್ತಾರೆ.

**ನ್ಯಾಯಸುಧಾ—** ತರ್ಕವೂ ಅನುಮಾನದಲ್ಲಿ ಅಂತರ್ಗತವಾಗುತ್ತದೆಂದು ಮಿಥಸ್ಸಿದ್ಧಿ ರಿತ್ಯಾದಿಗಳಿಂದ ಸೂಚಿತವೇ ಆಯಿತು. ಹಾಗಾದರೆ ತರ್ಕವು ಪ್ರಮಾಣವೇ ಆಗುವುದಿಲ್ಲ. ಅನುಮಾನವು ಹೇಗೆ ಆಗುವುದು? ಅನಿಷ್ಟ ಪ್ರಸಂಜನವು ತರ್ಕವು. ಪ್ರಾಮಾಣಿಕಪರಿತ್ಯಾಗ, ಅಪ್ರಾಮಾಣಿಕ ಸ್ವೀಕಾರ, ಎಂದು ಅನಿಷ್ಟವು ಎರಡು ವಿಧವು. ಅದು ಆತ್ಮಾಶ್ರಯ, ಅನ್ಯೋ ನ್ಯಾಶ್ರಯ, ಚಕ್ರಕ, ಅನವಸ್ಥಾ, ಪ್ರಸಂಗ ಎಂದು ಐದು ವಿಧವು. ಅದರಲ್ಲಿ ಪ್ರಸಂಗವೆಂದರೆ ವ್ಯಾಪ್ಯವನ್ನು ಅಂಗೀಕರಿಸಿದರೆ ಅನಿಷ್ಟವಾದ ವ್ಯಾಪಕವನ್ನು ಆಪಾದಿಸುವುದು. ಆ ಈ ತರ್ಕವು ಪ್ರಮಾಣಗಳಿಗೆ ಅನುಗ್ರಾಹಕವು. ಅಂದರೆ, ಪ್ರಮಾಣವಿಷಯಗಳಿಗೆ ಸಂಭಾವಕವಾದುದು.

ಆದಕಾರಣ ಅಪ್ರಮಾಣವೇ ಆದ ತರ್ಕವು, ಪ್ರಮಾಣಗಳಿಗೆ ಅನುಗ್ರಾಹಕಮಾತ್ರವಾದುದು. ಆದಕಾರಣ ಅನುಮಾನದಲ್ಲಿ ತರ್ಕಕ್ಕೆ ಅಂತರ್ಭಾವವು ಹೇಗೆ ಎಂದಾಶಂಕಿಸಿದರೆ—

**ಮೂ || ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಸ್ತು ದೂಷಣಂ |**
**ಸ್ವನ್ಯಾಯೈರ್ದೂಷಣಂ ಚ ಸ್ಯಾತ್ಸಾಧಿತೈಃ ಪ್ರತಿವಾದಿನಃ || ೩೭ ||**

**ಅ ||** ಸ್ವನ್ಯಾಯೈಃ=(ಕೇವಲ ಪರಸಿದ್ಧಗಳಾದ ನ್ಯಾಯಗಳಿಂದಲ್ಲ ಮತ್ತೆ) ತನಗೂ ಸಿದ್ಧಗಳಾದವುಗಳು ಯಾವ ನ್ಯಾಯುಗಳೋ ಆ ನ್ಯಾಯ (ಧರ್ಮಿ ಲಿಂಗ ವ್ಯಾಪ್ತಿ ದೃಷ್ಟಾಂತ) ಗಳಿಂದ, ಸಾಧನಂ=ಸಾಧನವೂ ದೂಷಣವೂ, ಕಾರ್ಯಂ=ಮಾಡತಕ್ಕದು. ಪರನ್ಯಾಯೈಸ್ತು=ಪರರಿಗೇನೇ ಸಿದ್ಧಗಳಾದ ನ್ಯಾಯುಗಳಿಂದಲಾದರೂ, ದೂಷಣಂ=ದೂಷಣವು, ಸ್ಯಾತ್=ಆಗುವುದು. ಪ್ರತಿವಾದಿನಃ=ಪ್ರತಿವಾದಿಗಳನ್ನು ಕುರಿತು, ಸಾಧಿತೈಃ=ಸಾಧಿತಗಳಾದ, ಸ್ವನ್ಯಾಯೈಃ=ತನಗೇನೇ ಸಿದ್ಧಗಳಾದ ನ್ಯಾಯುಗಳಿಂದ, ದೂಷಣಂ=ದೂಷಣವು, ಚ=ಪ್ರತಿವಾದಿಗಳನ್ನು ಕುರಿತು ಸಾಧನವೂ ಕೂಡ, ಸ್ಯಾತ್=ಆಗುವುದು.

**ಸ. ರ. ವಿ—** ಹೇಗೆ ಪರರನ್ನು ಕುರಿತು ಸಾಧಿಸಿದ ತಾನು ಅಂಗೀಕರಿಸಿರುವ ನ್ಯಾಯಗಳಿಂದಲೂ ಪರರ ಪಕ್ಷವನ್ನು ದೂಷಿಸಲಿಕ್ಕೆ ಶಕ್ಯವಾಗುವುದೋ, ಹಾಗೆಯೇ ಸುತರಾಂ ಪರರು ಅಂಗೀಕರಿಸಿದ ನ್ಯಾಯುಗಳಿಂದ ದೂಷಿಸಲಿಕ್ಕೆ ಶಕ್ಯವಾಗುವುದು. ಆದಕಾರಣ ಹೀಗೆ ಒಪ್ಪಿದರೆ ಹೀಗೆ ದೂಷಣವು ಬರುವುದು, ಎಂದು ಪರರನ್ನು ಕುರಿತು ಅವರು ಒಪ್ಪದೇನೇ ಇದ್ದದ್ದನ್ನು ಆಪಾದಿಸಿದರೆ ಹೇಗೆ ಅಪಸಿದ್ಧಾಂತವಿಲ್ಲವೋ ಹಾಗೆಯೇ ಪರಪ್ರಸಿದ್ಧವಾದ ನ್ಯಾಯದಿಂದ ಪ್ರಸಂಗರೂಪದಿಂದ ಪರಪಕ್ಷವನ್ನು ದೂಷಿಸಿದರೂ ಅಪಸಿದ್ಧಾಂತವಿಲ್ಲ. ಸ್ವಪಕ್ಷಸಾಧನವನ್ನಾದರೂ ಅವಶ್ಯವಾಗಿ ಸ್ವಸಿದ್ಧನ್ಯಾಯದಿಂದ ಮಾಡಬೇಕು. ಪರರಿಗೇನೇ ಸಿದ್ಧವಾದ ನ್ಯಾಯದಿಂದ ಅಲ್ಲ.

**ನ್ಯಾಯಸುಧಾ—** (1) ವಾದಕಥೆಯನ್ನೂ ಜಲ್ಪಕಥೆಯನ್ನೂ ಮಾಡುವವನು ತನ್ನ ಪಕ್ಷವನ್ನು ಸಾಧಿಸಿಕೊಳ್ಳಬೇಕು. ಪರರ ಪಕ್ಷವನ್ನು ದೂಷಿಸಬೇಕು. ಅದರಲ್ಲಿ ತನಗೂ ಪರರಿಗೂ ಸಮ್ಮತಗಳಾದ ನ್ಯಾಯುಗಳಿಂದಲೇ ಸಾಧನವನ್ನು ಮಾಡಬೇಕು. ಇಬ್ಬರಲ್ಲಿ ಒಬ್ಬರಿಗೆ ಮಾತ್ರ ಸಿದ್ಧಗಳಾದ ನ್ಯಾಯುಗಳಿಂದ ಸಾಧನವನ್ನು ಮಾಡುವುದಲ್ಲ. ಉದಾ:— ಪರ್ವತವು ಬೆಂಕಿಯುಳ್ಳದ್ದು, ಹೊಗೆಯಿದ್ದಪ್ರಯುಕ್ತ. ಯಾವ್ಯಾವುದು ಹೊಗೆಯುಳ್ಳದ್ದೋ ಅದದು ಬೆಂಕಿಯುಳ್ಳದ್ದು. ಅಡಿಗೆಯ ಮನೆಯಂತೆ ಹೀಗೆ ತನಗೂ ಪರರಿಗೂ ಸಮ್ಮತವಾದ ಧೂಮರೂಪವಾದ ಹೇತುವಿನಿಂದಲೇ ವಹ್ನಿಯನ್ನು ಸಾಧಿಸಬೇಕು. (2) ಕೆಲವುಕಡೆ ತನಗೆ ಮಾತ್ರ ಸಿದ್ಧಗಳೇ ಆದ ನ್ಯಾಯುಗಳಿಂದ ಸಾಧನವು ಮಾಡಲ್ಪಡುತ್ತದೆ. ಅಲ್ಲಿ ಪರರು ಅನ್ಯತರಾಸಿದ್ಧ್ಯಾದಿಗಳನ್ನುದ್ಭಾವಿಸಿದಾಗ ಅವರನ್ನು ಕುರಿತು ಆ ನ್ಯಾಯವನ್ನು ಸಾಧಿಸಿಕೊಡಬೇಕು. ಉದಾ:— ಕಾರ್ಯವಾಗಿರುವುದರಿಂದ ಶಬ್ದವು ಅನಿತ್ಯವಾಗಿದೆ, ಎಂದು ಕಾರ್ಯತ್ವದಿಂದ ಅನಿತ್ಯತ್ವವನ್ನು ಸಾಧಿಸಿದರೆ ಮೀಮಾಂಸಕರು ಕಾರ್ಯತ್ವರೂಪ ಹೇತುವು ಅಸಿದ್ಧವೆಂದು ಹೇಳಿದರೆ ಶಬ್ದವು ವ್ಯಂಜಕವಾಗದಿರುವ ಶಬ್ದವನ್ನು ಹುಟ್ಟಿಸತಕ್ಕ ಪ್ರಯತ್ನದ ಅನಂತರದಲ್ಲಿ ತೋರುವುದರಿಂದ ಕಾರ್ಯವೇ ಆಗಿದೆ ಎಂದು ಕಾರ್ಯತ್ವವನ್ನು ಸಾಧಿಸುವುದು. ಹೀಗೆ ಸರ್ವಧಾ ಸಾಧನವು ಉಭಯರಿಗೂ ಸಿದ್ಧವಾದ ನ್ಯಾಯದಿಂದಲೇ ಸಾಧಿಸತಕ್ಕದು. (3) ದೂಷಣಾನುಮಾನವಾದರೂ ಎರಡು ವಿಧವು. ೧ ಇದು ಹೇಗೆ ಆಗುವುದಿಲ್ಲ ಎಂದಾಗಲೀ, ೨ ಅನಿಷ್ಟವನ್ನು ತೋರಿಸೋಣದರಿಂದಲಾಗಲೀ

ಆಗಬೇಕು. ಅದರಲ್ಲಿ ಒಂದನೇದ್ದು ಉಭಯರಿಗೂ ಸಿದ್ಧಗಳಾದ ನ್ಯಾಯಗಳಿಂದಲೇ ಮಾಡ ತಕ್ಕದು. ಉದಾ:— ಶಬ್ದವು ದ್ರವ್ಯವಲ್ಲ, ಶ್ರೋತ್ರಗ್ರಾಹ್ಯವಾಗಿರುವುದರಿಂದ ಸಾಮಾನ್ಯದಂತೆ ಎಂದು. (4) ಕೆಲವುಕಡೆ ತನಗೆ ಮಾತ್ರ ಸಿದ್ಧಗಳಾದ ನ್ಯಾಯಗಳಿಂದ ಹೇಗೆ ಸಾಧನವೋ ಹಾಗೆಯೇ ದೂಷಣವನ್ನೂ ಮಾಡಿ ಪರರನ್ನು ಕುರಿತು ಅದನ್ನು ಸಾಧಿಸಿಕೊಡಬೇಕು. ಉದಾ:- 'ಶಬ್ದೋ ನ ದ್ರವ್ಯಂ ಶ್ರೋತ್ರಗ್ರಾಹ್ಯತ್ವಾತ್' ಎನ್ನುವ ಅನುಮಾನಕ್ಕೆ ಕಾಲದಲ್ಲಿ ವ್ಯಭಿಚಾರವನ್ನು ಉದ್ಭಾವಿಸಿದರೆ ಕಾಲಕ್ಕೆ ಅತೀಂದ್ರಿಯತ್ವವನ್ನು ಸಾಧಿಸಿ ವ್ಯಭಿಚಾರವನ್ನು ಪರಿಹರಿಸತಕ್ಕದು. ಹೀಗೆ ಒಂದನೇ ದೂಷಣಾನುಮಾನವು ಉಭಯರಿಗೂ ಸಿದ್ಧವಾದ ನ್ಯಾಯದಿಂದ ಸಾಧಿಸ ತಕ್ಕದು. ಎರಡನೇ ದೂಷಣಾನುಮಾನವು ಪರಸಿದ್ಧವಾದ ನ್ಯಾಯಗಳಿಂದಲೇ ಮಾಡತಕ್ಕದು. ಪರ್ವತದಲ್ಲಿ ಬೆಂಕಿಯಿಲ್ಲದಿದ್ದರೆ ಧೂಮವಿಲ್ಲವೆಂದಾಗಬೇಕಾಗುವುದು, ಎಂದು ಇಲ್ಲಿ ಆಪಾದಕಕ್ಕೆ ಪರಸಿದ್ಧತ್ವವೇ ಆವಶ್ಯಕವು. ಸ್ವಸಿದ್ಧತ್ವವಾವಶ್ಯಕವಲ್ಲ. ಅದೇ ತರ್ಕವೆಂದು ಹೇಳಲ್ಪಡುತ್ತದೆ. ಆದ ಕಾರಣ ಅದರಲ್ಲಿ ಆಶ್ರಯಾಸಿದ್ಧಿ, ಅನ್ಯತರಾಸಿದ್ಧಿಗಳು ಭೂಷಣಗಳೇ; ದೂಷಣಗಳಲ್ಲ. ॥ ೩೭ ॥

ಆಶ್ರಯಾಸಿದ್ಧಿ ಅನ್ಯತರಾಸಿದ್ಧಿಗಳಿಗೆ ತರ್ಕದಲ್ಲಿ ದೂಷಣತ್ವವು ಬೇಡ. ಆದಾಗ್ಯೂ ಬಾಧ ಅಪಸಿದ್ಧಾಂತಗಳು ಇದ್ದಪ್ರಯುಕ್ತ ತರ್ಕಕ್ಕೆ ಅನುಮಾನತ್ವವು ಕೂಡುವುದಿಲ್ಲ ಎಂದರೆ— ಬಾಧ ಅಪಸಿದ್ಧಾಂತಗಳಿಗೂ ಅಸಿದ್ಧಿಯಂತೆ ಸಾಧನಾನುಮಾನ, ದೂಷಣಾನುಮಾನಗಳಲ್ಲಿಯೇ ದೂಷಣವಾಗಿರುವುದರಿಂದ ಪ್ರಸಂಗಾನುಮಾನದಲ್ಲಿ ಭೂಷಣವೇ. ಅದಕ್ಕೆ ದೂಷಣತ್ವವಿಲ್ಲವೆಂದು ಹೇಳುತ್ತಾರೆ.

**ಮೂ ॥ ಪ್ರಸಂಗಾರ್ಥತಯಾ ಪ್ರೋಕ್ತಾಃ ನ ಸಿದ್ಧಾಂತಸ್ಯ ದೂಷಕಾಃ ॥ ೩೮ ॥**

ಅ ॥ ಪ್ರಸಂಗಾರ್ಥತಯಾ=ಅನಿಷ್ಟಾಪಾದನಕ್ಕೆ ವಿಷಯವಾಗಿ, ಪ್ರೋಕ್ತಾಃ=ಹೇಳಲ್ಪಟ್ಟ ನಿರ್ಧೂಮತ್ವ ಮೊದಲಾದ ಅರ್ಥಗಳು, ಸಿದ್ಧಾಂತಸ್ಯ=ಸಿದ್ಧಾಂತವನ್ನು, ದೂಷಕಾಃ=ದೂಷಿಸ ತಕ್ಕವುಗಳು, ನ=ಆಗುವುದಿಲ್ಲ. ಅಂದರೆ ಅಪಸಿದ್ಧಾಂತಕ್ಕೂ ಬಾಧಕ್ಕೂ ಕಾರಣಗಳಾಗುವುದಿಲ್ಲ. ೨ನೇದ್ದಾದ ಅನಿಷ್ಟಾಪಾದನರೂಪವಾದ ದೂಷಣಾನುಮಾನದಲ್ಲಿ ಬಾಧ ಅಪಸಿದ್ಧಾಂತಗಳು ಭೂಷಣಗಳೇ ಹೊರತು ದೂಷಣಗಳಲ್ಲ. ॥ ೩೮ ॥

**ಸ. ರ. ವಿ**— ಪರರು ಹೇಳಿದ ಅರ್ಥಕ್ಕೆ ದೂಷಣವಾದರೂ ಪರ ನ್ಯಾಯದಿಂದಲೂ ಆಗುತ್ತದೆಂದು ತೋರಿಸುತ್ತಾರೆ.

**ನ. ಚ. ವಿ**— ವ್ಯಭಿಚಾರಾದಿರೂಪವಾದ ವಿರೋಧವು ಹಿಂದೆ ಉಕ್ತವಾಗಿದೆ. ವಿರೋ ಧಾಂತರವೂ ಇದೆ ಎಂದು ಈಗ ಹೇಳುತ್ತಾರೆ.

**ಮೂ ॥ ಛಲಂ ಜಾತಿರಿತಿ ದ್ವೇಧಾ ವ್ಯಾಹತ್ಯಂತರಮಿಷ್ಯತೇ ।**
**ಜಾತಿಃ ಸ್ವವ್ಯಾಹತಿರ್ಜ್ಞೇಯಾ ಛಲಮರ್ಥಾಂತರೋತ್ತರಂ ॥ ೩೯ ॥**

ಅ ॥ ಛಲಂ = ಛಲೋತ್ತರವು, ಜಾತಿಃ=ಜಾತ್ಯುತ್ತರವು, ಇತಿ=ಹೀಗೆ, ದ್ವೇಧಾ= ಎರಡು ಪ್ರಕಾರ, ವ್ಯಾಹತ್ಯಂತರಂ=ವ್ಯಾಹತಿಪ್ರಭೇದವು, ಅಥವಾ (ವ್ಯಾಹತಿ=) ವಿರೋಧವು ಇತರವಾದ ಅಸಂಗತವೂ ಕೂಡ, ಇಷ್ಯತೇ = ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ. (ಛಲವು ಅಸಂಗತವು, ಜಾತಿಯು ವಿರೋಧವು). (ಅದರಲ್ಲಿ ಜಾತಿಗೆ ಲಕ್ಷಣವನ್ನು ಹೇಳು ತ್ತಾರೆ). ಜಾತಿಃ = ಜಾತಿಯು, ಸ್ವವ್ಯಾಹತಿಃ = ಸ್ವವ್ಯಾಹತಿಯೆಂದು, ಜ್ಞೇಯಾ = ತಿಳಿಯ ತಕ್ಕದು (ಸ್ವವ್ಯಾಹತಿಯು, ಸ್ವವಚನವಿರೋಧ, ಸ್ವಕ್ರಿಯಾವಿರೋಧ, ಸ್ವನ್ಯಾಯ ವಿರೋಧ

ಎನ್ನುವ ಭೇದದಿಂದ ಮೂರು ವಿಧವು). (ಛಲಕ್ಕೆ ಲಕ್ಷಣವನ್ನು ಹೇಳುತ್ತಾರೆ.) ಛಲಂ= ಛಲವು, ಅರ್ಥಾಂತರೋತ್ತರಂ = ಪರರು ಹೇಳಿದ್ದಕ್ಕೆ ಅರ್ಥಾಂತರವನ್ನು ಪರಿಕಲ್ಪಿಸಿ ಆ ಅರ್ಥಾಂತರಕ್ಕೆ ಉತ್ತರವು.

ತಾ ॥ ಸ. ರ. ವಿ— (1) ಹೇಗೆ ಸ್ವವ್ಯಾಹತಿಗೆ ಪ್ರಶ್ನದೂಷಣತ್ವವೋ, ಹೀಗೆಯೇ ಛಲ ಜಾತ್ಯುತ್ತರಗಳಿಗೂ ಹೇಳುವವನಿಗೆ ಅಭಿಪ್ರೇತವಾದ ಅರ್ಥದ್ದೆಶೆಯಿಂದ ಅರ್ಥಾಂತರವನ್ನು ಕಲ್ಪಿಸುವುದು ಛಲವು. ಸ್ವವ್ಯಾಘಾತಕವಾದ ಉತ್ತರವು ಜಾತಿಯು. ಹೇಗೆಂದರೆ— ನವಕಂಬ ಲೋಽಯಂ ಮಾಣವಕಃ=ಈ ಹುಡುಗನು ಹೊಸ ಕಂಬಳಿವುಳ್ಳವನು ಎನ್ನುವ ಅಭಿಪ್ರಾಯದಿಂದ ಹೇಳಿದಾಗ ಛಲವಾದಿಯು ಇವನಿಗೆ 'ಕುತಃ ಅಸ್ಯ ನವಕಂಬಲಾಃ' ಒಂಭತ್ತು ಕಂಬಳಿಗಳು ಯಾವುದರಿಂದ ಎಂದು ಉತ್ತರವನ್ನು ಹೇಳುವನು. ಹೀಗೆ ಛಲವಾದಿಯು ಹೇಳಿದ ಉತ್ತರ ವಾಕ್ಯದಲ್ಲಿರುವ ಕುತಃ ಎನ್ನುವ ಪದಕ್ಕೂ, ಪೃಥಿವಿಯದ್ದೆಶೆಯಿಂದ ಎಂದು ಅರ್ಥಾಂತರವನ್ನು ಕಲ್ಪಿಸಿಕೊಂಡು ದೂಷಣ ಹೇಳಲಿಕ್ಕೆ ಬರುವುದರಿಂದ ಛಲೋತ್ತರದಿಂದಲೇ ಛಲೋತ್ತರವು ಸ್ವವ್ಯಾಹತವಾಗುವುದು. ಛಲವಾದಿಗೆ ವಕ್ತೃವಿಗೆ ಅಭಿಪ್ರೇತವಾದ ಅರ್ಥದ ಜ್ಞಾನವಿಲ್ಲದಿರುವುದು, ವಿಪರೀತ ಜ್ಞಾನವು, ಹೀಗೆ ಎರಡು ನಿಗ್ರಹಸ್ಥಾನಗಳು ಬರುತ್ತವೆ. (2) ಅನುಮಾನವು ಪ್ರಮಾಣವು ಎಂದು ಹೇಳಿದರೆ ಜಾತಿವಾದಿಯು 'ಅನುಮಾನಂ ಪ್ರಮಾಣಂ ನ ಪದಾರ್ಥತ್ವಾತ್ ಅಪ್ರಮಾಣವತ್' ಎಂದು ಹೇಳುತ್ತಾನೆ. ಇದಕ್ಕೂ ಕೂಡ ಅನುಮಾನತ್ವವಿದ್ದುದರಿಂದ ಅದೇ ಹೇತುವಿನಿಂದ ಅಪ್ರಾಮಾಣ್ಯವನ್ನು ಹೊಂದಿಸಿಕೊಡುತ್ತದೆ. ಹೀಗೆ ಸ್ವವ್ಯಾಹತವಾಗಿರುವುದರಿಂದ ಜಾತ್ಯುತ್ತರವು.

ನ್ಯಾಯಸುಧಾ— (1) ಸ್ವವ್ಯಾಹತಿರೂಪವಾದುದು ಜಾತಿಯು; ಅರ್ಥಾಂತರೋತ್ತರ ರೂಪವಾದುದು ಛಲವು. ಹೀಗೆ ನಿಗ್ರಹಸ್ಥಾನವು ಎರಡು ವಿಧವು. ಅವುಗಳನ್ನು ಅಂಗೀಕರಿಸಿದರೆ ಆರೇ ನಿಗ್ರಹಸ್ಥಾನಗಳು ಎನ್ನುವ ನಿಯಮಕ್ಕೆ ಭಂಗವು ಎಂದು ಹೇಳಕೂಡದು. ಜಾತಿಯು ವಿರೋಧದ ಪ್ರಭೇದವು; ಛಲವು ಅಸಂಗತಿ ಪ್ರಭೇದವು. ಅಥವಾ ಇವು ಎರಡಕ್ಕೂ ವಿರೋಧ ದಲ್ಲಿಯೇ ಅಂತರ್ಭಾವವು ಆದುದರಿಂದ ಆರೇ ನಿಗ್ರಹಸ್ಥಾನಗಳು ಎನ್ನುವ ನಿಯಮಕ್ಕೆ ಭಂಗವಿಲ್ಲ ॥ ೩೯ ॥

ಸ. ರ. ವಿ.— ಹಿಂದೆ ಹೇಳಿದ ಅರ್ಥವನ್ನುಪಸಂಹಾರಮಾಡುತ್ತಾರೆ.

ನ್ಯಾಯಸುಧಾ— ಇಷ್ಟರವರೆಗೆ ಹೇಳಿದ ಪ್ರಬಂಧದಿಂದ ಹಿಂದೆ ಹೇಳಿದ ಅರ್ಥಕ್ಕೆ ಪ್ರಕೃತೋಪಯೋಗವನ್ನು ತೋರಿಸುತ್ತಾ ಅಪವ್ಯಾಖ್ಯಾನಕ್ಕೆ ದೂಷಣಾಂತರವನ್ನು ಹೇಳುತ್ತಾರೆ—

**ಮೂ ॥ ಏವಂ ಸಂಶೋಧಿತನ್ಯಾಯ ಸದಾಗಮವಿರೋಧತಃ ।**
**ನಾನಿರ್ವಾಚ್ಯಮಿಹ ಪ್ರೋಕ್ತಂ ಮಾಯಾಮಾತ್ರಪದೇನ ಹಿ ।**
**ವಿಲಕ್ಷಣಂ ಸದಸತೋರಿತಿ ಹಿ ವ್ಯಾಹತಂ ಸ್ವತಃ ॥ ೪೦ ॥**

ಅ ॥ ಏವಂ= ಹೀಗೆ, ಸಂಶೋಧಿತ ನ್ಯಾಯ ಸದಾಗಮವಿರೋಧತಃ, ಸಂಶೋಧಿತ= ಚೆನ್ನಾಗಿ ಶೋಧಿಸಲ್ಪಟ್ಟ ಅಂದರೆ, ಆಭಾಸದ್ದೆಶೆಯಿಂದ ಚೆನ್ನಾಗಿ ವಿವೇಚಿಸಲ್ಪಟ್ಟ, ನ್ಯಾಯ= ಅನುಮಾನವು, ಸತ್=ನಿರವಕಾಶವಾದ, ಆಗಮ=ನಿರ್ದೋಷವಾದ ಆಗಮವೂ ಇವುಗಳ, ವಿರೋಧತಃ=ವಿರೋಧದ್ದೆಶೆಯಿಂದ, ಇಹ= ಈ ಸೂತ್ರದಲ್ಲಿ, ಸಂಧ್ಯಂ=ಸ್ವಪ್ನವು, ಮಾಯಾ ಮಾತ್ರಪದೇನ =ಮಾಯಾಮಾತ್ರ ಎನ್ನುವ ಪದದಿಂದ, ಅನಿರ್ವಾಚ್ಯಂ = ಸದಸದ್ವಿಲಕ್ಷಣವು,

ಎಂದು, ಪ್ರೋಕ್ತಂ=ಹೇಳಲ್ಪಟ್ಟದ್ದು ನ=ಅಲ್ಲ. ಹಿ=ಸ್ವಪ್ನಕ್ಕೆ ಸತ್ಯತ್ವವನ್ನು ಪ್ರತಿಪಾದಿಸತಕ್ಕ '**ಅಥ ರಥಾನ್ ರಥಯೋಗಾನ್ ಪಥಃ ಸೃಜತೇ । ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ । ಅನಿತ್ಯತ್ವ ವಿಕಾರಿತ್ವ ಪಾರತಂತ್ರ್ಯಾದಿರೂಪತಃ' । ಸ್ವಪ್ನಾದಿಸಾಮ್ಯಂ ಜಗತೋ ನ ತು ಬೋಧನಿವರ್ತ್ಯತಾ ॥** ಇತ್ಯಾದಿ ಸದಾಗಮವು ಪ್ರಸಿದ್ಧವು. (ಪ್ರಮಾಣವಿಲ್ಲದಿರುವುದರಿಂದ ಮಾಯಾಮಾತ್ರವೆನ್ನುವ ಪದದಿಂದ ಸ್ವಪ್ನಕ್ಕೆ ಅನಿರ್ವಾಚ್ಯತ್ವವು ಕೊಡುವುದಿಲ್ಲವೆಂದು ಇಷ್ಟೇ ಅಲ್ಲ. ಮತ್ತೆ ಪ್ರಮಾಣವಿರೋಧವಿದ್ದುದರಿಂದಲೂ ಸ್ವಪ್ನಕ್ಕೆ ಅನಿರ್ವಾಚ್ಯತ್ವವು ಕೊಡುವುದಿಲ್ಲ. ಮತ್ತು ಈ ಅನಿರ್ವಾಚ್ಯತ್ವವು ಸ್ವವ್ಯಾಹತವೂ ಆಗಿದೆ ಎನ್ನುತ್ತಾರೆ.) (ಜಗತ್ತೂ ಅನಿರ್ವಾಚ್ಯವೆಂದು ವ್ಯವಹಾರಮಾಡತಕ್ಕ ಮಾಯಾವಾದಿಗಳಿಗೆ ಸ್ವಕ್ರಿಯಾವಿರೋಧವು ಬರುವುದರಿಂದ 'ಅನಿರ್ವಾಚ್ಯಂ' ಎನ್ನುವ ಪದದಿಂದ ಸರ್ವಥಾ ವಾಚ್ಯತ್ವಾಭಾವವು ಅಭಿಪ್ರೇತವಲ್ಲ. ಮತ್ತೆ ಅನಿರ್ವಾಚ್ಯತ್ವವೆಂದರೆ ಸದಸದ್ವೈಲಕ್ಷಣ್ಯವು, ಅಭಿಪ್ರೇತವು.) ಸದಸತೋಃ ವಿಲಕ್ಷಣಂ=ಸ್ವಾಪ್ನಪದಾರ್ಥವು ಸದಸತ್ತುಗಳ ಸಕಾಶದ್ದೆಶೆಯಿಂದ ವಿಲಕ್ಷಣವು ಎನ್ನುವ ಪ್ರತಿಜ್ಞೆಯು, ಸ್ವತಃ ವ್ಯಾಹತಂ=ಸ್ವವ್ಯಾಹತವೇ ಆಗಿದೆ, ಇದು ಹಿ=ಪ್ರಸಿದ್ಧವು. ಹೇಗೆಂದರೆ—ಸತ್ತು ಅಲ್ಲ ಎಂದು ಹೇಳಿದರೆ ಅಸತ್ವವೇ ಲಬ್ಧವಾಯಿತು. ಪುನಃ ಅಸತ್ತು ಅಲ್ಲವೆಂದು ಹೇಳಿದರೆ ಸ್ವವ್ಯಾಹತಿಯು ತಪ್ಪಿದ್ದಲ್ಲ. ಹೀಗೆಯೇ ಅಸತ್ತು ಅಲ್ಲ ಎಂದು ಹೇಳಿದರೆ, ಸತ್ವವೇ ಉಕ್ತವಾಯಿತು. ಪುನಃ ಸತ್ತು ಅಲ್ಲವೆಂದು ಹೇಳಿದರೆ ಸ್ವವ್ಯಾಹತಿಯೇ ಎನ್ನುವುದು ಪ್ರಸಿದ್ಧವೇ.

**ತಾ ॥ ಸ. ರ. ವಿ.**—(1) ಮಾಯಾಮಾತ್ರವೆನ್ನುವ ಪದವು ಅನಿರ್ವಚನೀಯಾರ್ಥವನ್ನು ಹೇಳುತ್ತದೆನ್ನುವ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ. (2) ಜಗತ್ತು ಸತ್ ಎಂದೂ, ಅಸತ್ ಎಂದೂ ಹೇಳಲಿಕ್ಕೆ ಬಾರದಿರತಕ್ಕುದು ಎನ್ನುವುದು ಸ್ವವ್ಯಾಹತವೂ ಆಗಿದೆ. ಅಂದರೆ ಸದ್ವಿಲಕ್ಷಣವಾದುದು ಅಸತ್ತಾಗಬೇಕು. ಅಸದ್ವಿಲಕ್ಷಣವಾದುದು ಸತ್ತಾಗಬೇಕು ಎನ್ನುವ ನಿಯಮದ್ದೆಶೆಯಿಂದ ಜಗತ್ತು ಸದ್ವಿಲಕ್ಷಣವೂ ಅಸದ್ವಿಲಕ್ಷಣವೂ ಆಗಿದೆ ಎಂದು ಹೇಳಿದರೆ ಸತ್ತೂ, ಅಸತ್ತೂ ಎಂದುಕ್ತವಾದಂತೆ ಆಯಿತು. ಒಂದು ವಸ್ತುವಿಗೆ ದೇಶಕಾಲ ವ್ಯವಸ್ಥೆ ಇಲ್ಲದಿದ್ದರೆ ಸತ್ತು, ಅಸತ್ವಗಳು ವ್ಯಾಹತಗಳು ॥ ೪೦ ॥

ಮತ್ತೂ ಅನೇಕ ದೂಷಣಗಳನ್ನು ಹೇಳುತ್ತಾರೆ—

**ಮೂ ॥ ಪ್ರತಿಯೋಗಿತ್ವಮಪ್ಯಸ್ಯ ಬ್ರಹ್ಮಣೋಽಂಗೀಕೃತಂ ಭವೇತ್ ।**
**ಮಿಥ್ಯಾ ಚೇತ್ಪ್ರತಿಯೋಗಿತ್ವಂ ವೈಲಕ್ಷಣ್ಯಂ ತತೋ ನ ಹಿ ॥ ೪೧ ॥**
**ಅವಿಲಕ್ಷಣತ್ವಂ ಸತ್ಯಂ ಸ್ಯಾನ್ಮಿಥ್ಯಾತ್ವಂ ಬ್ರಹ್ಮಣಸ್ತತಃ ।**
**ಅನಿರ್ವಾಚ್ಯಸ್ಯ ಸತ್ವಂ ವಾ ಯದಿ ಧರ್ಮಾ ನ ಕೇಚನ ॥ ೪೨ ॥**
**ಬ್ರಹ್ಮಣೋ ನೈವ ಜಿಜ್ಞಾಸ್ಯಂ ಜಿಜ್ಞಾಸಾ ಧರ್ಮನಿರ್ಣಯಃ ।**
**ಇದಮಿತ್ಥಮಿತಿ ಜ್ಞಾನಂ ಜಿಜ್ಞಾಸಾಯಾಃ ಪ್ರಯೋಜನಂ ॥ ೪೩ ॥**
**ಇತ್ಥಂ ಭಾವೋ ಹಿ ಧರ್ಮೋಽಸ್ಯ ನ ಚೇನ್ನ ಪ್ರತಿಯೋಗಿತಾ ।**
**ಇತ್ಥಂ ಭಾವಾತ್ಮಕಾನ್ ಧರ್ಮಾನಾಹುಶ್ಚ ಶ್ರುತಯೋಽಖಿಲಾಃ ॥**
**ಅದೃಶ್ಯತ್ವಾದಯೋಽಪ್ಯಸ್ಯ ಗುಣಾ ಹಿ ಪ್ರಭುಣೋದಿತಾಃ ॥ ೪೪ ॥**

ಅ || ಅಸ್ಯ=ಸ್ವಾಪ್ನಪ್ರಪಂಚವನ್ನು ಕುರಿತು, (ಅಂದರೆ ಸ್ವಾಪ್ನಪ್ರಪಂಚದಲ್ಲಿದ್ದ ವೈಲಕ್ಷಣ್ಯವನ್ನು ಕುರಿತು) ಬ್ರಹ್ಮಣಃ=ಬ್ರಹ್ಮನಿಗೆ, ಪ್ರತಿಯೋಗಿತ್ವಮಪಿ=ಪ್ರತಿಯೋಗಿತ್ವವೂ ಕೂಡ, ಅಥವಾ, ಅಸ್ಯಾಪಿ = ನಿರ್ಧರ್ಮಕನೆಂದು ಅಂಗೀಕರಿಸಲ್ಪಟ್ಟ, ಬ್ರಹ್ಮಣಃ = ಪರಬ್ರಹ್ಮನಿಗೂ, ಪ್ರತಿಯೋಗಿತ್ವಂ=ಪ್ರತಿಯೋಗಿತ್ವವು, (ಸ್ವಾಪ್ನಪದಾರ್ಥವು ಸದಸದ್ವಿಲಕ್ಷಣವು ಎಂದು ಪ್ರತಿಜ್ಞಾಮಾಡುವವನಿಂದ) ಅಂಗೀಕೃತಂ=ಅಂಗೀಕರಿಸಿಕೊಳ್ಳಲ್ಪಟ್ಟದ್ದು, ಭವೇತ್ = ಆಗುವುದು. (ಅಂದರೆ ನಿರ್ಧರ್ಮಕನೆಂದು ಅಂಗೀಕರಿಸಲ್ಪಟ್ಟ ಬ್ರಹ್ಮನಲ್ಲಿಯೂ ಪ್ರತಿಯೋಗಿತ್ವಾದಿಧರ್ಮಗಳನ್ನು ಅಂಗೀಕರಿಸಿದರೆ ಅಪಸಿದ್ಧಾಂತವೆಂದು ತಾತ್ಪರ್ಯವು ) (ಬ್ರಹ್ಮನಿಗೆ ಪ್ರತಿಯೋಗಿತ್ವಾದಿ ಧರ್ಮಗಳನ್ನು ಅಂಗೀಕರಿಸಿದರೂ ಅಪಸಿದ್ಧಾಂತವಿಲ್ಲ. ಪಾರಮಾರ್ಥಿಕವಾಗಿ ಯಾವ ಧರ್ಮವೂ ಬ್ರಹ್ಮನಲ್ಲಿ ಇಲ್ಲವೆನ್ನುತ್ತೇವೆ. ಪ್ರತಿಯೋಗಿತ್ವಾದಿಧರ್ಮಗಳನ್ನು ಬ್ರಹ ನಲ್ಲಿ ಅಂಗೀಕರಿಸಿದರೂ ಅದು ಮಿಥ್ಯಾಭೂತವೇ. ಎಂದರೆ—) ಪ್ರತಿಯೋಗಿತ್ವಂ ಮಿಥ್ಯಾ ಚೇತ್=ಬ್ರಹ್ಮನಲ್ಲಿರುವ ಪ್ರತಿಯೋಗಿತ್ವಾದಿಧರ್ಮಗಳು ಮಿಥ್ಯೆಯಾದರೆ, ತತಃ=ಬ್ರಹ್ಮನದ್ದೆಶೆಯಿಂದ, ವೈಲಕ್ಷಣ್ಯಂ ನ ಹಿ=ಸ್ವಾಪ್ನಪದಾರ್ಥಕ್ಕೆ ಭೇದ ಹೇಳಿದ್ದೂ ಕೂಡದೆ ಹೋಗಬೇಕಾಗುವುದು. (ಹಾಗಾದರೆ ಸ್ವಾಪ್ನಕ್ಕೆ ವೈಲಕ್ಷಣ್ಯವು ಬಾರದೆ ಹೋಗಬೇಕಾಗುವುದು, ಎಂದು ಆಪಾದಿಸಿದ್ದು ಇಷ್ಟವೇ. ನಾನು ಸ್ವಾಪ್ನಪದಾರ್ಥಕ್ಕೂ ಅದರಲ್ಲಿರುವ ವೈಲಕ್ಷಣ್ಯಕ್ಕೂ ಮಿಥ್ಯಾತ್ವವನ್ನು ಅಂಗೀಕರಿಸುತ್ತೇನೆ, ಎಂದರೆ—) ಅವಿಲಕ್ಷಣತ್ವಂ=(ಸ್ವಾಪ್ನಪ್ರಪಂಚಕ್ಕೆ ಬ್ರಹ್ಮವೈಲಕ್ಷಣ್ಯವು ಮಿಥ್ಯೆಯಾದರೆ ಆಗ ಸ್ವಾಪ್ನಕ್ಕೆ) ಬ್ರಹ್ಮವೈಲಕ್ಷಣ್ಯಾಭಾವವು, ಸತ್ಯಂ ಸ್ಯಾತ್=ಸತ್ಯವಾಗಬೇಕಾಗುವುದು. (ಸ್ವಾಪ್ನಕ್ಕೆ ಬ್ರಹ್ಮನಿಂದ ಪಾರಮಾರ್ಥಿಕವಾಗಿ ಅಭೇದವನ್ನು ಒಪ್ಪಿದರೆ ಅಪಸಿದ್ಧಾಂತವು ಬರುವುದು. ಇನ್ನು ಅಧಿಕದೋಷವನ್ನು ಹೇಳುತ್ತಾರೆ.) ತತಃ=ಬ್ರಹ್ಮಸ್ವಪ್ನಗಳಿಗೆ ಅವೈಲಕ್ಷಣ್ಯವು ಸತ್ಯವಾಗಿರುವುದರಿಂದ, ಬ್ರಹ್ಮಣಃ=ಪಾರಮಾರ್ಥಿಕ ಸತ್ಯನೆಂದು ಅಂಗೀಕೃತನಾದ ಬ್ರಹ್ಮನಿಗೆ, ಮಿಥ್ಯಾತ್ವಂ=ಮಿಥ್ಯಾತ್ವವು, ಸ್ಯಾತ್=ಬರಬೇಕಾಗುವುದು. ಅನಿರ್ವಾಚ್ಯಸ್ಯ=ಅನಿರ್ವಾಚ್ಯವೆಂದಂಗೀಕೃತವಾದ ಸ್ವಪ್ನಕ್ಕೆ, ಸತ್ವಂ ವಾ=ಬ್ರಹ್ಮನಂತೆ ಪಾರಮಾರ್ಥಿಕಸತ್ವವಾಗಲೀ, (ಭವೇತ್ = ಆಗಬೇಕಾಗುವುದು ) (ನಿರ್ವಿಶೇಷನಾದ ಬ್ರಹ್ಮನಲ್ಲಿ ಯಾವ ಧರ್ಮವೂ ಇಲ್ಲ ಎಂದರೆ—) ಯದಿ = ಯಾವ ಪಕ್ಷದಲ್ಲಿ, ಬ್ರಹ್ಮಣಃ=ಪರಬ್ರಹ್ಮನಿಗೆ, ಕೇಚನ ಧರ್ಮಾಃ=ಯಾವ ಧರ್ಮಗಳೂ, ನ=ಇಲ್ಲವೋ, (ಹಾಗಾದರೆ ಆ ಬ್ರಹ್ಮನು) ಜಿಜ್ಞಾಸ್ಯಂ=ವಿಚಾರಾರ್ಹನು, ನೈವ ಸ್ಯಾತ್=ಆಗದೇನೇ ಹೋಗಬೇಕಾಗುವನು, ('**ಅಥಾತೋ ಬ್ರಹ್ಮಜಿಜ್ಞಾಸಾ**' ಎಂದು ಬ್ರಹ್ಮನಿಗೆ ಜಿಜ್ಞಾಸ್ಯತ್ವವನ್ನು ಹೇಳಿರುವುದರಿಂದ ಬ್ರಹ್ಮನಿಗೆ ಜಿಜ್ಞಾಸಾನರ್ಹತ್ವವನ್ನು ಹೇಳಲಿಕ್ಕೆ ಬರುವುದಿಲ್ಲ. ಆದಕಾರಣ ಬ್ರಹ್ಮನು ನಿರ್ಧರ್ಮಕನಲ್ಲ.) (ಬ್ರಹ್ಮನಿಗೆ ನಿರ್ಧರ್ಮಕತ್ವವಿದ್ದರೆ ಏಕೆ ಜಿಜ್ಞಾಸ್ಯತ್ವವು ಕೂಡಲಾರದೆಂದರೆ) ಜಿಜ್ಞಾಸಾ=ವಿಚಾರವೇ, ಧರ್ಮನಿರ್ಣಯಃ=ಧರ್ಮದ ನಿಶ್ಚಯವು. (ಅಂದರೆ ವ್ಯಾಪ್ಯಧರ್ಮದ ದರ್ಶನವು.) (ಶಶವಿಷಾಣದಂತೆ ಧರ್ಮರಹಿತವಾದುದರಲ್ಲಿ ವ್ಯಾಪ್ಯಧರ್ಮದರ್ಶನರೂಪವಾದ ವಿಚಾರವು ಕೂಡಲಾರದು.) (ಹೇತ್ವಂತರದಿಂದಲೂ ನಿರ್ಧರ್ಮಕವಾದ ವಸ್ತುವಿಗೆ ಜಿಜ್ಞಾಸ್ಯತ್ವವು ಕೂಡುವುದಿಲ್ಲವೆನ್ನುತ್ತಾರೆ.) ಇದಂ ಇತ್ಥಂ ಇತಿ ಜ್ಞಾನಂ=ಇದು ಹೀಗೆ ಎನ್ನುವ ಜ್ಞಾನವು, (ಅಂದರೆ ವಿಚಾರರೂಪವಾದ ಜಿಜ್ಞಾಸೆಗೆ ಆಶ್ರಯಭೂತವಾದ ವಸ್ತುಸ್ವರೂಪ ಜ್ಞಾನವೇ ಪ್ರಯೋಜನವಲ್ಲ, ಅದು ಮೊದಲೇ ಸಿದ್ಧವಾಗಿದೆ. ಅಸಿದ್ಧವಾಗಿದ್ದರೆ ಆಶ್ರಯಾಸಿದ್ಧಿಯು ಬರುವುದು. ಮತ್ತೆ, 'ಇದಂ ಇತ್ಥಂ' ಎಂದು ವ್ಯಾಪಕಧರ್ಮದ ನಿರ್ಣಯವು.) ಜಿಜ್ಞಾಸಾಯಾಃ=ವಿಚಾರಕ್ಕೆ, ಪ್ರಯೋಜನಂ=ಫಲವು. (ತಥಾಚ ನಿರ್ಧರ್ಮಕವಾದ ವಸ್ತುವಿಗೆ ಜಿಜ್ಞಾಸ್ಯತ್ವವು ಹೇಗೆ ಬಂದೀತು?) (ಜಿಜ್ಞಾಸೆಗೆ 'ಇತ್ಥಂ' ಎನ್ನುವಜ್ಞಾನವು ಪ್ರಯೋಜನವಾಗಿದ್ದರೆ ಬ್ರಹ್ಮನಲ್ಲಿ ಇತ್ಥಂ ಭಾವವನ್ನು

ಅಂಗೀಕರಿಸಬೇಕು. ಧರ್ಮವನ್ನು ಏಕೆ ಅಂಗೀಕರಿಸುವುದು ಎಂದರೆ —) ಅಸ್ಯ=ಈ ಬ್ರಹ್ಮನ, ಧರ್ಮಃ=ಧರ್ಮವು, ಇತ್ಥಂಭಾವೋ ಹಿ=ಇತ್ಥಂಭಾವವೇ. ನ ಚೇತ್=ಯಾವ ಧರ್ಮವೂ ಇಲ್ಲ ವಾದರೆ, ಪ್ರತಿಯೋಗಿತಾ=ವಿರೋಧಿತ್ವವು, (ಪ್ರಪಂಚಧರ್ಮ ವ್ಯಾವೃತ್ತಿಯು,) ನ=ಬರಲಾರದು. (ಅಂದರೆ ಬ್ರಹ್ಮನಿಗೆ ಧರ್ಮವಿಲ್ಲವಾದರೆ ಪ್ರಪಂಚದಿಂದ ಭೇದವೂ ಬಾರದೆ ಹೋಗಬೇಕಾಗುವುದು. 'ಇತ್ಥಂ' ಎನ್ನುವ ಜ್ಞಾನವೇ ವಿಚಾರಕ್ಕೆ ಫಲವಾದರೆ ಬ್ರಹ್ಮನಲ್ಲಿ ಇತ್ಥಂಭಾವವನ್ನೇ ಸ್ವೀಕರಿಸಬೇಕಾ ಗುವುದು. ಧರ್ಮವು ಏಕೆ? ಎನ್ನುವ ಮಂದಾಶಂಕೆಯನ್ನು ನಿರಾಕರಿಸುವುದಕ್ಕಾಗಿ 'ಇತ್ಥಂ ಭಾವೋ ಹಿ ಧರ್ಮಃ' ಎನ್ನುವುದನ್ನು ಅನುವಾದಮಾಡಿ ಪರಿಹಾರವನ್ನು ಹೇಳಿದ್ದು. ಇದರಿಂದ 'ಬ್ರಹ್ಮ ನ ನಿರ್ಧರ್ಮಕಂ ಜಿಜ್ಞಾಸ್ಯತ್ವಾತ್ ಪರ್ವತವತ್' ಎನ್ನುವ ಅನುಮಾನವು ಸೂಚಿತವಾ ಯಿತು.) (ಹೇತ್ವಂತರದಿಂದಲೂ ಬ್ರಹ್ಮನು ನಿರ್ಧರ್ಮಕನಲ್ಲವೆನ್ನುತ್ತಾರೆ) (**'ಸತ್ಯಕಾಮಃ ಸತ್ಯ ಸಂಕಲ್ಪಃ'** ಇದುಮೊದಲಾದ ಶ್ರುತಿಗಳು ಧರ್ಮಪ್ರತಿಪಾದಕಗಳಾಗಿವೆ. **'ಅಪಹತಪಾಪ್ಮಾ'** ಇತ್ಯಾದಿಗಳು ಧರ್ಮಪ್ರತಿಪಾದಕಗಳಲ್ಲ. ಆದಕಾರಣ 'ಅಖಿಲಾಃ' ಎಂದು ಹೇಗೆ ಹೇಳಿದ್ದು ಎಂದರೆ—) ಇತ್ಥಂ ಭಾವಾತ್ಮಕಾನ್=ಇತ್ಥಂಭಾವರೂಪಗಳಾದ, ಧರ್ಮಾನ್=ಧರ್ಮಗಳನ್ನು, ಅಖಿಲಾಃ=ಎಲ್ಲಾ, ಶ್ರುತಯಃ=ಶ್ರುತಿಗಳು, ಆಹುಶ್ಚ=ಹೇಳುತ್ತಾವೆ. (ಬ್ರಹ್ಮನ ನಿರ್ಧರ್ಮ ಕತ್ವವು ಕೇವಲ ಶ್ರುತ್ಯನುಮಾನವಿರುದ್ಧವಲ್ಲ. ಮತ್ತೆ ಸೂತ್ರವಿರುದ್ಧವೂ ಆಗಿದೆ ಎನ್ನುತ್ತಾರೆ.) ಅಸ್ಯ=ಈ ಪರಬ್ರಹ್ಮನಿಗೆ, ಅದೃಶ್ಯತ್ವಾದಯಃ=ಅದೃಶ್ಯತ್ವಮೊದಲಾದ, ಗುಣಾಃ=ಗುಣಗಳು, ಪ್ರಭುಣಾಪಿ=ವೇದವ್ಯಾಸರಿಂದಲೂ, **'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ'** ಇತ್ಯಾದಿ ಗಳಿಂದ, ಉದಿತಾಃ ಹಿ=ಹೇಳಲ್ಪಟ್ಟರುತ್ತವಷ್ಟೆ.

**ತಾ ||** ಸ. ರ. ವಿ.— (1) ಬ್ರಹ್ಮನು ಹೊರತು ಸತ್ವವನ್ನು ಅಂಗೀಕರಿಸದೆ ಇರುವು ದರಿಂದ ಜಗತ್ತು ಸತ್ತಿನಿಂದ ಭಿನ್ನವು ಎಂದು ಹೇಳುವವನು ಬ್ರಹ್ಮನಿಗೇನೇ ಪ್ರತಿಯೋಗಿತ್ವರೂಪ ವಾದ ಧರ್ಮವನ್ನು ಅಂಗೀಕರಿಸಿದಂತೆಯೇ ಆಯಿತು. ಆದುದರಿಂದ ನಿರ್ವಿಶೇಷತ್ವವನ್ನು ಬಿಟ್ಟಂ ತೆಯೇ ಆಯಿತು. (2) ಬ್ರಹ್ಮನಲ್ಲಿರುವ ಪ್ರತಿಯೋಗಿತ್ವವು ಮಿಥ್ಯೆಯಾದರೆ ಬ್ರಹ್ಮನಿಂದ ಜಗತ್ತು ಹೇಗೆ ವಿಲಕ್ಷಣವೆಂದು ಹೇಳುವುದು. ಅಂತೂ ವೈಲಕ್ಷಣ್ಯವು ಕೂಡದಿರುವುದರಿಂದ ಜಗತ್ತಿಗೂ, ಬ್ರಹ್ಮನಿಗೂ ವೈಲಕ್ಷಣ್ಯಾಭಾವವು ಬರಬೇಕಾಗುವುದು. ವೈಲಕ್ಷಣ್ಯವಿಲ್ಲವಾದರೆ ಪ್ರಪಂಚ, ಬ್ರಹ್ಮ ಈ ಎರಡಕ್ಕೂ ಮಿಥ್ಯಾತ್ವವು ಬರಬೇಕಾಗುವುದು. ಅಥವಾ ಎರಡಕ್ಕೂ ಸತ್ಯತ್ವವಾಗಲೀ ಬರ ಬೇಕಾದೀತು. ಇದು ಹೊರತು ಬ್ರಹ್ಮನಿಗೆ ಸತ್ಯತ್ವವು ಜಗತ್ತಿಗೆ ಮಿಥ್ಯಾತ್ಯವು ಎನ್ನುವುದು ಕೂಡ ಲಾರದು. (3) ಬ್ರಹ್ಮನು ಸರ್ವಧರ್ಮಗಳಿಂದ ವಿರಹಿತನಾದರೆ ಜಿಜ್ಞಾಸ್ಯನು ಆಗದೆಹೋದಾನು. ಸಾಮಾನ್ಯತಃ ಪ್ರತೀತವಾದುದೂ, ವಿಶೇಷಧರ್ಮವುಳ್ಳದ್ದೂ 'ಇದಮಿತ್ಥಂ' ಎಂದು ನಿಶ್ಚೈಸುವುದಕ್ಕಾಗಿ ವಿಚಾರವು ಕೂಡುತ್ತದೆ. ಬ್ರಹ್ಮನಿಗೆ ಇತ್ಥಂ ಭಾವರೂಪವಾದ ಧರ್ಮವು ಇಲ್ಲವಾದರೆ ಬ್ರಹ್ಮ ಭಿನ್ನವಾದ ಜಗತ್ತಿನಲ್ಲಿರುವ ವೈಲಕ್ಷಣ್ಯವನ್ನು ಕುರಿತು ಬ್ರಹ್ಮನಿಗೆ ಪ್ರತಿಯೋಗಿತ್ವವು ಬಾರದೆ ಹೋಗ ಬೇಕಾಗುವುದು. ಅಂತೂ ಜಗತ್ತಿನಿಂದ ಐಕ್ಯವು ಬರಬೇಕಾಗುವುದರಿಂದ ಜಗತ್ತಿನಂತೆ ಬ್ರಹ್ಮನಿಗೆ ಮಿಥ್ಯಾತ್ವವೂ ಬರಬೇಕಾಗುವುದು. (4) ಮತ್ತು ಸರ್ವಜ್ಞತ್ವಾದಿಧರ್ಮಗಳಿವೆ ಎಂದು ಪ್ರತಿಪಾದಿಸ ತಕ್ಕ **'ಯಃ ಸರ್ವಜ್ಞಃ ಸರ್ವವಿತ್'** ಇತ್ಯಾದಿ ಶ್ರುತಿಸಮುದಾಯಗಳಿಂದ ಬ್ರಹ್ಮನಿಗೆ ಸಗುಣ ವತ್ವವೇ ಸಿದ್ಧವಾಗುತ್ತದೆ. (5) **'ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ'** ಎಂದು ಹೇಳ ತಕ್ಕ ಸೂತ್ರಕಾರರಿಗೂ ಬ್ರಹ್ಮನು ಗುಣವಿಶಿಷ್ಟನೆಂದೇ ಅಭಿಪ್ರಾಯವು. ಅಂದರೆ— ಅಭಾವರೂಪ ಗಳಾದ ಅದೃಶ್ಯತ್ವಾದಿಗಳೂ ಬ್ರಹ್ಮನ ಗುಣಗಳೆಂದು ಸೂತ್ರಕಾರರಿಗೆ ಅಭಿಪ್ರೇತವಾದ ಮೇಲೆ ಭಾವರೂಪಗಳಾದ ಸರ್ವಜ್ಞತ್ವಾದಿಗಳು ಬ್ರಹ್ಮನ ಗುಣಗಳೆಂದು ಅಭಿಪ್ರೇತಗಳಾಗಿವೆ, ಎಂದು

ಏನು ಹೇಳಬೇಕು? (6) ಭಾವರೂಪಗಳಾದ ಧರ್ಮಗಳೇ ಬ್ರಹ್ಮನಲ್ಲಿ ಇರುವುದಿಲ್ಲ. ಅಭಾವ ರೂಪ ಧರ್ಮಗಳು ಬ್ರಹ್ಮನಲ್ಲಿ ಇವೆ, ಎನ್ನುವ ಈ ಕಲ್ಪನೆಯು ಪ್ರಮಾಣಶೂನ್ಯವೂ ವ್ಯರ್ಥವೂ ಆಗಿದೆ. ॥ ೪೧ ॥ ೪೨ ॥ ೪೩ ॥ ೪೪ ॥

**ಸ. ರ. ವಿ.**— ಅಭಾವರೂಪವಾದ ಧರ್ಮವನ್ನು ಅಂಗೀಕರಿಸಿದರೂ ಬ್ರಹ್ಮನ ನಿರ್ವಿಶೇಷತ್ವಕ್ಕೆ ಭಂಗಬರುತ್ತದೆನ್ನುತ್ತಾರೆ.

**ನ್ಯಾಯಸುಧಾ**— (1) ಹಾಗಾದರೆ ನಾವು ಬ್ರಹ್ಮನಿಗೆ ಭಾವರೂಪಗಳಾದ ಧರ್ಮಗಳನ್ನೇ ಅಂಗೀಕರಿಸುವುದಿಲ್ಲ. ಅಭಾವರೂಪ ಧರ್ಮಗಳನ್ನು ಸ್ವೀಕರಿಸುತ್ತೇವೆ. ಆದಕಾರಣ ಸೂತ್ರವಿರೋಧವಿಲ್ಲವೆಂದಾಶಂಕಿಸಿದರೆ—

**ಮೂ ॥ ಯದಿ ಸ್ಯುಸ್ತಾದೃಶಾ ಧರ್ಮಾಃ ಸರ್ವಜ್ಞತ್ವಾದಯೋ ನ ಕಿಂ ॥೪೫॥**
**ಅನ್ಯಾಪೇಕ್ಷಾ ಯದಿ ಸ್ಯುಸ್ತೇ ಸತ್ತೈವಂ ದೇಶಕಾಲಗಾ ।**
**ದೇಶಕಾಲಾನಪೇಕ್ಷಾ ಹಿ ನ ಸತ್ತಾ ಕ್ವಾಪಿ ದೃಶ್ಯತೇ ॥ ೪೬ ॥**

ಅ ॥ ಯದಿ = ಯಾವ ಪಕ್ಷದಲ್ಲಿ, ತಾದೃಶಾಃ = ಅಭಾವಾತ್ಮಕಗಳಾದ ಅದೃಶ್ಯತ್ವ ಮೊದಲಾದ, ಧರ್ಮಾಃ = ಧರ್ಮಗಳು, ಸ್ಯುಃ = ಬ್ರಹ್ಮನಲ್ಲಿ ಪ್ರಮಾಣದಿಂದ ತಿಳಿಯಲ್ಪಟ್ಟವುಗಳಾಗಿದ್ದಾವೆಂದು ಹೇಳುವುದಾದರೆ, ಸರ್ವಜ್ಞತ್ವಾದಯಃ = ಸರ್ವಜ್ಞತ್ವ ಮೊದಲಾದ ಭಾವ ಧರ್ಮಗಳೂ ಕೂಡ, ಕಿಂ ನ ಸ್ಯುಃ =? 'ಯಃ ಸರ್ವಜ್ಞಃ ಸರ್ವವಿತ್' ಇತ್ಯಾದಿ ಶ್ರುತಿ ಸಿದ್ಧಗಳಾದವುಗಳು ಏಕೆ ಇರಲಾರವು? (ಅಂತೂ ಶ್ರುತಿಸಿದ್ಧಗಳಾದ ಈ ಭಾವಧರ್ಮಗಳನ್ನು ಅಂಗೀಕರಿಸಲೇ ಬೇಕು.) ಹಾಗಾದರೆ ಸರ್ವಜ್ಞತ್ವಾದಿ ಭಾವಧರ್ಮಗಳನ್ನು ಅಂಗೀಕರಿಸಿದರೆ 'ನೇಹ ನಾನಾಸ್ತಿ' ಇತ್ಯಾದಿ ಶ್ರುತಿವಿರೋಧವು ಬರುತ್ತದೆಂದು ಹೇಳಿದರೆ- ಅದೃಶ್ಯತ್ವಾದ್ಯಭಾವ ರೂಪಧರ್ಮಗಳನ್ನು ಅಂಗೀಕರಿಸಿದರೂ ಹಿಂದೆ ಹೇಳಿದ ಶ್ರುತಿವಿರೋಧವು ಸಮಾನವೇ. ಅಂತೂ ಅಭಾವಧರ್ಮವನ್ನು ಒಪ್ಪಿದಂತೆಯೇ ಭಾವಧರ್ಮವನ್ನು ಒಪ್ಪಲೇ ಬೇಕು. (ಸರ್ವಜ್ಞತ್ವಾದಿ ಧರ್ಮಗಳು ಮಿಥ್ಯಾಭೂತಗಳಾದ ಸರ್ವಪದಾರ್ಥಗಳನ್ನು ಅಪೇಕ್ಷಿಸಿಕೊಂಡು ಇರುವವುಗಳು. ಮಿಥ್ಯಾಭೂತಗಳಾಗಿರುವುದರಿಂದ ಪಾರಮಾರ್ಥಿಕವಾಗಿ ಬ್ರಹ್ಮಧರ್ಮಗಳೆಂದು ಸ್ವೀಕರಿಸಲಿಕ್ಕೆ ಹೇಗೆ ಶಕ್ಯಗಳಾಗುತ್ತವೆ? ಎಂದರೆ—) ತೇ= ಸರ್ವಜ್ಞತ್ವಾದಿಗಳು, ಅನ್ಯಾಪೇಕ್ಷಾಃ= ಮಿಥ್ಯಾಭೂತಗಳಾದ ಸರ್ವಪದಾರ್ಥಗಳಾಗಿವೆ ಎಂದು, ನ ಯದಿ= ಬ್ರಹ್ಮಧರ್ಮಗಳೆಂದು ಅಂಗೀಕರಿಸಲ್ಪಡುವುದಿಲ್ಲವೆಂದು ಹೇಳುವುದಾದರೆ, ತೇ= ಅದೃಶ್ಯತ್ವಾದಿಗಳೂಕೂಡ, ಅನ್ಯಾಪೇಕ್ಷಾಃ ಸ್ಯುಃ= 'ನ ದೃಶ್ಯಂ ಅದೃಶ್ಯಂ' ಎಂದು ಹೀಗೆ ಇತರಾಪೇಕ್ಷೆಯುಳ್ಳವುಗಳು ಆಗಿರುವುದರಿಂದ ಅವುಗಳೂ ಕೂಡ ಬ್ರಹ್ಮಧರ್ಮಗಳೆಂದು ಅಂಗೀಕರಿಸಲಿಕ್ಕೇನೇ ಕೂಡದೆ ಹೋಗಬೇಕಾಗುವುವು. ಅಂತೂ 'ಅದೃಶ್ಯತ್ವಾಗುಣಕೋ ಧರ್ಮೋಕ್ತೇಃ' ಎನ್ನುವ ಸೂತ್ರವಿರೋಧವು ಬರುವುದು. (ಮತ್ತು ಮಿಥ್ಯಾಭೂತ ಪರಸಾಪೇಕ್ಷತ್ವವಿರುವುದರಿಂದ ಸರ್ವಜ್ಞತ್ವಾದಿಗಳನ್ನು ಬ್ರಹ್ಮನಿಗೆ ಅಂಗೀಕರಿಸದೆ ಇರುವವನು ಸತ್ತಾರೂಪಧರ್ಮವನ್ನೂ ಕೂಡ ಬ್ರಹ್ಮನಿಗೆ ಅಂಗೀಕರಿಸಕೂಡದು.) (ದೇಶ-ಕಾಲ ಸಂಬಂಧಿತ್ವರೂಪವಾದ ಸತ್ತಾರೂಪ ಧರ್ಮವೂ ಕೂಡ ದೇಶ-ಕಾಲರೂಪವಾದ ಪರವನ್ನು ಅಪೇಕ್ಷಿಸಿಕೊಂಡೇ ಇದೆ ಎನ್ನುತ್ತಾರೆ.) (ಯಾವ ಕಾರಣದ್ದೆಶೆಯಿಂದ) ಸತ್ತಾ= ಸತ್ತಾರೂಪ ಧರ್ಮವು, ದೇಶಕಾಲಗಾ= ದೇಶಕಾಲಘಟಿತವಾದುದೋ, (ಆದಕಾರಣ) ಸತ್ತಾ= ಸತ್ತಾರೂಪ ಧರ್ಮವು, ಏವಂ = ಹೀಗೆ, ಸರ್ವಜ್ಞತ್ವಾದಿಗಳಂತೆ ಪರಸಾಪೇಕ್ಷಿತವಾಗಿದೆ.

ಅಂತಹ ಸತ್ತಾರೂಪ ಧರ್ಮವನ್ನು ಬ್ರಹ್ಮನಲ್ಲಿ ಅಂಗೀಕಾರ ಮಾಡದೆ ಇದ್ದರೆ 'ಸದೇವ ಸೋಮ್ಯ' ಇತ್ಯಾದಿ ಶ್ರುತಿವಿರೋಧವು ಬರುವುದು. (ಹಾಗಾದರೆ ಉತ್ಪತ್ತಿಯಲ್ಲಿ ಸರ್ವಜ್ಞತ್ವಾದಿಗಳಿಗೆ ಸರ್ವಾಪೇಕ್ಷತ್ವವಿಲ್ಲವಾದರೂ ಜ್ಞಪ್ತಿಯಲ್ಲಿ ಸರ್ವಾಪೇಕ್ಷತ್ವವು ಇದ್ದೇ ಇದೆ. ಸರ್ವವಸ್ತುಗಳನ್ನು ತಿಳಿದರೇನೇ ಸರ್ವಜ್ಞತ್ವಾದಿಗಳು ತಿಳಿಯಲ್ಪಡುತ್ತವೆ. ತಿಳಿಯದೆ ಇದ್ದರೆ ತಿಳಿಯಲ್ಪಡುವುದಿಲ್ಲ. ಹೀಗಾದರೆ ಸತ್ತಾರೂಪ ಧರ್ಮವೂ ಕೂಡ ಉತ್ಪತ್ತಿಯಲ್ಲಿ ಪರಾಪೇಕ್ಷಿತವಾದುದು ಆಗುವುದು ಬೇಡ. ಜ್ಞಪ್ತಿಯಲ್ಲಿ ಆದರೂ ಪರಾಪೇಕ್ಷೆಯು ಇದ್ದೇ ಇದೆ ಎನ್ನುತ್ತಾರೆ.) ದೇಶಕಾಲಾನಪೇಕ್ಷಾ = ದೇಶ-ಕಾಲಗಳ ಪ್ರತೀತಿಯನ್ನು ಅಪೇಕ್ಷಿಸದೆ ಇರುವ, ಸತ್ತಾ = ಸತ್ತಾರೂಪ ಧರ್ಮವು, ಕ್ವಾಪಿ=ಎಲ್ಲಿಯೂ, ನ ಹಿ ದೃಶ್ಯತೇ=ಕಾಣಲ್ಪಡುವುದಿಲ್ಲ. (ಅಂದರೆ ದೇಶ-ಕಾಲಗಳ ಪ್ರತೀತಿಯನ್ನು ಅಪೇಕ್ಷಿಸಿಕೊಂಡೇ ಸತ್ತಾರೂಪ ಧರ್ಮವು ತಿಳಿಯಲ್ಪಡುತ್ತದೆ.)

**ತಾ** ॥ **ಸ. ರ. ವಿ.** (1) ಹಾಗಾದರೆ ಪರಸಾಪೇಕ್ಷವಾದ ಬ್ರಹ್ಮನಿಗೆ ಸರ್ವಜ್ಞತ್ವಾದಿಗಳು ಕೂಡಲಾರವು. ಏಕೆಂದರೆ— ಸರ್ವವನ್ನು ಅಪೇಕ್ಷಿಸದೆ ಸರ್ವಜ್ಞತ್ವಾದಿಗಳನ್ನಾಗಲೀ ಸರ್ವೇಶ್ವರತ್ವಾದಿಗಳನ್ನಾಗಲೀ ಹೇಳಲಿಕ್ಕೆ ಬರುವುದಿಲ್ಲ. (2) ಅತೀತ ಅನಾಗತ ವರ್ತಮಾನ ಕಾಲಗಳಲ್ಲಿ ಯಾವುದಾದರೊಂದು ಕಾಲವನ್ನು ಅಪೇಕ್ಷಿಸದೆ 'ಅಸ್ತಿ' ಎಂದಾಗಲೀ, 'ಆಸೀತ್' ಎಂದಾಗಲೀ, ಭವಿಷ್ಯತಿ ಎಂದಾಗಲೀ, ನಿರೂಪಿಸಲಿಕ್ಕೆ ಆಗುವುದಿಲ್ಲ. ಆದುದರಿಂದ ಅನ್ಯಾಪೇಕ್ಷೆಯಿದ್ದುದರಿಂದ ಬ್ರಹ್ಮನಿಗೆ ಪರಕೃತವಾದುದೇ ಸತ್ವವು. ಸ್ವತಃ ಸತ್ವವು ಇಲ್ಲದೆಹೋಗಬೇಕಾಗುವುದು ॥ ೪೫ ॥ ೪೬ ॥

**ಸ. ರ. ವಿ.**— ಬ್ರಹ್ಮನಲ್ಲಿ ಸತ್ವಾದಿ ನಿಖಿಲಧರ್ಮಗಳನ್ನು ಅಂಗೀಕರಿಸದೆ ಇದ್ದರೆ ಬಾಧಕವನ್ನು ಹೇಳುತ್ತಾರೆ.

**ನ್ಯಾಯಸುಧಾ**— ಬ್ರಹ್ಮನಿಗೆ ನಿರ್ಧರ್ಮಕತ್ವವನ್ನು ಅಂಗೀಕರಿಸಿದರೆ ಮೀಮಾಂಸಾವಿಷಯತ್ವವು ಕೂಡುವುದಿಲ್ಲವೆಂದಿಷ್ಟೇ ಅಲ್ಲ. ಮತ್ತೆ 'ಶಾಸ್ತ್ರಯೋನಿತ್ವಾತ್' ಎಂದು ಹೇಳಿದ ಶಾಸ್ತ್ರಗಮ್ಯತ್ವವೂ ಅಯುಕ್ತವೆನ್ನುತ್ತಾರೆ.

**ಮೂ ॥ ಸರ್ವಧರ್ಮೋಜ್ಝಿತಸ್ಯಾಸ್ಯ ಕಿಂ ಶಾಸ್ತ್ರೇಣಾಧಿಗಮ್ಯತೇ ।**
**ಮಿಥ್ಯಾಧರ್ಮವಿಧಾತುಶ್ಚ ವೇದಸ್ಯೈವಾಪ್ರಮಾಣತಾ ॥ ೪೭ ॥**

**ಅ** ॥ ಸರ್ವಧರ್ಮೋಜ್ಝಿತಸ್ಯ=ಸರ್ವ ಧರ್ಮಗಳಿಂದಲೂ ವಿರಹಿತನಾದ, ಅಸ್ಯ=ಬ್ರಹ್ಮನಿಗೆ, ಶಾಸ್ತ್ರೇಣ = ಶಾಸ್ತ್ರದಿಂದ, ಕಿಂ = ಯಾವುದು, ಅಧಿಗಮ್ಯತೇ = ತಿಳಿಯಲ್ಪಡುತ್ತದೆ. (ಸ್ವರೂಪವೂ ಸ್ವಪ್ರಕಾಶವಾಗಿರುವುದರಿಂದ ಅದನ್ನು ತಿಳಿಯಲಿಕ್ಕೆ ಶಾಸ್ತ್ರವು ಬೇಕಾಗಿಲ್ಲ. ಧರ್ಮಗಳನ್ನು ನೀನು ಒಪ್ಪುವುದಿಲ್ಲ. ಆದುದರಿಂದ ಶಾಸ್ತ್ರಗಮ್ಯತ್ವವೇ ಬ್ರಹ್ಮನಿಗೆ ಕೂಡದೆ ಹೋಗಬೇಕಾಗುವುದು.) (ಬ್ರಹ್ಮನಲ್ಲಿ ಪಾರಮಾರ್ಥಿಕವಾಗಿ ಧರ್ಮವಿಲ್ಲದಿದ್ದರೂ ಮಿಥ್ಯಾಭೂತ ಧರ್ಮಗಳು ಶಾಸ್ತ್ರದಿಂದ ಪ್ರತಿಪಾದ್ಯಗಳಾಗುವವು, ಎಂದರೆ—) ಮಿಥ್ಯಾಧರ್ಮವಿಧಾತುಃ= ಮಿಥ್ಯಾಭೂತಗಳಾದ ಧರ್ಮಗಳನ್ನು ವಿಧಿಸತಕ್ಕ, ವೇದಸ್ಯ ಚ=ವೇದಕ್ಕಾದರೂ, ಅಪ್ರಮಾಣತೈವ=ಅಪ್ರಾಮಾಣ್ಯವೇ.

**ತಾ** ॥ **ಸ. ರ. ವಿ.**— ಸತ್ವವನ್ನಾಗಲೀ, ಅಸತ್ವವನ್ನಾಗಲೀ, ಬೇರೆ ಯಾವುದನ್ನಾಗಲೀ ನಿರ್ವಿಶೇಷನಾದ ಬ್ರಹ್ಮನಲ್ಲಿ ಶಾಸ್ತ್ರದಿಂದ ವಿಧಾನಮಾಡಲಿಕ್ಕೆ ಶಕ್ಯವಲ್ಲ. ಆದಕಾರಣ ಬ್ರಹ್ಮನಲ್ಲಿ ಶಾಸ್ತ್ರವು ನಿರರ್ಥಕವಾಗಬೇಕಾಗುವುದು.

ನ್ಯಾಯಸುಧಾ— ವೇದಗಳಿಗೆ ವಿಷಯವಿಲ್ಲದಿರುವುದರಿಂದ ಪ್ರಸಕ್ತವಾದ, ಅಬೋಧಕತ್ವರೂಪವಾದ ಅಪ್ರಾಮಾಣ್ಯವನ್ನು ಪರಿಹರಿಸಲಿಕ್ಕೆ ಅಂಗೀಕೃತವಾದ ಮಿಥ್ಯಾಧರ್ಮಪ್ರತಿಪಾದಕತ್ವವು ವಿಪರೀತ ಬೋಧಕತ್ವರೂಪವಾದ ಅಪ್ರಾಣ್ಯವನ್ನೇ ಹೊಂದಿಸಿಕೊಡುತ್ತದೆ. ಆದರೆ ಇಷ್ಟು ವಿಶೇಷವು. ಅಬೋಧಕಗಳಿಗೆ ಕೇವಲ ಉಪೇಕ್ಷಣೀಯತ್ವವೇ. ವಿಪರೀತ ಬೋಧಕಗಳಿಗಾದರೂ ಹೇಯತ್ವವು ಬರಬೇಕಾಗುವುದು. ॥ ೪೭ ॥

ಸ. ರ. ವಿ— ಬ್ರಹ್ಮನಲ್ಲಿ ಸರ್ವಜ್ಞತ್ವಾದಿಗಳನ್ನು ನಿಷೇಧಿಸುವುದಕ್ಕಾಗಿಯೇ ಶಾಸ್ತ್ರಾಂತರದಿಂದ ಪ್ರಾಪ್ತವಾದುದನ್ನು ಅನುವಾದಮಾಡತಕ್ಕ ಶಾಸ್ತ್ರಕ್ಕೆ ಅಪ್ರಾಮಾಣ್ಯವು ಹೇಗೆಬರುವುದೆಂದರೆ—

ನ್ಯಾಯಸುಧಾ— ಮಿಥ್ಯಾಧರ್ಮಗಳನ್ನು ಪ್ರತಿಪಾದಿಸಿಯೇ ವೇದವು ಉಪರತವಾಗುವುದಾದರೆ, ಅಪ್ರಮಾಣವು ಆಗುತ್ತಿತ್ತು. ಹೀಗೆ ಇಲ್ಲ. ಮತ್ತೆ 'ನೇಹ ನಾನಾಸ್ತಿ ಕಿಂಚನ' ಇತ್ಯಾದಿಗಳಿಂದ ಧರ್ಮಗಳ ನಿಷೇಧವನ್ನು ಮಾಡುತ್ತದೆ ಎಂದರೆ—

**ಮೂ ॥ ಅಪ್ರಾಪ್ತಾಂ ಭ್ರಾಂತಿಮಾಪಾದ್ಯ ಕಿಂ ವೇದೋ ಮಾನತಾಂ ವ್ರಜೇತ್।**
**ನ ಹಿ ವೇದಂ ವಿನಾ ಬ್ರಹ್ಮ ವೇದ್ಯಂ ಧರ್ಮಾಶ್ಚ ತದ್ಗತಾಃ ॥ ೪೮ ॥**

ಅ ॥ ವೇದಃ='ಯಃ ಸರ್ವಜ್ಞಃ ಸರ್ವವಿತ್' 'ಯ ಆತ್ಮಾಪಹತ ಪಾಪ್ಮಾ' ಇತ್ಯಾದಿ ವೇದವು, ಯದಾ=ಯಾವಪಕ್ಷದಲ್ಲಿ, ಅಪ್ರಾಪ್ತಾಂ=ಪ್ರಮಾಣಾಂತರದಿಂದ ಪ್ರಾಪ್ತವಾಗದಿರುವ, ಭ್ರಾಂತಿಂ=ಬ್ರಹ್ಮನಲ್ಲಿ ಮಿಥ್ಯಾಭೂತವಾದ ಸಾರ್ವಜ್ಞಾದಿ ಪ್ರತೀತಿಯನ್ನು, ಆಪಾದ್ಯ=ಹುಟ್ಟಿಸಿ, (ತಾನೇ 'ನೇಹ ನಾನಾಸ್ತಿ' ಇತ್ಯಾದಿಗಳಿಂದ ಸಾರ್ವಜ್ಞಾದಿಗಳನ್ನು ನಿಷೇಧಿಸುವುದೋ ಆಗ) ಮಾನತಾಂ=ಪ್ರಾಮಾಣ್ಯವನ್ನು, ವ್ರಜೇತ್ ಕಿಂ=ಹೊಂದುವುದೋ ಏನು? (ಪರಸ್ಪರ ವಿರುದ್ಧವಾಗಿರುವುದರಿಂದ ಹುಚ್ಚನ ಮಾತಿನಂತೆ ಅಪ್ರಮಾಣವೇ ಆಗಬೇಕಾಗುವುದು.) (ಅನುವಾದವಾದರೂ ಮಾನಾಂತರದಿಂದ ಪ್ರಾಪ್ತವಾದುದಕ್ಕೆ ಆಗುತ್ತದೆ. ಬ್ರಹ್ಮನಲ್ಲಿ ಮಿಥ್ಯಾಭೂತ ಧರ್ಮಪ್ರತೀತಿಯು ಯಾವುದರಿಂದಲೂ ಪ್ರಾಪ್ತವಾಗಲಿಲ್ಲ. ಆದುದರಿಂದ ಅನುವಾದವು ಕೂಡದಿರುವುದರಿಂದ ಸಾರ್ವಜ್ಞಾದಿಗಳನ್ನು ವಿಧಾನಮಾಡಿಯೇ ಆ ಧರ್ಮಗಳನ್ನು ನಿಷೇಧಿಸುತ್ತದೆ. ಎಂದು ಹೇಳಿದರೆ ಉನ್ಮತ್ತನ ವಚನದಂತೆ ಅಪ್ರಾಮಾಣ್ಯವೇ ಬರಬೇಕಾಗುವುದು.) (ಬ್ರಹ್ಮಧರ್ಮಗಳಿಗೆ ಅಪ್ರಾಪ್ತಿಯು ಹೇಗೆಂದರೆ—) ವೇದಂ=ವೇದವನ್ನು' ವಿನಾ=ಹೊರತು, ಬ್ರಹ್ಮ=ಪರಬ್ರಹ್ಮನು, ನ ಹಿ ವೇದ್ಯಂ=ವೇದ್ಯನಲ್ಲವಷ್ಟೆ. ತದ್ಗತಾಃ=ಬ್ರಹ್ಮನಲ್ಲಿರತಕ್ಕ, ಧರ್ಮಾಶ್ಚ = ಸಾರ್ವಜ್ಞಾದಿ ಧರ್ಮಗಳೂ ಕೂಡ. (ಹೇಗೆ ಮಾನಾಂತರದಿಂದ ವೇದ್ಯಗಳಾಗುವವು?) ॥ ೪೮ ॥

ಸ. ರ. ವಿ— ಅಪ್ರಾಪ್ತವಾಗಿರುವುದರಿಂದ ಬ್ರಹ್ಮ ಸರ್ವಜ್ಞತ್ವಾದಿಗಳು ಶಾಸ್ತ್ರವೇದ್ಯಗಳಾದಾಗ್ಯೂ ಮಿಥ್ಯೆಯೆಂದು ಹೇಳುವುದಾದರೆ ಅದರಂತೆಯೇ ಶಾಸ್ತ್ರವೇದ್ಯವಾಗಿರುವುದರಿಂದ ಮಾಯಾವಾದಿಗಳು ಅಂಗೀಕರಿಸಿದ ಜೀವಬ್ರಹ್ಮೈಕ್ಯವು ಕೂಡ ಹೇಗೆ ಮಿಥ್ಯೆಯಾಗಲಾರದು ಎನ್ನುತ್ತಾರೆ.

ನ್ಯಾಯಸುಧಾ— ಹಾಗಾದರೆ ಮಿಥ್ಯಾಧರ್ಮಗಳನ್ನು ವಿಧಿಸತಕ್ಕ ವೇದಕ್ಕೇನೇ ಅಪ್ರಾಮಾಣ್ಯವೆಂದು ಯಾವುದು ಹೇಳಲ್ಪಟ್ಟದೋ, ಅದು ಅನಿಷ್ಟವಲ್ಲ. ತತ್ವಾವೇದಕ್ಕ,

ಅತತ್ವಾವೇದಕವೆಂದು ವೇದಭಾಗವು ಎರಡು ಪ್ರಕಾರ. ಅದರಲ್ಲಿ ಜೀವಬ್ರಹ್ಮರಿಗೆ ಐಕ್ಯವನ್ನು ಪ್ರತಿಪಾದಿಸತಕ್ಕ ವೇದಭಾಗವು ತತ್ವಾವೇದಕವು. ಬೇರೆ ಭಾಗವು ಅತತ್ವಾವೇದಕವು, ಎಂದು ನಾವು ಅಂಗೀಕರಿಸಿರುವೆವು ಎಂದಾಶಂಕಿಸಿದರೆ—

**ಮೂ ॥ ವೇದವೇದ್ಯಸ್ಯ ಮಿಥ್ಯಾತ್ವಂ ಯದಿ ನೈಕ್ಯಸ್ಯ ತತ್ಕಥಂ ।**
**ಧರ್ಮಾರೋಪೋಽಪಿ ಸಾಮಾನ್ಯಧರ್ಮಾದೀನಾಂ ಹಿ ದರ್ಶನೇ ॥**
**॥ ೪೯ ॥**

ಅ ॥ ವೇದವೇದ್ಯಸ್ಯ=ವೇದಗಳಿಂದ ತಿಳಿಯಲ್ಪಡತಕ್ಕ ಬ್ರಹ್ಮ ಸರ್ವಜ್ಞತ್ವಾದಿಗಳಿಗೆ, ಯದಿ=ಯಾವಪಕ್ಷದಲ್ಲಿ, ಮಿಥ್ಯಾತ್ವಂ=ಮಿಥ್ಯಾತ್ವವು ಹೇಳಲ್ಪಡುತ್ತದೋ, ತತ್=ಹಾಗಾದರೆ, ತತ್ = ಮಿಥ್ಯಾತ್ವವು, ಐಕ್ಯಸ್ಯ = ಜೀವಬ್ರಹ್ಮೈಕ್ಯಕ್ಕೆ, ಕಥಂ = ಹೇಗೆ, ನ=ಆಗಲಾರದು. (ಬ್ರಹ್ಮನಲ್ಲಿ ಧರ್ಮಗಳಿಗೆ ಪ್ರಾಪ್ತಿಯಿಲ್ಲವೆಂದು ಯಾವುದು ಹೇಳಲ್ಪಟ್ಟದೋ ಅದಯುಕ್ತವು. ಪ್ರಮಾಣತಃ ಪ್ರಾಪ್ತವಾಗದೆ ಇರುವುದಾದರೂ ಧರ್ಮಾರೋಪವು ಕೂಡಬಹುದು. ಜೀವನೇ ಬ್ರಹ್ಮನು. ಆತನು ಸ್ವಪ್ರಕಾಶನಾಗಿರುವುದರಿಂದ ತೋರಿಯೇ ತೋರುತ್ತಾನೆ. ಆದಕಾರಣ ಜೀವನಲ್ಲಿ ಧರ್ಮಾರೋಪವು ಅಯುಕ್ತವಲ್ಲ. ಆದಕಾರಣ ಆರೋಪಿತ ಧರ್ಮಗಳನ್ನು ಅನುವಾದ ಮಾಡಿಕೊಂಡು ನಿಷೇಧವು ಕೂಡುತ್ತದೆ. ಎಂದರೆ— ಬ್ರಹ್ಮನಲ್ಲಿ ಧರ್ಮಾರೋಪವು ಕೂಡಿದ್ದರೆ ಹೀಗೆ ಆಗುತ್ತಿತ್ತು; ಹೀಗೆ ಇಲ್ಲ. ಬ್ರಹ್ಮನು ಸರ್ವಧರ್ಮಗಳಿಂದ ವಿರಹಿತನಾಗಿರುತ್ತಾನೆ. ಧರ್ಮರಹಿತತ್ವವಿದ್ದರೂ ಆರೋಪವೇಕೆ ಕೂಡುವುದಿಲ್ಲ? ಎಂದರೆ—) ಸಾಮಾನ್ಯಧರ್ಮಾದೀನಾಂ=ಸಾಮಾನ್ಯ ಧರ್ಮ ಪ್ರಧಾನ ಇತ್ಯಾದಿಗಳ, ದರ್ಶನೇ=ದರ್ಶನವಾಗುತ್ತಿರಲು, ಧರ್ಮಾರೋಪೋಽಪಿ=ಧರ್ಮಾರೋಪವೂ ಕೂಡ, (ದೃಷ್ಟವಾಗಿದೆ.) ಆದುದರಿಂದ (ಪ್ರಮಾಣದಿಂದ ಪ್ರಾಪ್ತ್ಯಭಾವ ಮಾತ್ರವಲ್ಲ ಮತ್ತೆ) ನಿರ್ಧರ್ಮಕ ವಸ್ತುವಿನಲ್ಲಿ ಧರ್ಮಾರೋಪವೂ ಕೂಡ (ನೋಪಪದ್ಯತೇ=ಕೂಡುವುದಿಲ್ಲ.) ॥ ೪೯ ॥

ಹಿಂದೆ ಹೇಳಿದ್ದನ್ನೇ ವಿಸ್ತರಿಸಿ ಹೇಳುತ್ತಾರೆ.—

**ಮೂ ॥ ಇದಂ ತದಾದಿಧರ್ಮಿತ್ವೇ ಧರ್ಮೋಽನ್ಯಃ ಕಲ್ಪ್ಯತೇಽತ್ರ ಹಿ ।**
**ಸರ್ವಧರ್ಮವಿಹೀನಸ್ಯ ಧರ್ಮಾರೋಪಃ ಕ್ವ ದೃಶ್ಯತೇ ॥**
**ತದರ್ಥಂ ಯದಿ ಧರ್ಮಾಣಾಮಾರೋಪಃ ಸಾಽನವಸ್ಥಿತಿಃ ॥ ೫೦ ॥**

ಅ ॥ ಇದಂತದಾದಿಧರ್ಮಿತ್ವೇ=ಇದಂತ್ವ ತತ್ವ (ಆದಿ) ಸಾಧಾರಣಧರ್ಮ ಇವುಗಳನ್ನು ಕುರಿತು ಧರ್ಮಿತ್ವವು ದೃಷ್ಟವಾದರೆ, (ಪ್ರಧಾನಜ್ಞಾನವೂ ಕೂಡ ಇದ್ದರೆ) ಅತ್ರ = ಲೋಕದಲ್ಲಿ, ಅನ್ಯಃ=ಇತರವಾದ, ಧರ್ಮಃ=ಧರ್ಮವು, ಕಲ್ಪ್ಯತೇ ಹಿ=ಆರೋಪಿಸಲ್ಪಡುತ್ತದಷ್ಟೆ. (ಅಂದರೆ ಶುಕ್ತಿಯಲ್ಲಿ ರಜತತ್ವಾರೋಪವು ಕೇವಲ ಶುಕ್ತಿಜ್ಞಾನದಿಂದ ಆಗಲಾರದು. ಮತ್ತೆ ವಸ್ತುತಃ ರಜತತ್ವಧರ್ಮವುಳ್ಳ ಪ್ರಧಾನಜ್ಞಾನವಿದ್ದರೆ ಅಧಿಷ್ಠಾನವಾದ ಶುಕ್ತಿಶಕಲದಲ್ಲಿ ಪುರೋವರ್ತಿತ್ವ ಮೊದಲಾದ ಮತ್ತು ಪ್ರಧಾನಸಾಧಾರಣವಾದ, ಶುಕ್ಲಭಾಸ್ವರತ್ವ ಮೊದಲಾದ ಧರ್ಮವೂ ತೋರಿದರೇನೇ ಆಗುವುದು. ಹಾಗೆಯೇ ಸ್ಫಟಿಕದಲ್ಲಿ ಲೌಹಿತ್ಯಾರೋಪವೂ ಕೂಡ ವಸ್ತುತಃ ಲೌಹಿತ್ಯವುಳ್ಳ ಜಪಾಕುಸುಮಕ್ಕೂ (ಕೆಂಪುದಾಸನ ಹೂವಿಗೂ) ಸ್ಫಟಿಕದಲ್ಲಿ ಇದಂತ್ವ ಮೊದಲಾದುದಕ್ಕೂ ಪ್ರಧಾನ ಸನ್ನಿಧಾನಕ್ಕೂ ಜ್ಞಾನವಿದ್ದರೇನೇ ಆರೋಪವು ಕಂಡದೆ.)

ಸರ್ವಧರ್ಮವಿಹೀನಸ್ಯ=ಸರ್ವಧರ್ಮಗಳಿಂದ ವಿರಹಿತವಾದ ವಸ್ತುವಿಗೆ, ಧರ್ಮಾರೋಪಃ= ಧರ್ಮಾರೋಪವು, ಕ್ವ=ಎಲ್ಲಿ, ದೃಶ್ಯತೇ=ಕಾಣಲ್ಪಡುತ್ತದೆ. (ಧರ್ಮಾರೋಪವು, ಸಾಧಾರಣ ಧರ್ಮದರ್ಶನಾದಿಗಳೂ ಪ್ರಧಾನದರ್ಶನವೂ ಇದ್ದಲ್ಲಿಯೇ ಎಲ್ಲಾ ಕಡೆಗಳಲ್ಲಿಯೂ ಕಂಡು ಬಂದುದರಿಂದ ಈ ವ್ಯಾಪ್ತಿಗೆ ಬಾಧಕಗಳಾದ ಉಪಾಧಿವ್ಯಭಿಚಾರಗಳು ಕಾಣದೆ ಇರುವುದರಿಂದ ಧರ್ಮಾರೋಪಕ್ಕೆ ಪ್ರಧಾನದರ್ಶನಾದಿಗಳಿಂದ ವ್ಯಾಪ್ತಿಯು ನಿಶ್ಚಿತವಾಗುತ್ತದೆ.) (ಅಂದರೆ ಧರ್ಮಾರೋಪಕ್ಕೆ ಪ್ರಧಾನದರ್ಶನಾದಿಗಳು ವ್ಯಾಪಕವು. ಪ್ರಕೃತದಲ್ಲಿ ಅಂತಹುದು ಇಲ್ಲ. ಸಾರ್ವಜ್ಞಾದಿಗಳನ್ನೂ, ಪಾಪಲೇಶಾತ್ಯಂತಾಭಾವಾದಿಗಳನ್ನೂ ಬ್ರಹ್ಮನಿಂದ ಬೇರೆ ಕಡೆ ಅಂಗೀ ಕರಿಸಲಿಲ್ಲ. ಬ್ರಹ್ಮನಲ್ಲಿ ಪ್ರಧಾನ ಸಾಧಾರಣಧರ್ಮಾದಿಗಳನ್ನು ಅಂಗೀಕರಿಸಲಿಲ್ಲ. ಆದುದರಿಂದ ವ್ಯಾಪ್ಯವಾದ ಧರ್ಮಾರೋಪವು ಇಲ್ಲ.) ತದರ್ಥಂ=ಬ್ರಹ್ಮನಲ್ಲಿ ಧರ್ಮಾರೋಪಗಳ ಸಿದ್ಧಿಗಾಗಿ, ಯದಿ=ಯಾವ ಪಕ್ಷದಲ್ಲಿ, ಧರ್ಮಾಣಾಂ=ಧರ್ಮಗಳಿಗೆ, ಆರೋಪಃ=ಬೇರೆ ಆರೋಪವು, (ಕಲ್ಪಿಸಲ್ಪಡುತ್ತದೋ ಆಗ) ಸಾ=ಧರ್ಮಾರೋಪವು ಧರ್ಮಾಂತರಾರೋಪಾಧೀನವಾದುದು ಹೀಗೆ ಪ್ರಸಕ್ತವಾದ, ಅನವಸ್ಥಿತಿಃ=ಅನವಸ್ಥೆಯು (ಬರುವುದು.)

**ಟೀ ॥ ಸ. ರ. ವಿ.**— (1) ಪುರೋವರ್ತಿತ್ವಾದಿ ಧರ್ಮವಿಶಿಷ್ಟವಾದ ಅಪರೋಕ್ಷಾಧಿ ಷ್ಠಾನದಲ್ಲಿಯಾಗಲೀ ದೇಶಕಾಲಸ್ವರೂಪವ್ಯವಹಿತತ್ವಾದಿಗಳಿಂದ ವಿಶಿಷ್ಟವಾದ ಪರೋಕ್ಷಾಧಿಷ್ಠಾನ ದಲ್ಲಿಯಾಗಲೀ ಸಾಮಾನ್ಯ ಧರ್ಮಗ್ರಹಣದಿಂದಲೇ ರಜತಾದ್ಯಾರೋಪವು ದೃಷ್ಟವಾಗಿದೆ. ಹೊರತು ನಿರ್ವಿಶೇಷವಾದುದರಲ್ಲಿ ಯಾವುದಕ್ಕೂ ಆರೋಪವು ಕಂಡಿಲ್ಲ. (2) ಸರ್ವಜ್ಞತ್ವಾದಿ ಧರ್ಮಗಳ ಆರೋಪದಲ್ಲಿ ಕಾರಣವಾಗಿ, ಬ್ರಹ್ಮನಲ್ಲಿ ಸಾಮಾನ್ಯ ಧರ್ಮಾದ್ಯಾರೋಪವನ್ನು ಅಂಗೀ ಕರಿಸುವುದಾದರೆ ಆಗ ಆ ಆರೋಪವೂ ಸಾಮಾನ್ಯ ಧರ್ಮಾದ್ಯಾರೋಪಾಧೀನವಾಗಿರುವುದರಿಂದ ಅನವಸ್ಥೆಯು ಬರಬೇಕಾಗುವುದು.

**ನ್ಯಾಯಸುಧಾ**— ಹಿಂದೆ ಹೇಳಿದ ಪ್ರಕಾರ ಬ್ರಹ್ಮನಲ್ಲಿ ಧರ್ಮಾರೋಪವು ಕೂಡದಿರುವು ದರಿಂದ ಸ್ವತಃ ಧರ್ಮಗಳು ಇಲ್ಲವಾದರೆ ಬ್ರಹ್ಮನಲ್ಲಿ ಸರ್ವಜ್ಞತ್ವಾದಿ ಧರ್ಮವಿಧಾಯಕವಾದ 'ಯಃ ಸರ್ವಜ್ಞಃ' ಇತ್ಯಾದಿ ವೇದಗಳಿಗೆ ಅಪ್ರಾಮಾಣ್ಯಾದಿಗಳು ಪ್ರಸಕ್ತವಾಗುವುದರಿಂದ ಬ್ರಹ್ಮನು ನಿರ್ಧರ್ಮಕನಲ್ಲವೆಂದು ಸಿದ್ಧವಾಯಿತು. ॥ ೫೦ ॥

**ಸ. ರ. ವಿ.**— (1) ಹಾಗಾದರೆ ಜಗನ್ನಿಯಾಮಕತ್ವ, ಸರ್ವಜ್ಞತ್ವ ಮೊದಲಾದುದು ಮಿಥ್ಯೆಯಾದುದರಿಂದ ಅದನ್ನು ಪ್ರತಿಪಾದಿಸತಕ್ಕ ವಾಕ್ಯವು ಅಯಥಾರ್ಥವಾಗಬೇಕಾಗುವುದು. ಎಂದು ಯಾವುದು ಹೇಳಲ್ಪಟ್ಟದೋ, ಅದು ಇಷ್ಟವೇ. ಪ್ರಮಾತೃ ಪ್ರಮಾಣ, ಪ್ರಮೇಯ ರೂಪ ವಾದದ್ದೆಲ್ಲವೂ ತೋರುತ್ತದೆನ್ನುವ ಹೇತುವಿನಿಂದ ಅದಕ್ಕೆ ಶುಕ್ತಿರಜತದಂತೆ ಭ್ರಾಂತತ್ವವನ್ನು ಅಂಗೀಕರಿಸುತ್ತೇವೆ. ಎಂದರೆ—

**ನ್ಯಾಯಸುಧಾ**— ಸಾರ್ವಜ್ಞಾದಿಗಳಿಗೆ ಮಿಥ್ಯಾತ್ವವು ಸಿದ್ಧಿಯಾಗುವುದಕ್ಕಾಗಿ ಜಗತ್ತಿಗೆ ಭ್ರಾಂತಿಕಲ್ಪಿತತ್ವವನ್ನು ಏನು ಹೇಳುವರೋ, ಅದನ್ನು ದೂಷಿಸುವುದಕ್ಕಾಗಿ ಈಶ ತಜ್ಜಾಜ್ಞನೇತ್ಯಾದಿ ಉತ್ತರ ಗ್ರಂಥವು. ಹೇಗೆಂದರೆ— ಜಗತ್ತು ಭ್ರಾಂತಿಸಿದ್ಧವು ಎಂದು ಹೇಳುವವನು ಆ ವಿಷಯದಲ್ಲಿ ಪ್ರಮಾಣವನ್ನು ಹೇಳಬೇಕು. ಆ ಪ್ರಮಾಣವು ೧ ಪ್ರತ್ಯಕ್ಷವೋ, ೨ ಅನುಮಾನವೋ, ೩ ಆಗಮವೋ ಅವುಗಳಲ್ಲಿ ೧ ಪ್ರತ್ಯಕ್ಷವು ಜಗತ್ತು ಸತ್ಯವೆಂದೇ ಗ್ರಹಿಸುವುದರಿಂದ ಜಗತ್ತು ಭ್ರಾಂತಿ ಸಿದ್ಧವು ಎನ್ನುವಲ್ಲಿ ಪ್ರಮಾಣವಾಗಲಾರದು. ೨ ಅನುಮಾನವೂ ಆಗಲಾರದು. ಶೂನ್ಯವಾದಿ ಗಳ ಮತವನ್ನು ನಿರಾಕರಿಸುವಾಗಲೇ ಅನುಮಾನವು ನಿರಸ್ತವಾಗಿದೆ. ಇನ್ನು ಅಧಿಕದೂಷಣ ವನ್ನು ಹೇಳುವುದಕ್ಕಾಗಿ ಹೇಳುತ್ತಾರೆ.—

ಮೂ || ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವಿಣಃ || ೫೧ ||
ಭ್ರಾಂತಿರ್ವಿಶ್ವಸ್ಯ ಯೇನೈವ ಮಾನಾಭಾಸೇನ ಕಲ್ಪ್ಯತೇ |
ತನ್ಮಾತ್ರಸ್ಯಾನ್ಯಥಾಭಾವೇ ಕಿಂ ನ ಸ್ಯಾದ್ವಿಶ್ವಸತ್ಯತಾ || ೫೨ ||
ಯೇನೇದಂ ಕಲ್ಪ್ಯತೇ ಭ್ರಾಂತಂ ಭ್ರಾಂತಿಸ್ತಸ್ಯೈವ ಕಿಂ ನ ಸಾ |
ಭ್ರಾಂತತ್ವೇ ತಸ್ಯ ವಿಶ್ವಾರೇಃರೀಶಾದ್ಯಭ್ರಾಂತಮೇವ ಹಿ || ೫೩ ||

ಅ || ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವಿಣಃ, ಈಶ = ಬ್ರಹ್ಮನು, ತಜ್ಜ್ಞಾನ = ಈಶ್ವರಜ್ಞಾನವು(ಅಂದರೆ ನಿತ್ಯಜ್ಞಾನಮಾತ್ರವು) ವೇದ = ಆಗಮವು ಮತ್ತು ವೇದಜನ್ಯ ಜ್ಞಾನವು, ಅಕ್ಷಜ = ಪ್ರತ್ಯಕ್ಷಜ್ಞಾನವು, ಮತ್ತು ಅರ್ಥೇಂದ್ರಿಯಸನ್ನಿಕರ್ಷವು, ಅನುಮಾ = ಅನುಮಾನವು ಮತು ಅನುಮಿತಿಯು, ಮಾತೃ = ಪ್ರಮೆಯುಳ್ಳ ಜೀವನು, ಇವರೇ, ಪೂರ್ವಿಣಃ = ಪೂರ್ವವಾಗಿವುಳ್ಳ, (ಅಂದರೆ ಪ್ರಮಾತೃ, ಪ್ರಮಾಣ, ಪ್ರಮೇಯರೂಪವಾದ) ಅಥವಾ ಈಶವಾಕ್ಯ ಈಶಾದಿಜ್ಞಾನ, ಅಪೌರುಷೇಯಾಗಮ, ಪ್ರತ್ಯಕ್ಷ, ಅನುಮಾನ, ಅನೀಶ್ವರ ಪ್ರಮಾತೃವಾಕ್ಯ ಇವುಗಳೇ ಪ್ರಮಾಕರಣವಾಗಿವುಳ್ಳ (ಅಂದರೆ ಸರ್ವ ಪ್ರಮಾಣಗಳಿಂದ ಸಿದ್ಧವಾದ) ವಿಶ್ವಸ್ಯ = ಜಗತ್ತಿಗೆ, ಭ್ರಾಂತಿಃ = ಭ್ರಾಂತಿಕಲ್ಪಿತತ್ವವು, ಯೇನೈವ ಮಾನಾಭಾಸೇನ = ಯಾವ ಒಂದೇ ಆದ ಪ್ರಮಾಣದಂತೆ ತೋರುವ, ಅಂದರೆ— ಸ್ವಭಾವತಃ ದುರ್ಬಲವಾದ ಅನುಮಾನದಿಂದ, ಕಲ್ಪ್ಯತೇ = ಕಲ್ಪಿಸಲ್ಪಡುತ್ತದೋ, ತನ್ಮಾತ್ರಸ್ಯ = ಆ ಒಂದೇ ಪ್ರಮಾಣಕ್ಕೆ, ಅನ್ಯಥಾ ಭಾವೇ = ಅಪ್ರಾಮಾಣ್ಯವಿದ್ದರೆ, ವಿಶ್ವಸತ್ಯತಾ = ಜಗತ್ಸತ್ಯತ್ವವು, ಕಿಂ = ಏತಕ್ಕೆ, ನ ಸ್ಯಾತ್ = ಆಗಲಾರದು? (ಅಂದರೆ ೧ ಪ್ರಪಂಚವು ಸ್ವಭಾವಪ್ರಯುಕ್ತವೂ, ಬಹುತ್ವಪ್ರಯುಕ್ತವೂ, ಪಾಬಲ್ಯವುಳ್ಳ ಅಂದರೆ ಸ್ವಾಭಾವಿಕವಾಗಿಯೂ ಹೆಚ್ಚು ಇದ್ದಪ್ರಯುಕ್ತವೂ ಪ್ರಬಲಗಳಾದ ಈಶವಾಕ್ಯ ಮೊದಲಾದ ಸರ್ವ ಪ್ರಮಾಣಗಳಿಂದ ಸತ್ಯವೆಂದೇ ಅವಗತವಾಗಿದೆ. ೨ 'ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್' ಇದುಮೊದಲಾದ ಪ್ರಪಂಚಮಿಥ್ಯಾತ್ವಾನುಮಾನವಾದರೂ ಸ್ವಭಾವ ಏಕತ್ವಗಳಿಂದ ದುರ್ಬಲವಾಗಿದೆ. ತಥಾಚ ಪ್ರಬಲಪ್ರಮಾಣಗಳಿಂದ ವಿರುದ್ಧವಾದ ಅನುಮಾನವು ಅಪ್ರಮಾಣವೆಂದೇ ಕೂಡುವುದರಿಂದ ಜಗತ್ತಿಗೆ ಸತ್ಯತ್ವವೇ ಯುಕ್ತವು.) (ಆಗಮವೂಕೂಡ ಜಗತ್ತು ಭ್ರಾಂತಿಸಿದ್ಧವು ಎನ್ನುವಲ್ಲಿ ಪ್ರಮಾಣವಲ್ಲ. ಏಕೆಂದರೆ- ಆ ಆಗಮವು೧ ಗೌಡಪಾದ ಮೊದಲಾದ ಪುರುಷರು ಮಾಡಿದ್ದೋ, ೨ ವೇದಮೊದಲಾದುದೋ, ಇವುಗಳಲ್ಲಿ ೧ನೇದ್ದನ್ನು ದೂಷಿಸುತ್ತಾರೆ.) ಯೇನ = ಯಾವ ಗೌಡಪಾದಾದಿಗಳಿಂದ, ಇದಂ = ಹಿಂದೆ ಹೇಳಿದ ಈಶ ಮೊದಲಾದ ಜಗತ್ತು, ಭ್ರಾಂತಂ = ಭ್ರಾಂತಿಸಿದ್ಧವೆಂದು, ಕಲ್ಪ್ಯತೇ = ಕಲ್ಪಿಸಲ್ಪಡುತ್ತದೋ, (ಕಲ್ಪಿಸಿಯೂ ಹಾಗೆ ವಾಕ್ಯವು ನಿರ್ಮಿಸಲ್ಪಡುತ್ತದೋ) ತಸ್ಯೈವ = ಆತನಿಗೇನೇ, ಸಾ = ಆ ಕಲ್ಪನೆಯು, ಭ್ರಾಂತಿಃ = ಅಯಥಾರ್ಥವೆಂದು, ಕಿಂ ನ = ಏಕೆ ಆಗಲಾರದು? (ಅಂದರೆ— ಈಶವಾಕ್ಯ ಮೊದಲಾದ ಪ್ರಮಾಣಗಳಿಂದ ಈಶಾದಿ ಪ್ರಪಂಚವು ಸತ್ಯವೆಂದು ಅವಗತವಾಗಿದೆ ಆ ಪ್ರಮಾಣ ವಿರುದ್ಧವಾದ ಗೌಡಪಾದಾದಿಗಳ ವಿಶ್ವಮಿಥ್ಯಾತ್ವಪ್ರತೀತಿಯು ಭ್ರಾಂತಿಯೇ.) ವಿಶ್ವಾರೇಃ = ವಿಶ್ವಮಿಥ್ಯಾತ್ವವನ್ನು ಪ್ರತಿಪಾದಿಸತಕ್ಕ, ತಸ್ಯ = ಆ ಗೌಡಪಾದಾದಿಗಳಿಗೆ, ಭ್ರಾಂತತ್ವೇ = ಭ್ರಾಂತತ್ವವು ಸಿದ್ಧವಾದರೆ (ಅಂದರೆ ಭ್ರಾಂತಿಮೂಲಕವಾದ ಗೌಡಪಾದಾದಿಗಳ ವಾಕ್ಯವು ಅಪ್ರಮಾಣವಾಗಿರುವುದರಿಂದ ಅದರಿಂದ ಜಗನ್ಮಿಥ್ಯಾತ್ವವು ಸಿದ್ಧಿಸದೆ ಇರಲು ಈಶವಾಕ್ಯ ಮೊದಲಾದ ಪ್ರಮಾಣಗಳಿಂದ) ಈಶಾದಿ = ಈಶ ಮೊದಲಾದ ಜಗತ್ತು, ಅಭ್ರಾಂತಮೇವ = ಭ್ರಾಂತವಲ್ಲ ಸತ್ಯವೆಂದೇ ಸಿದ್ಧಿಸುವದು. ಹಿ = ಪ್ರಸಿದ್ಧವು.

**ತಾ ॥ ಸ. ರ. ವಿ—** (1) ಜಗತ್ತು ಭ್ರಾಂತಿಕಲ್ಪಿತವು ಎಂದು ಸಾಧಿಸತಕ್ಕದು ಯಾವುದು ಪ್ರಮಾಣವು ಹೇಳಲ್ಪಟ್ಟದೋ ಅದೇವೇ ಪ್ರತ್ಯಕ್ಷ ಮೊದಲಾದ ಅನೇಕ ಪ್ರಮಾಣಗಳಿಂದ ವಿರುದ್ಧವಾಗಿರುವುದರಿಂದ ಅಯಥಾರ್ಥವು. ಆದಕಾರಣ ಅದು ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸಿಕೊಡುವುದಿಲ್ಲ. ಯಾವುದು ಬಹುಪ್ರಮಾಣಗಳಿಂದ ವಿರುದ್ಧವೋ ಅದು ಅಪ್ರಮಾಣವಾಗಿ ಕಂಡದೆ. ಉದಾ—ಒಬ್ಬನ ಮಾತು ಅನೇಕ ಮಂದಿಯ ವಚನವಿರುದ್ಧವಾದುದು ಅಪ್ರಮಾಣವಷ್ಟೆ! ಸರ್ವರಿಂದ ಸತ್ಯವೆಂದೇ ವ್ಯವಹರಿಸಲ್ಪಡತಕ್ಕ ಜಗತ್ತು ಭ್ರಾಂತಿಪರಿಕಲ್ಪಿತವೆನ್ನುವುದು ಕೂಡಲಾರದು. ಅಲ್ಲದೆ ಸರ್ವಜನರೂ ಭ್ರಾಂತಿಯಿಂದಲೇ ಜಗತ್ತನ್ನು ವ್ಯವಹರಿಸುತ್ತಾರೆ, ಎನ್ನುವ ಮಾಯಾವಾದಿಯ ಕಲ್ಪನೆಯೇ ಭ್ರಾಂತಿಯೆಂದು ಏಕೆ ಆಗಲಾರದು? ಮತ್ತು ಜಗತ್ತನ್ನ ಅಪಲಾಪಮಾಡುವ ಮಾಯಾವಾದಿಯು ಭ್ರಾಂತನಾದರೆ ಜಗನ್ನಿಯಾಮಕರಾದ ವಿಷ್ಣ್ವಾದಿಗಳು ಜಗತ್ತನ್ನು ಭ್ರಾಂತಿಪರಿಕಲ್ಪಿತವಲ್ಲವೆಂದೇ ವ್ಯವಹರಿಸುತ್ತಾರೆಂದು ಸಿದ್ಧಿಸುವುದು, ಅಂದರೆ ಜಗತ್ತು ಸತ್ಯವೆಂದೇ ಸಿದ್ಧಿಸುತ್ತದೆ. ॥ ೫೧ ॥ ೫೨ ॥ ೫೩ ॥

**ಸ. ರ. ವಿ—** ಹಾಗಾದರೆ ಮಾಯಾವಾದಿಯೇ ಭ್ರಾಂತಿಯಿಲ್ಲದಿರುವವನು ಜಗದೀಶಾದಿಗಳಾದರೂ ಭ್ರಾಂತಿಯಿರುವವರು ಎಂದು ಏಕೆ ಆಗಲಾರದು? ಎಂದರೆ—

**ನ್ಯಾಯಸುಧಾ—** ಹಾಗಾದರೆ ಈಶ್ವರವಾಕ್ಯವಿರೋಧದಿಂದ ಗೌಡಪಾದಾದಿಗಳಿಗೆ ಭ್ರಾಂತತ್ವವನ್ನು ಏಕೆ ಕಲ್ಪಿಸಬೇಕು? ಗೌಡಪಾದಾದಿಗಳ ವಾಕ್ಯವಿರೋಧದಿಂದ ಈಶ್ವರಾದಿಗಳಿಗೆ ವಿಶ್ವಸತ್ಯತ್ವಪ್ರತೀತಿಯೇ ಭ್ರಾಂತಿಯೆಂದು ಏಕೆ ಕಲ್ಪಿಸಕೂಡದು? ಎಂದರೆ—

**ಮೂ ॥ ಭವೇಯುರ್ಭ್ರಾಂತಯೋ ನೃಣಾಂ ನೈವೇಶಾದೇಃ ಕಥಂಚನ ।**
**ಸತ್ಯತ್ವಮಕ್ಷಜಂ ಪ್ರಾಪ್ತಂ ಯದಿ ಭ್ರಾಂತಮಿತೀಷ್ಯತೇ ॥ ೫೪ ॥**
**ಪ್ರಾಮಾಣ್ಯಮಾಗಮಸ್ಯಾಪಿ ಪ್ರತ್ಯಕ್ಷಾದನ್ಯತಃ ಕುತಃ ।**
**ಸಾಕ್ಷಿಪ್ರತ್ಯಕ್ಷತೋ ಹ್ಯೇವ ಮಾನಾನಾಂ ಮಾನತೇಯತೇ ।**
**ಸಾಕ್ಷಿಣಃ ಸ್ವಪ್ರಕಾಶತ್ವಮನವಸ್ಥಾ ತತೋ ನ ಹಿ ॥ ೫೫ ॥**

**ಅ ॥** ನೃಣಾಂ=ಮನುಷ್ಯರಿಗೆ, (ಬಾಹ್ಯಾಭ್ಯಂತರ ಕಾರಣಸಾಮಗ್ರಿಗಳು ಇದ್ದುದರಿಂದ) ಭ್ರಾಂತಯಃ = ಭ್ರಾಂತಿಗಳು, ಭವೇಯುಃ=ಆಗುವುವು. ಈಶಾದೇಃ=ಈಶ ಮೊದಲಾದವರಿಗೆ, ಕಥಂಚನ = ಯಾವಪ್ರಕಾರದಿಂದಲೂ, (ಇಂದ್ರಿಯದೋಷ ಮೊದಲಾದ ಬಾಹ್ಯಕಾರಣವೂ ಅಜ್ಞಾನಮೊದಲಾದ ಆಂತರಕಾರಣವೂ ಕೂಡದಿರುವುದರಿಂದ) ಭ್ರಾಂತಯಃ=ಭ್ರಾಂತಿಗಳು, ನೈವ=ಆಗಲಾರವು. (ಈಶಾದಿಗಳು ವಿಪ್ರಲಂಭಕರು ಎಂದರೆ ಹಾಗೆ ಹೇಳಕೂಡದು. ಕಲ್ಪಕವಿಲ್ಲ.) (ಹಾಗಾದರೆ ನೇಹ ನಾನಾ ಇದುಮೊದಲಾದ ಅದ್ವೈತಪರವಾದ ವೇದಮೊದಲಾದ ಆಗಮವು ಎಲ್ಲಾ ಜಗತ್ತಿಗೆ ಮಿಥ್ಯಾತ್ವವಿಷಯದಲ್ಲಿ ಪ್ರಮಾಣವಾಗಲಿ ಎಂದರೆ,—ಹಾಗೆ ಹೇಳಕೂಡದು. ಅದು ಜಗತ್ಸತ್ಯತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷದಿಂದ ಬಾಧಿತವಾಗಿ ಜಗನ್ಮಿಥ್ಯಾತ್ವರೂಪಾರ್ಥದಲ್ಲಿ ತಾತ್ಪರ್ಯವುಳ್ಳದ್ದಲ್ಲ. ಹಾಗಾದರೆ ಪ್ರತ್ಯಕ್ಷತ್ವವು ತಾತ್ಕಾಲಿಕ ಪ್ರಮಾಣವು. ಪುನಃ ಆತ್ಯಂತಿಕ ಪ್ರಮಾಣವಲ್ಲ. ವೇದವಾದರೂ ಹಾಗಲ್ಲ, ಸ್ವತಃಪ್ರಮಾಣವೇ. ಆದಕಾರಣ ಪ್ರಬಲವಾದ ವೇದದಿಂದ ಬಾಧಿತವಾದಪ್ರಯುಕ್ತ ಜಗತ್ಸತ್ಯತ್ವವು ಪ್ರತ್ಯಕ್ಷ ಪ್ರಾಪ್ತವಾದಾಗ್ಯೂ ಭ್ರಾಂತಿಸಿದ್ಧವೆಂದೇ ಅಂಗೀಕರಿಸುವುದು ಯೋಗ್ಯವು ಎಂದರೆ—) ಅಕ್ಷಜಪ್ರಾಪ್ತಂ=ಪ್ರತ್ಯಕ್ಷಪ್ರಾಪ್ತವಾದ, ಸತ್ಯತ್ವಂ=ಜಗತ್ಸತ್ಯತ್ವವು, (ಆಗನುಬಲವನ್ನು ಆಶ್ರಯಿಸಿ) ಯದಿ=ಯಾವ

ಪಕ್ಷದಲ್ಲಿ, ಭ್ರಾಂತಮಿತಿ=ಭ್ರಾಂತವೆಂದು, ಇಷ್ಯತೇ=ಅಂಗೀಕರಿಸಲ್ಪಡುತ್ತದೋ, (ತತ್=ಆ ಭ್ರಾಂತತ್ವವು, ನ=ಕೂಡುವುದಿಲ್ಲ.) (ಏಕೆ ಕೂಡುವುದಿಲ್ಲವೆಂದರೆ) ಆಗಮಸ್ಯಾಪಿ=ಆಗಮಕ್ಕೂ ಕೂಡ, ಪ್ರಾಮಾಣ್ಯಂ=ಪ್ರಾಮಾಣ್ಯವು, ಪ್ರತ್ಯಕ್ಷಾತ್=ಪ್ರತ್ಯಕ್ಷದ್ವೆಶೆಯಿಂದ, ಅನ್ಯತಃ=ಇತರ ದ್ವೆಶೆಯಿಂದ, ಕುತಃ=ಯಾವುದರಿಂದ ಸಿದ್ಧವಾಗುವುದು (ಯಾವುದರಿಂದಲೂ ಸಿದ್ಧವಾಗ ಲಾರದು.) ಕೇವಲ ಪ್ರತ್ಯಕ್ಷದ ಪ್ರಾಮಾಣ್ಯಮಾತ್ರವಲ್ಲ, ಮತ್ತೆ ಆಗಮದ ಪ್ರಾಮಾಣ್ಯವೂ ಕೂಡ ಪ್ರತ್ಯಕ್ಷದಿಂದಲೇ ಸಿದ್ಧವಾಗುವುದು. ಬೇರೆ ಯಾವುದರಿಂದಲೂ ಸಿದ್ಧವಾಗಲಾರದು. ಅದು ಹೇಗೆಂದರೆ— ಸಾಕ್ಷಿಪ್ರತ್ಯಕ್ಷತಃ=ಸಾಕ್ಷಿಪ್ರತ್ಯಕ್ಷದಿಂದಲೇ, ಮಾನಾನಾಂ=ಎಲ್ಲಾ ಪ್ರಮಾಣ ಗಳಿಗೆ, ಮಾನತಾ=ಪ್ರಾಮಾಣ್ಯವು, ಈಯತೇ=ತೋರುತ್ತದೆ. ಹಿ=ಸಾಕ್ಷಿಸಿದ್ಧವು. (ಅದನ್ನು ವಿವರಿಸುತ್ತಾರೆ—) ಸಾಕ್ಷಿಣಃ=ಸಾಕ್ಷೀಂದ್ರಿಯಕ್ಕೆ, ಸ್ವಪ್ರಕಾಶತ್ವಂ=ಸ್ವಪ್ರಕಾಶತ್ವವು, ತತಃ= ಆದಕಾರಣ, ಅನವಸ್ಥಾ=ಅನವಸ್ಥೆಯು, ನ ಹಿ=ಇಲ್ಲವಷ್ಟೆ.

**ತಾ || ಸ. ರ. ವಿ—** (1) ಹಾಗಾದರೆ ಸರ್ವ ಲೋಕಪ್ರತ್ಯಕ್ಷಸಿದ್ಧವಾದ ಜಗತ್ಸತ್ಯತ್ವ ವನ್ನು ಅನುಮಾನದಿಂದಲೇ ಬಾಧಿಸಲಿಕ್ಕೆ ಶಕ್ಯವಾಗದಿರಲಿ, ಆದರೆ ಅದ್ವೈತಾಗಮವು ಜಗತ್ಸತ್ಯತ್ವ ವನ್ನು ಬಾಧಿಸುವುದು. ಅನುಮಾನದಂತೆ ಆಗಮವು ಪ್ರತ್ಯಕ್ಷವನ್ನುಪಜೀವಿಸಿಕೊಂಡಿಲ್ಲವೆಂದರೆ- ಆಗಮದಿಂದ ಸರ್ವಪ್ರತ್ಯಕ್ಷಕ್ಕೂ ಬಾಧ ಹೇಳುವುದಾದರೆ ಆಗಮದ ಸ್ವರೂಪವೂ ಪ್ರಾಮಾಣ್ಯವೂ ಕೂಡ ಪ್ರತ್ಯಕ್ಷವಿಶೇಷದಿಂದ ಗೃಹೀತವಾದುದು ಸಿದ್ಧಿಸದೇನೇ ಹೋಗಬೇಕಾಗಿರುವುದರಿಂದ ಜಗತ್ಸತ್ಯತ್ವವನ್ನು ಹೇಗೆ ಬಾಧಿಸುವುದು?

**ತಾ || ನ್ಯಾಯಸುಧಾ—** (1) ಪ್ರಮಾಣಗಳ ಪ್ರಾಮಾಣ್ಯವು ಸತ್ತಾಮಾತ್ರದಿಂದ ನಿಶ್ಶಂಕ ವ್ಯವಹಾರಕ್ಕೆ ಕಾರಣವಲ್ಲ, ಮತ್ತೆ ಪ್ರಮಿತವಾದುದಾಗಿಯೇ ಬಾಹ್ಯಪ್ರತ್ಯಕ್ಷಾದಿಗಳೇ ಸಾಮಾನ್ಯಜ್ಞಾನಕ್ಕೆ ಸಾಧನವಲ್ಲ, ಅದರ ಪ್ರಾಮಾಣ್ಯಪ್ರಮಿತಿಯೂ ಕೂಡ ಹಿಂದೆ ಹೇಳಿದ ನ್ಯಾಯದಿಂದ ಅವಶ್ಯಕವೇ. ಬಾಹ್ಯಪ್ರತ್ಯಕ್ಷ ಪ್ರಾಮಾಣ್ಯವು ತನ್ನಿಂದಲೇ ಗ್ರಾಹ್ಯವಾದುದಲ್ಲ. ಅದು ಅಚೇತನವಾಗಿರುವುದರಿಂದ ಅದಕ್ಕೆ ಚೇತನಧರ್ಮವಾದ ಸ್ವಪ್ರಕಾಶತ್ವವು ಕೂಡಲಾರದು. ಅದರ ಪ್ರಾಮಾಣ್ಯವನ್ನು ಗ್ರಹಿಸುವುದಕ್ಕಾಗಿ ಪ್ರತ್ಯಕ್ಷಾಂತರವನ್ನು ಅಂಗೀಕರಿಸಿದರೆ ಅಲ್ಲಿಯೂ ಪ್ರಾಮಾಣ್ಯಗ್ರಹಣಕ್ಕಾಗಿ ಮತ್ತೊಂದು ಪ್ರತ್ಯಕ್ಷವನ್ನು ಒಪ್ಪಬೇಕಾಗುವುದು ಎಂದು ಪ್ರಾಮಾಣ್ಯ ಗ್ರಾಹಕ ಪರಂಪರೇಗೆ ವಿಶ್ರಾಂತಿಯಿಲ್ಲದಿರುವುದರಿಂದ ಅನವಸ್ಥೆಯು ಬರುವುದು. ಸರ್ವ ಪ್ರಮಾಣಪ್ರಾಮಾಣ್ಯವು ಸಾಕ್ಷಿವೇದ್ಯವೆಂದು ಹೇಳಿದರೆ ಯಾವ ದೋಷವೂ ಇಲ್ಲ. (2) ಸಾಕ್ಷಿಯು ಚೈತನ್ಯರೂಪವಾದುದರಿಂದ ಸ್ವಪ್ರಕಾಶವಾಗಿದೆ. ಪ್ರಾಮಾಣ್ಯವು ಜ್ಞಾನಗ್ರಾಹಕಗ್ರಾಹ್ಯವಾದುದ ರಿಂದ ತನ್ನ ಪ್ರಾಮಾಣ್ಯವನ್ನು ತಾನೆ ಗ್ರಹಿಸುತ್ತದೆ. ಆದಕಾರಣ ಗ್ರಾಹಕಪರಂಪರಾ ವಿಶ್ರಾಂತ್ಯಭಾವಪ್ರಯುಕ್ತವಾದ ಅನವಸ್ಥೆಯು ಬರುವುದಿಲ್ಲ. ಆದುದರಿಂದ ಎಲ್ಲಾ ಪ್ರಮಾಣಗಳ ಪ್ರಾಮಾಣ್ಯವು ಸಾಕ್ಷಿವೇದ್ಯವೆಂದೇ ಅಂಗೀಕರಿಸಬೇಕು ॥ ೩೪ ॥ ೩೫ ॥

**ಸ. ರ. ವಿ.—** ಹಾಗಾದರೆ ಬಾಧವು ಬರುವ ತನಕ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ಇದ್ದೇ ಇದೆ. ಆ ಪ್ರತ್ಯಕ್ಷದಿಂದ ನಿಶ್ಚಿತ ಪ್ರಾಮಾಣ್ಯವುಳ್ಳ ಆಗಮಕ್ಕೆ ಅದ್ವೈತದಲ್ಲಿ ಪ್ರಾಮಾಣ್ಯವು ಯುಕ್ತವೇ ಎಂದಾಶಂಕಿಸಿದರೆ—

**ನ್ಯಾಯಸುಧಾ—** (1) ಹೀಗೆ ಪ್ರತ್ಯಕ್ಷ, ಆಗಮಗಳ ಪ್ರಾಮಾಣ್ಯವು ಸಾಕ್ಷಿಪ್ರತ್ಯಕ ವೇದ್ಯವಾಗಲಿ, ಆದಾಗ್ಯೂ ಹಿಂದೆ ಹೇಳಿದ ಪ್ರಕಾರ ಪ್ರಬಲವಾದ ಆಗಮದಿಂದ ವಿರೋಧ ವಿದ್ದರೆ ದುರ್ಬಲವಾದ ಪ್ರತ್ಯಕ್ಷಕ್ಕೆ ಏಕೆ ಬಾಧವಿಲ್ಲ ಎಂದರೆ— ಹಿಂದೆ ಹೇಳಿದ ಪ್ರತ್ಯಕ್ಷಕ್ಕೆ

ದೌರ್ಬಲ್ಯ, ಆಗಮಕ್ಕೆ, ಪ್ರಾಬಲ್ಯ—ಇವುಗಳು ಯುಕ್ತಗಳಾಗಿದ್ದರೆ ಪ್ರತ್ಯಕ್ಷ, ಆಗಮಗಳಿಗೆ ಬಾಧ್ಯಬಾಧಕಭಾವವು ಕೂಡುತ್ತಿತ್ತು. ಎರಡರ ಪ್ರಾಮಾಣ್ಯವೂ ಸಾಕ್ಷಿವೇದ್ಯವಾಗಿರುವುದರಿಂದ ಆ ಪ್ರಾಬಲ್ಯ-ದೌರ್ಬಲ್ಯಗಳು ಕೂಡಲಾರವು ಎನ್ನುವ ಅಭಿಪ್ರಾಯದಿಂದ ಪ್ರತ್ಯಕ್ಷಕ್ಕೆ ತಾತ್ಕಾಲಿಕ ಪ್ರಾಮಾಣ್ಯವೂ, ಆಗಮಕ್ಕೆ ಆತ್ಯಂತಿಕ ಪ್ರಾಮಾಣ್ಯವೂ ಎನ್ನುವ ವಿಭಾಗವನ್ನು ತಿರಸ್ಕರಿಸುತ್ತಾರೆ.

**ಮೂ ॥ ತಾತ್ಕಾಲಿಕಂ ಪ್ರಮಾಣತ್ವಂ ಅಕ್ಷಜಸ್ಯ ಯದಾ ಭವೇತ್ ॥ ೫೬ ॥**
**ಐಕ್ಯಾಗಮಸ್ಯ ಕಿಂ ನ ಸ್ಯಾತ್ತಸ್ಯಾಪ್ಯೇತಾದೃಶಂ ಯದಿ ।**
**ಐಕ್ಯಪ್ರಮಾಣ (ಪ್ರಾಮಾಣ್ಯ) ಮಿಥ್ಯಾತ್ವಂ ಯದಾ ವಿಶ್ವಸ್ಯ ಸತ್ಯತಾ ॥ ೫೭ ॥**

ಅ ॥ ಅಕ್ಷಜಸ್ಯ = ಜಗತ್ಸತ್ಯತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷದ, ಪ್ರಮಾಣತ್ವಂ = ಪ್ರಾಮಾಣ್ಯವು, (ಸಾಕ್ಷಿಗೃಹೀತವಾದುದಾಗ್ಯೂ) ತಾತ್ಕಾಲಿಕಂ=ತಾತ್ಕಾಲಿಕವೇ, ಯದಾ= ಯಾವ ಪಕ್ಷದಲ್ಲಿ, ಭವೇತ್=ಆಗುವುದೋ, (ಹಾಗಾದರೆ) ಐಕ್ಯಾಗಮಸ್ಯ=ಐಕ್ಯಾಗಮದ, ಪ್ರಮಾಣತ್ವಂ=ಪ್ರಾಮಾಣ್ಯವೂ ಕೂಡ (ಸಾಕ್ಷಿಗೃಹೀತವೇ ಆಗಿರುವುದರಿಂದ), ತಾತ್ಕಾಲಿಕಂ= ತಾತ್ಕಾಲಿಕವು, ಕಿಂ ನ ಸ್ಯಾತ್=ಏಕೆ ಆಗಲಾರದು? (ತಾತ್ಕಾಲಿಕವು ಆಗಿಯೇ ಆಗುವುದು. ಅಂತೂ ಹಿಂದೆ ಹೇಳಿದ ವಿಭಾಗವು ಸಿದ್ಧಿಸಲಾರದು). (ಹಾಗಾದರೆ ಐಕ್ಯಾಗಮ ಪ್ರಮಾಣವೂ ಕೂಡ ತಾತ್ಕಾಲಿಕವೇ. ಆದರೂ ಪ್ರತ್ಯಕ್ಷವನ್ನು ಆಭಾಸೀಕರಿಸಿ ನಿವೃತ್ತವಾಗುತ್ತದೆ. **'ವೇಣು ಸಂಘರ್ಷಜೋ ವಹ್ನಿರ್ದಗ್ಧ್ವಾ ಶಾಮ್ಯತಿ ತದ್ವನಂ । ಏವಂ ಗುಣವ್ಯತ್ಯಯಜೋ ವೇದಃ ಶಾಮ್ಯತಿ ತದ್ಯಥಾ' ॥** ಬಿದುರುಗಳ ಸಂಘರ್ಷದಿಂದ ಹುಟ್ಟಿದ ಬೆಂಕಿಯು ಕಾಡನ್ನು ಸುಟ್ಟು ತಾನು ಹೇಗೆ ಶಾಂತವಾಗುತ್ತದೋ, ಹಾಗೆಯೇ ಗುಣವ್ಯತ್ಯಯದಿಂದ ಹುಟ್ಟಿದ ವೇದವು. ಅಂದರೆ ಸತ್ವ, ರಜಸ್ತಮೋಗುಣಗಳ ವೈಷಮ್ಯಾಧೀನವಾದ ವೇದವು. ಅಂದರೆ ವೇದಜನ್ಯಜ್ಞಾನವು ಪ್ರತ್ಯಕ್ಷ ಪ್ರಮಾಣವನ್ನು ಆಭಾಸೀಕರಿಸಿ, ತಾನು ಶಾಂತವಾಗುತ್ತದೆ ಎಂದರೆ—) ತಸ್ಯಾಪಿ=ಐಕ್ಯಾಗಮಕ್ಕೂ ಕೂಡ, ಯದಿ=ಯಾವ ಪಕ್ಷದಲ್ಲಿ, ಏತಾದೃಶಂ= (ಪ್ರಾಮಾಣ್ಯವು) ತಾತ್ಕಾಲಿಕವೆಂದು ಸ್ವೀಕರಿಸುವುದಾದರೆ, ಅಂದರೆ— ಐಕ್ಯಪ್ರಾಮಾಣ್ಯ ಮಿಥ್ಯಾತ್ವಂ = ಐಕ್ಯಾಗಮಪ್ರಾಮಾಣ್ಯಕ್ಕೆ ಬಾಧ್ಯತ್ವವು, ಯದಾ=ಯಾವಾಗ, ಭವೇತ್ = ಆಗುವುದೋ, (ಆಗ) ವಿಶ್ವಸತ್ಯತಾ=ಜಗತ್ಸತ್ಯತ್ವವು, (ಬರುವುದು).

**ಸ. ರ. ವಿ—** ಪ್ರತ್ಯಕ್ಷಕ್ಕೆ ಕಿಂಚಿತ್ಕಾಲದಲ್ಲಿ ಪ್ರಾಮಾಣ್ಯವಿದ್ದು ಆ ಮೇಲೆ ಅಪ್ರಾಮಾಣ್ಯವು ಬರುವುದಾದರೆ **'ಏಕಮೇವಾದ್ವಿತೀಯಂ' 'ತತ್ತ್ವಮಸಿ'** ಎನ್ನುವ ಅದ್ವೈತಾಗಮಕ್ಕೂ ಪ್ರತ್ಯಕ್ಷದಿಂದ ವಿಶೇಷವಿಲ್ಲದಿರುವುದರಿಂದ ಕಿಂಚಿತ್ಕಾಲದಲ್ಲಿ ಪ್ರಾಮಾಣ್ಯವು. ಆ ಮೇಲೆ ಅಪ್ರಾಮಾಣ್ಯವೂ ಬರಬೇಕಾಗುವುದು. ಹೀಗಾದರೆ ಅದ್ವೈತಾಗಮವು ಯಾವಾಗ ಅಪ್ರಮಾಣವಾಗುತ್ತದೋ ಆಗ ಅದ್ವೈತವು ಮಿಥ್ಯೆಯಾದುದರಿಂದ ಈ ದ್ವೈತವು ಸತ್ಯವಾಗಬೇಕಾಗುವುದು. ಪರಸ್ಪರ ವಿರುದ್ಧಗಳಲ್ಲಿ ಒಂದು ಸುಳ್ಳು ಆದರೆ ಮತ್ತೊಂದು ಸತ್ಯವೇ ಆಗುತ್ತದೆ.

**ನ್ಯಾಯಸುಧಾ—** ಪ್ರತ್ಯಕ್ಷಪ್ರಾಮಾಣ್ಯಕ್ಕೆ ತಾತ್ಕಾಲಿಕತ್ವವೆಂದರೆ ಅನಿತ್ಯತ್ವವೆಂದು ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ— ಪ್ರಾಮಾಣ್ಯಾನಿತ್ಯತ್ವವು ದೌರ್ಬಲ್ಯಕ್ಕೆ ಕಾರಣವೆಂದು

ಹೇಳಲಿಕ್ಕೆ ಬರುವುದಿಲ್ಲ. ಮತ್ತೆ ಬಾಧ್ಯತ್ವವೇ ತಾತ್ಕಾಲಿಕ ಶಬ್ದದಿಂದ ವಿವಕ್ಷಿತವೆಂದು ಹೇಳ ಬೇಕು. ಅಂತಹ ತಾತ್ಕಾಲಿಕತ್ವವು ಐಕ್ಯಾಗಮ ಪ್ರಾಮಾಣ್ಯಕ್ಕೂ ಅಂಗೀಕರಿಸಿದರೆ ವಿಶ್ವಸತ ತ್ವವು ಏಕೆ ಸಿದ್ಧಿಸಲಾರದು? ॥ ೫೭ ॥ ೫೭ ॥

ಸ. ರ. ವಿ— ಅದ್ವೈತಾಗಮಕ್ಕೆ ಅಬಾಧಿತವಾದ ಪ್ರಾಮಾಣ್ಯವು ಇರುವುದಾದರೆ ಪ್ರಮಾ ಣತ್ವವು ಎರಡರಲ್ಲಿಯೂ ಸಮಾನವಾಗಿರುವುದರಿಂದ ಪ್ರತ್ಯಕ್ಷಾದಿಗಳಿಗೂ ಅಬಾಧಿತವಾದ ಪ್ರಾಮಾಣ್ಯವು ಬರುವುದೆನ್ನುತ್ತಾರೆ—

ನ್ಯಾಯಸುಧಾ— ಹಾಗಾದರೆ ಸಾಕ್ಷಿಗೆ ಯಾಥಾರ್ಥ್ಯನಿಯಮವಿದ್ದುದರಿಂದ ಆ ಸಾಕ್ಷಿ ಗೃಹೀತವಾದ ಐಕ್ಯಾಗಮಪ್ರಾಮಾಣ್ಯವೂ ಅಬಾಧ್ಯವೇ ಎಂದರೆ—

**ಮೂ ॥ ಐಕ್ಯವಾಕ್ಯಸ್ಯ ಮಾನತ್ವಂ ಯದ್ಯಬಾಧಮಿತೀಷ್ಯತೇ ।**
**ಅಕ್ಷಜಸ್ಯಾಪಿ ಮಾನತ್ವಂ ನಾಬಾಧ್ಯಂ ಕಿಮಿತೀಷ್ಯತೇ ॥ ೫೮ ॥**

ಅ ॥ ಐಕ್ಯವಾಕ್ಯಸ್ಯ=ಐಕ್ಯಾಗಮದ, ಮಾನತ್ವಂ=ಪ್ರಾಮಾಣ್ಯವು, ಅಬಾಧ್ಯಮಿತಿ= ಬಾಧ್ಯವಲ್ಲವೆಂದು, ಇಷ್ಯತೇ ಯದಿ=ಅಂಗೀಕರಿಸಲ್ಪಡುವುದಾದರೆ, (ಸಾಕ್ಷಿಗೃಹೀತತ್ವವು ಎರಡ ರಲ್ಲಿಯೂ ಸಮಾನವಾಗಿರುವುದರಿಂದ) ಅಕ್ಷಜಸ್ಯಾಪಿ = ಪ್ರತ್ಯಕ್ಷಕ್ಕೂ ಕೂಡ, ಮಾನತ್ವಂ= ಪ್ರಾಮಾಣ್ಯವು, ಅಬಾಧ್ಯಮಿತಿ = ಬಾಧ್ಯವಲ್ಲವೆಂದು, ಕಿಂ ನೇಷ್ಯತೇ = ಏಕೆ ಅಂಗೀಕರಿಸ ಲ್ಪಡುವುದಿಲ್ಲ?

ತಾ ॥ ಸ. ರ. ವಿ— ಪ್ರತ್ಯಕ್ಷ ಪ್ರಾಮಾಣ್ಯದ ಅಬಾಧ್ಯತ್ವವು ಹೇಗೆ ಅದ್ವೈತಸಿದ್ಧಿಗೆ ವ್ಯಾಘಾತಕವೋ ಹಾಗೆಯೇ ಅದ್ವೈತಾಗಮದ ಪ್ರಾಮಾಣ್ಯಾಬಾಧ್ಯತ್ವವೂ ಕೂಡ ಅದ್ವೈತ ಸಿದ್ಧಿಗೆ ವ್ಯಾಘಾತಕವೇ ಆಗಿರುವುದರಿಂದ ಅದನ್ನು ಅಂಗೀಕರಿಸುವುದು ಅದ್ವೈತವಾದಿಗೆ ವ್ಯರ್ಥವೇ.

ನ್ಯಾಯಸುಧಾ— ಸಾಕ್ಷಿಗೃಹೀತತ್ವವು ಎರಡರಲ್ಲಿಯೂ ಸಮಾನವಾಗಿರುವುದರಿಂದ ಜಗತ್ತಿಗೆ ಸತ್ಯತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷ ಪ್ರಮಾಣಕ್ಕೆ ಬಾಧ್ಯತ್ವವನ್ನು ಹೇಳುವುದಾದರೆ ಐಕ್ಯಾಗಮಪ್ರಾಮಾಣ್ಯವೂ ಕೂಡ ಬಾಧ್ಯವಾಗಬೇಕಾಗುವುದು. ಐಕ್ಯಾಗಮಪ್ರಾಮಾಣ್ಯಕ್ಕೆ ಬಾಧ್ಯತ್ವವಿಲ್ಲದಿದ್ದರೆ ಪ್ರತ್ಯಕ್ಷಪ್ರಮಾಣವೂ ಕೂಡ ಅಬಾಧ್ಯವೆಂದೇ ಹೇಳಬೇಕು ॥ ೫೮ ॥

ಹಾಗಾದರೆ ಅದ್ವಿತೀಯ ಬ್ರಹ್ಮಾವಸ್ಥಾನವೇ ಮೋಕ್ಷವು. ಆ ಮೋಕ್ಷವು ಪ್ರಪಂಚ ಗ್ರಾಹಕ ಪ್ರತ್ಯಕ್ಷದ ಪ್ರಾಮಾಣ್ಯಕ್ಕೆ ಅಬಾಧ್ಯತ್ವವಿದ್ದರೆ ಕೂಡಲಾರದು. ಏಕೆಂದರೆ— ಪ್ರಪಂಚವೂ ಕೂಡ ಸತ್ಯವಾಗಿರುವುದರಿಂದ ಸತ್ಪದಾರ್ಥವು ಎರಡಾಗಬೇಕಾಗುವುದರಿಂದ ಅದ್ವೈತ ಹಾನಿಯು ಬರುವುದು. ಆದ ಕಾರಣ ಸಾಕ್ಷಿವೇದ್ಯತ್ವವು ಎರಡರಲ್ಲಿಯೂ ಸಮಾನ ವಾಗಿದ್ದರೂ ಈ ವಿಶೇಷಬಾಧಕದಿಂದ ಸಾಕ್ಷಿಯು ಪ್ರತ್ಯಕ್ಷ ಪ್ರಾಮಾಣ್ಯವನ್ನು ತಾತ್ಕಾಲಿಕ ವನ್ನಾಗಿಯೇ ಗ್ರಹಿಸುತ್ತದೆಂದು ಕಲ್ಪಿಸುತ್ತೇವೆಂದರೆ—

**ಮೂ ॥ ಅದ್ವೈತಹಾನಿಸಾಮಾನ್ಯಾನ್ನ ವಿಶೇಷಶ್ಚ ಕಶ್ಚನ ।**
**ಯದಿ ಸ್ವತಸ್ತ್ವಂ ಪ್ರಾಮಾಣ್ಯೇ ವಿಶ್ವಸತ್ತಾ ಕಥಂ ನ ತೇ ॥ ೫೯ ॥**

ಅ || ಅದ್ವೈತಹಾನಿಸಾಮಾನ್ಯಾತ್=ಅದ್ವೈತಹಾನಿಗೆ ಸಾಮ್ಯವಿರುವುದರಿಂದ, (ಪ್ರತ್ಯಕ್ಷ ಪ್ರಾಮಾಣ್ಯಕ್ಕೆ ಅಬಾಧ್ಯತ್ವವನ್ನು ಹೇಳಿದರೂ ಐಕ್ಯವಾಕ್ಯಪ್ರಾಮಾಣ್ಯಕ್ಕೆ ಅಬಾಧ್ಯತ್ವವನ್ನು ಹೇಳಿದರೂ) ಕಶ್ಚನ = ಯಾವುದೊಂದೂ, ವಿಶೇಷಃ = ವಿಶೇಷವು, ನ ಚ = ಇಲ್ಲವೇ ಇಲ್ಲ. (ಅದ್ವೈತಾಗಮಕ್ಕೆ ಪ್ರಾಬಲ್ಯವನ್ನುಪಪಾದಿಸುವುದಕ್ಕಾಗಿ ಸ್ವತಃ ಪ್ರಾಮಾಣ್ಯವನ್ನು ಏನು ಹೇಳಿರುವರೋ ಆ ವಿಷಯದಲ್ಲಿ ಹೇಳುತ್ತಾರೆ) ಪ್ರಾಮಾಣ್ಯೇ = ಆಗಮಪ್ರಾಮಾಣ್ಯದಲ್ಲಿ, ಸ್ವತಸ್ತ್ವಂ ಯದಿ=ಸ್ವತಸ್ತ್ವವನ್ನು ಅಂಗೀಕರಿಸುವುದಾದರೆ, ತೇ=ನಿನಗೆ, ವಿಶ್ವಸತ್ತಾ=ಜಗತ್ಸತ್ಯತ್ವವೂ ಕೂಡ, ಕಥಂ ನ=ಹೇಗೆ ಅಂಗೀಕಾರಮಾಡಲಿಕ್ಕೆ ಯೋಗ್ಯವಲ್ಲ?

ತಾ || ಸ. ರ ವಿ— (1) ಅದ್ವೈತಾಗಮಪ್ರಾಮಾಣ್ಯಕ್ಕೆ ಬಾಧವೂ ಇದ್ದರೆ ಅದೂ ಅಬಾಧ್ಯವೆಂದಾದರೆ ಅದ್ವೈತವ್ಯಾಘಾತವು ತಪ್ಪಿದ್ದಲ್ಲ. (2) ಮತ್ತು ಯಾರು ಅದ್ವೈತಾಗಮದಂತೆ ಪ್ರತ್ಯಕ್ಷಾದಿಗಳನ್ನು ಸ್ವತಃ ಪ್ರಮಾಣವೆಂದು ಅಂಗೀಕರಿಸುತ್ತಾರೋ, ಅಂತಹ ಮಾಯಾವಾದಿಗಳೂ ಅದ್ವೈತಾಗಮದಲ್ಲಿ ಪ್ರತಿಪಾದ್ಯವಾದ ಐಕ್ಯಕ್ಕೆ ಅಬಾಧ್ಯತ್ವವಿದ್ದಂತೆಯೇ ಪ್ರತ್ಯಕ್ಷಾದಿ ವಿಷಯವಾದ ಪ್ರಪಂಚಕ್ಕೂ ಅಬಾಧ್ಯತ್ವವನ್ನು ಅವಶ್ಯವಾಗಿ ಅಂಗೀಕರಿಸತಕ್ಕದ್ದೇ. ಪ್ರತ್ಯಕ್ಷಾದಿಗಳು ಅಯಥಾರ್ಥಗಳಾದರೆ ಪ್ರಾಮಾಣ್ಯವನ್ನೇ ಅಂಗೀಕರಿಸಲಿಕ್ಕೆ ಬರುವುದಿಲ್ಲ. ಸ್ವತಃ ಪ್ರಾಮಾಣ್ಯವು ಸುತರಾಂ ಕೂಡಲಾರದು.

**ನ್ಯಾಯಸುಧಾ—** (1) ಪ್ರತ್ಯಕ್ಷಪ್ರಾಮಾಣ್ಯಕ್ಕೆ ಬಾಧ್ಯತ್ವವನ್ನು ಹೇಳಿದರೆ ಐಕ್ಯವಾಕ್ಯ ಪ್ರಾಮಾಣ್ಯವೂ ಬಾಧ್ಯವೆಂದೇ ಒಪ್ಪಬೇಕು. ಐಕ್ಯವಾಕ್ಯಪ್ರಾಮಾಣ್ಯಕ್ಕೆ ಅಭಾಧ್ಯತ್ವವನ್ನು ಒಪ್ಪಿದರೂ ಅಬಾಧ್ಯವಾದ ಪ್ರಾಮಾಣ್ಯವೆಂಬುವ ಎರಡನೇ ಸದ್ವಸ್ತುವು ಪ್ರಸಕ್ತವಾಗುವುದು. (2) ಐಕ್ಯವಾಕ್ಯವಾಗಲೀ ಅದರ ಪ್ರಾಮಾಣ್ಯವಾಗಲೀ ವಾಕ್ಯಾರ್ಥಭೂತವಾದ ಭೇದಾಭಾವವಾಗಲೀ ಬ್ರಹ್ಮಸ್ವರೂಪವೆಂದು ಹೇಳಲಿಕ್ಕೆ ಬರುವುದಿಲ್ಲ. ತಥಾಚ ಅದ್ವೈತ ಬ್ರಹ್ಮಾವಸ್ಥಾನ ರೂಪವಾದ ಮೋಕ್ಷವೇ ಸಿದ್ಧಿಸದೆ ಹೋಗಬೇಕಾಗುವುದು. (3) ಪ್ರತ್ಯಕ್ಷಪ್ರಾಮಾಣ್ಯಕ್ಕೆ ಅಬಾಧ್ಯತ್ವವನ್ನು ಹೇಳಿದರೆ ಬಹುಪ್ರಪಂಚವನ್ನು ಒಪ್ಪಬೇಕಾಗುವುದು. ಅದ್ವೈತಾಗಮಪ್ರಾಮಾಣ್ಯಕ್ಕೆ ಅಬಾಧ್ಯತ್ವವನ್ನು ಹೇಳಿದರೆ ಬಹುಪ್ರಪಂಚವನ್ನು ಒಪ್ಪಬೇಕಾಗಿಲ್ಲ, ಎಂಬುವ ಈ ವಿಶೇಷವೂ ಪಕ್ಷದ್ವಯದಲ್ಲಿಯೂ ಅದ್ವೈತಹಾನಿಗೆ ಸಾಮ್ಯವಿರೋಣದರಿಂದ ಅನಾದರಣೀಯವೇ. (4) ಆಗಮ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಹೇಳುವುದಾದರೆ ಆಗಮಪ್ರತ್ಯಕ್ಷ ಪ್ರಾಮಾಣ್ಯಕ್ಕೂ ಸ್ವತಸ್ತ್ವವನ್ನೇ ಹೇಳುವೆವು. ತಥಾಚ ಆಗಮಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸತಕ್ಕ ಮಾಯಾವಾದಿಗಳಿಗೆ ಹೇಗೆ ಆಗಮವಿಷಯನಾದ ಬ್ರಹ್ಮನಿಗೆ ಸತ್ಯತ್ವವು ಸಮ್ಮತವೋ, ಹಾಗೆಯೇ ಸ್ವತಃ ಪ್ರಮಾಣವಾದ ಪ್ರತ್ಯಕ್ಷಕ್ಕೆ ವಿಷಯವಾದ ಜಗತ್ಸತ್ಯತ್ವವೂ ಸಮ್ಮತವೆಂದೇ ಹೇಳಬೇಕು || ೫೯ ||

ಸ. ರ. ವಿ— ಎಲ್ಲಾ ದ್ವೈತವನ್ನು ಬಾಧಿಸತಕ್ಕ ಅಪರೋಕ್ಷ ಜ್ಞಾನವು ಎಷ್ಟರ ವರೇಗೆ ಹುಟ್ಟುವುದಿಲ್ಲವೋ, ಅಷ್ಟರ ವರೇಗೆ ದ್ವೈತವನ್ನು ತೋರಿಸಿಕೊಡತಕ್ಕದ್ದು ಪ್ರಮಾಣವು ಎನ್ನುವುದು ವ್ಯಾಹತವೇ ಆಗಿದೆ. ಕಾಲತ್ರಯದಲ್ಲಿಯೂ ಇದು ಅಪ್ರಮಾಣವು ಎನ್ನುವ ಬಾಧಕಜ್ಞಾನದಿಂದ ಗೃಹೀತವಾದ ಅದ್ವೈತಜ್ಞಾನಕ್ಕ ಯಾವಾಗಲೂ ಪ್ರಾಮಾಣ್ಯವು ಕೂಡಲಾರದು ಎನ್ನುತ್ತಾರೆ.

**ನ್ಯಾಯಸುಧಾ—** (1) ಪ್ರತ್ಯಕ್ಷ ಆಗಮಗಳಿಗೆ ಸ್ವತಃ ಪ್ರಾಮಾಣ್ಯವಿದ್ದರೂ ಅದರಲ್ಲಿ ವಿಶೇಷವಿದೆ. ಪ್ರತ್ಯಕ್ಷವು ತತ್ಕಾಲದಲ್ಲಿಯೇ ಜ್ಞಾನಕ್ಕೆ ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ.

ವಾಕ್ಯವಾದರೂ ಆತ್ಯಂತಿಕ ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ. ಹಾಗೆಯೇ ಜ್ಞಾನವನ್ನು ಗ್ರಹಿಸತಕ್ಕ ಸಾಕ್ಷಿಯು ಪ್ರತ್ಯಕ್ಷಜ್ಞಾನಕ್ಕೆ ತಾತ್ಕಾಲಿಕ ಪ್ರಾಮಾಣ್ಯವನ್ನೇ ಗ್ರಹಿಸುತ್ತದೆ. ವಾಕ್ಯದಿಂದುಂಟಾದ ಜ್ಞಾನಕ್ಕಾದರೂ ಆತ್ಯಂತಿಕ ಪ್ರಾಮಾಣ್ಯವನ್ನೇ ಗ್ರಹಿಸುತ್ತದೆ; ಎಂದರೆ— ಹೀಗೆ ಹೇಳಕೂಡದು. ಈ ವ್ಯವಸ್ಥೆಗೆ ನಿಯಾಮಕವಿಲ್ಲ. ದೋಷಾಂತರವನ್ನೂ ಹೇಳುತ್ತಾರೆ.

**ಮೂ ॥ ಪ್ರಾಮಾಣ್ಯಸ್ಯ ಚ ಮರ್ಯಾದಾ ಕಾಲತೋ ವ್ಯಾಹತಾ ಭವೇತ್ ।**
**ಕಾಲಾಂತರೇಽಪ್ಯಮಾನಂ ಚೇದಿದಾನೀಂ ಮಾನತಾ ಕುತಃ ॥ ೬೦ ॥**

ಅ ॥ ಪ್ರಾಮಾಣ್ಯಸ್ಯ ಚ = ಪ್ರಾಮಾಣ್ಯಕ್ಕೆ, ಕಾಲತಃ ಮರ್ಯಾದಾ = ಕಾಲದಿಂದ ವ್ಯವಚ್ಛೇದವು, (ತಾತ್ಕಾಲಿಕತ್ವವು) ವ್ಯಾಹತಾ = ಸ್ವವಚನವಿರುದ್ಧವು, ಭವೇತ್ = ಆಗುವುದು. (ವ್ಯಾಹತಿಯು ಹೇಗೆಂದರೆ—) ಕಾಲಾಂತರೇಽಪಿ = ಕಾಲಾಂತರದಲ್ಲಿಯೂ, ಅಮಾನಂ ಚೇತ್ = ಪ್ರತ್ಯಕ್ಷವು ಬಾಧಿತ ಪ್ರಾಮಾಣ್ಯವುಳ್ಳದ್ದಾದರೆ, ಇದಾನೀಂ = ಈಗ, ಮಾನತಾ = ಅದಕ್ಕೆ ಪ್ರಾಮಾಣ್ಯವು ಇದೆ ಎನ್ನುವುದು, ಕುತಃ = ಯಾವುದರಿಂದ ಸಿದ್ಧಿಸುವುದು?

**ನ. ಚ. ವಿ**— ಪ್ರಾಮಾಣ್ಯಕ್ಕೆ ಕಾಲತಃ ಮರ್ಯಾದೆಯೆಂದರೆ— ಯಾವಾಗ ವಿಶ್ವನಿವೃತ್ತಿಪ್ರಮಾಣವೋ ಆ ಮೇಲೆ ಅಪ್ರಮಾಣವು, ಹೀಗೆ ಅದು ವ್ಯಾಹತವು. ಕಾಲತ್ರಯದಲ್ಲಿಯೂ ಅಪ್ರಮಾಣವು ಎನ್ನುವ ಬಾಧಕಜ್ಞಾನದಿಂದ ಗ್ರಾಹ್ಯವಾದುದಕ್ಕೆ ಯಾವಾಗಲಾದರೂ ಪ್ರಾಮಾಣ್ಯವು ಯುಕ್ತವಾಗಲಾರದು.

**ತಾ ॥ ನ್ಯಾಯಸುಧಾ**— ತಾತ್ಕಾಲಿಕಶಬ್ದದಿಂದ ಈಗ ಇದೆ, ಕಾಲಾಂತರದಲ್ಲಿ ಆದರೂ ಬಾಧ್ಯವೆಂದು ಪರರಿಗೆ ಅಭಿಮತವು. ಅದರಲ್ಲಿ ಪ್ರತ್ಯಕ್ಷವು ಕಾಲಾಂತರದಲ್ಲಿಯೂ ಬಾಧಿತಪ್ರಾಮಾಣ್ಯವುಳ್ಳದ್ದಾದರೆ ಈಗ ಪ್ರಮಾಣವೆನ್ನುವುದೂ ಕೂಡಲಾರದು. ಬಾಧವು ಕಾಲತ್ರಯದಲ್ಲಿಯೂ ಸತ್ತಾನಿಷೇಧರೂಪವಾಗಿದೆ. ಪ್ರತ್ಯಕ್ಷಪ್ರಾಮಾಣ್ಯವು ಈಗ ಸತ್ತಾದರೆ ಕಾಲಾಂತರದಲ್ಲಿಯೂ ಹೇಗೆ ಬಾಧಿಸಲ್ಪಡುವುದು? ಆದಕಾರಣ ತಾತ್ಕಾಲಿಕವೆನ್ನುವ ವಚನವು ವ್ಯಾಹತವೇ ಆಗಿದೆ ॥ ೬೦ ॥

**ನ. ಚ. ವಿ.**— ಹಾಗಾದರೆ, ಹೀಗೆ ದ್ವೈತಪ್ರಮಾಣಕ್ಕೆ ಯಥಾರ್ಥವಾಗಿ ಅಪ್ರಾಮಾಣ್ಯವು ಬರಲಿ. ಇದಾದರೂ ಮಿಥ್ಯಾತ್ವಮಾನದಿಂದ ಬಾಧಿಸಲ್ಪಡುತ್ತದೆಂದರೆ—

ನ್ಯಾಯಸುಧಾ— ಅದ್ವಿತೀಯ ಬ್ರಹ್ಮಾವಸ್ಥಾನರೂಪವಾದ ಮುಕ್ತಿಯನ್ನು ಅಂಗೀಕರಿಸಿ ಪ್ರತ್ಯಕ್ಷ ಪ್ರಾಮಾಣ್ಯಕ್ಕೆ ಅಬಾಧ್ಯತ್ವವಿದ್ದಂತೆಯೇ ಆಗಮಪ್ರಾಮಾಣ್ಯಕ್ಕೆ ಅಬಾಧ್ಯತ್ವವನ್ನು ಒಪ್ಪಿಕೊಂಡರೂ ಅದ್ವೈತ ಬ್ರಹ್ಮಾವಸ್ಥಾನರೂಪ ಮೋಕ್ಷಹಾನಿಯು ಸಮಾನವೆಂದು ಹೇಳಲ್ಪಟ್ಟದೆ. ಈಗಲಾದರೂ ಆ ಮೋಕ್ಷವೇ ಅನುಪಪನ್ನವೆನ್ನುವ ಅಭಿಪ್ರಾಯದಿಂದ ಪ್ರಶ್ನಿಸುತ್ತಾರೆ

**ಮೂ ॥ ಮಿಥ್ಯಾತ್ವಮಾನಂ ಮೋಕ್ಷೇಽಪಿ ಮಾನಂ ಕಿಂ ನೇತಿ ಭಣ್ಯತಾಂ ।**
**ಮಾನತ್ವೇಽದ್ವೈತಹಾನಿಃ ಸ್ಯಾದಮಾನತ್ವೇಽಸ್ಯಮೋಕ್ಷತಾ ॥ ೬೧ ॥**
**ವಿಶ್ವಸ್ಯ ಪುನರಾಪತ್ತಿರ್ಮಿಥ್ಯಾಮಾನಂ ಯದಾ ನ ಮಾ ।**
**ಅಸ್ತಿ ಚೇನ್ಮುಕ್ತ್ಯವಸ್ಥಾ ಚ ದ್ವೈತಾಪತ್ತಿರಥೋಽನ್ಯಥಾ ।**
**ಅಮುಕ್ತತ್ವಂ ತಥಾ ಕಾಲೇ ಕಾಲಾಧೀನಾ ಹಿ ಮುಕ್ತತಾ ॥ ೬೨ ॥**

ಅ ॥ ಮಿಥ್ಯಾತ್ವಮಾನಂ=ಜಗನ್ಮಿಥ್ಯಾತ್ವಪ್ರತಿಪಾದಕವಾದ ಆಗಮರೂಪಪ್ರಮಾಣವೂ, ಅನುಮಾನರೂಪ ಪ್ರಮಾಣವೂ ಕೂಡ, ಮೋಕ್ಷೇಽಪಿ ಮಾನಂ ಕಿಂ=ಮೋಕ್ಷಸಮಯದಲ್ಲಿಯೂ ಕೂಡ ಅಬಾಧಿತಸ್ವರೂಪ ಪ್ರಾಮಾಣ್ಯವುಳ್ಳದ್ದೋ ಏನು? ನೇತಿ ಕಿಂ = ಬಾಧಿತಸ್ವರೂಪ ಪ್ರಾಮಾಣ್ಯವುಳ್ಳದ್ದೋ ಏನು? ಇತಿ = ಹೀಗೆ ಪ್ರಶ್ನಿಸಲ್ಪಟ್ಟದ್ದಕ್ಕೆ, ಭಣ್ಯತಾಂ = ಉತ್ತರವು ಹೇಳಲ್ಪಡಲಿ. (೧ನೇದರಲ್ಲಿ ದೋಷವನ್ನು ಹೇಳುತ್ತಾರೆ). ಮಾನತ್ವೇ = ಅಬಾಧಿತವಾದ ಸ್ವರೂಪವುಳ್ಳದ್ದು ಪ್ರಾಮಾಣ್ಯವು ಎನ್ನುವ ಪಕ್ಷದಲ್ಲಿ (ಅದರಿಂದಲೇ ಸದ್ವಿತೀಯತ್ವವು ಬರುವುದರಿಂದ) ಅದ್ವೈತಹಾನಿಃ ಸ್ಯಾತ್ = ಅದ್ವೈತಕ್ಕೆ ಹಾನಿ ಬರುವುದರಿಂದ ಹಿಂದೆ ಹೇಳಿದ ಮೋಕ್ಷವು ಸಿದ್ಧಿಸದೆ ಹೋಗಬೇಕಾಗುವುದು. (೨ನೇ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ). ಅಮಾನತ್ವೇಽಪಿ = ಬಾಧಿತಸ್ವರೂಪ ಪ್ರಾಮಾಣ್ಯವೆನ್ನುವ ಪಕ್ಷದಲ್ಲಿಯೂ, ಅಮೋಕ್ಷತಾ = (ವಿವಕ್ಷಿತವಾದ ಅವಸ್ಥೆಗೆ) ಅಮೋಕ್ಷತ್ವವು (ಬರಬೇಕಾಗುವುದು.) (ಅಂದರೆ ವಿಶ್ವಮಿಥ್ಯಾತ್ವ ಪ್ರಮಾಣಕ್ಕೂ ಅದರ ಪ್ರಾಮಾಣ್ಯಕ್ಕೂ ಎರಡಕ್ಕೂ ಬಾಧ್ಯತ್ವಪಕ್ಷದಲ್ಲಿಯೂ ಮೋಕ್ಷವು ಸಿದ್ಧಿಸುವುದಿಲ್ಲ. ಹೇಗೆಂದರೆ) ವಿಶ್ವಸ್ಯ=ಜಗತ್ತಿಗೆ, ಮಿಥ್ಯಾಮಾನಂ=ಮಿಥ್ಯಾತ್ವಪ್ರತಿಪಾದಕವಾದ ಪ್ರಮಾಣವು, ಯದಾ=ಯಾವಾಗ, ಮಾ=ಪ್ರಮಾಣವು, ನ=ಅಲ್ಲವೋ, (ಅಂದರೆ ಬಾಧಿತ ಪ್ರಾಮಾಣ್ಯವುಳ್ಳದ್ದು ಎಂದಾದರೆ), ಆಗ ವಿಶ್ವಸ್ಯ=ಜಗತ್ತಿಗೆ, ಪುನಃ=ಮತ್ತು, ಆಪತ್ತಿಃ= ಪ್ರಾಪ್ತಿಯಾಗಬೇಕಾಗುವುದು. (ಅಂದರೆ ಜಗತ್ತು ಇದ್ದರೆ ಹಿಂದೆ ಹೇಳಿದ ಮೋಕ್ಷವು ಹೇಗೆ ಕೂಡುವುದು?) (ಮುಕ್ತಿಯು ಸತ್ತಾಗಿದೆಯೋ ಅಸತ್ತಾಗಿದೆಯೋ ಎರಡು ಕಲ್ಪಗಳಲ್ಲಿಯೂ ಹಿಂದೆ ಹೇಳಿದ ಮುಕ್ತಿಯು ಸಿದ್ಧಿಸಲಾರದು. ಹೇಗೆಂದರೆ ೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ಮುಕ್ತ್ಯವಸ್ಥಾ ಚ = ಮುಕ್ತ್ಯವಸ್ಥೆಯಾದರೂ, ಅಸ್ತಿ ಚೇತ್ = ಸತ್ತಾದರೆ, ದ್ವೈತಾಪತ್ತಿಃ=ದ್ವಿತೀಯಪದಾರ್ಥವನ್ನು ಒಪ್ಪಬೇಕಾಗುವುದು. (೨ನೇದ್ದನ್ನು ತಿರಸ್ಕರಿಸುತ್ತಾರೆ). ಅತಃ=ಸತ್ವದ್ವೇಶೆಯಿಂದ, ಅನ್ಯಥಾ=ಬೇರೆಯಾದರೆ, (ಅಂದರೆ ಮುಕ್ತಿಯು ಅಸತ್ತಾದರೆ) ಆಗ ಅಮುಕ್ತತ್ವಂ ಸ್ಯಾತ್=ಆತ್ಮನಿಗೆ ಅಮುಕ್ತತ್ವವು ಬರಬೇಕಾಗುವುದು. (ಹೀಗೆಯೇ ಮುಕ್ತಿಗೂ ಅದ್ವಿತೀಯ ಬ್ರಹ್ಮಾವಸ್ಥಾನರೂಪತ್ವವನ್ನು ನಿರಾಕರಿಸುವುದಕ್ಕಾಗಿ ಕಾಲದಲ್ಲಿಯೂ ವಿಕಲ್ಪಿಸಿ ಕೊಂಡು ದೋಷವನ್ನು ಹೇಳಬೇಕೆನ್ನುತ್ತಾರೆ.) ತಥಾ=ಹಾಗೆಯೇ, ಕಾಲೇ=ಕಾಲದಲ್ಲಿಯೂ, ಕಾಲವು ಸತ್ಯವೋ ಅಸತ್ಯವೋ ಎಂದು ವಿಕಲ್ಪಿಸಿಕೊಂಡು ದೋಷವನ್ನು ಹೇಳಬೇಕು. (ಹಾಗಾದರೆ ಮೋಕ್ಷದಶೆಯಲ್ಲಿ ಕಾಲವು ಇದೆಯೋ ಇಲ್ಲವೋ ಎಂದು ವಿಕಲ್ಪಿಸಿಕೊಂಡು ಕಾಲವು ಇದ್ದರೆ ದ್ವೈತವು ಬರಬೇಕಾಗುವುದು. ಎನ್ನುವ ದೂಷಣವಿರಲಿ. 'ಅತೋಽನ್ಯಥಾ ಮುಕ್ತತ್ವಂ' ಎಂದು ಅತಿದೇಶವು ಹೇಗೆಂದರೆ—) ಮುಕ್ತತಾ=ಮುಕ್ತತ್ವವು, ಕಾಲಾಧೀನಾ= ನಿಯಮದಿಂದ ಕಾಲವೇ ಅಧಿಕರಣವಾಗಿ ಉಳ್ಳದ್ದು, ಹಿ='ಯದ್ವಸ್ತು ತತ್ಕಾಲಸಂಬಂಧಿ ಏವ' ಎಂದು ವ್ಯಾಪ್ತಿಯು ಎಂದು ಪ್ರಸಿದ್ಧವು.

ತಾ ॥ ಸ. ರ. ವಿ—(1) ದ್ವೈತಮಾತ್ರವನ್ನು ನಿಷೇಧಿಸತಕ್ಕ ಯಾವ ಪ್ರಮಾಣದಿಂದ ಆತ್ಮನಿಗೆ ಕೈವಲ್ಯವು ಮುಕ್ತಿಯು ಸಿದ್ಧಿಸುತ್ತದೋ ಆ ಪ್ರಮಾಣವು ಮುಕ್ತಿದಶೆಯಲ್ಲಿ ಅಬಾಧಿತ ವಾದರೆ ಅದ್ವೈತಭಂಗವು. ಬಾಧಿತವಾದರೆ ಪುನಃ ಎರಡನೇ ವಸ್ತುವು ಇದ್ದುದರಿಂದ ಆತ್ಮನಿಗೆ ಮೋಕ್ಷಹಾನಿಯು ಬರಬೇಕಾಗುವುದು. (2) ಮತ್ತು ಆತ್ಮನಿಗೆ ಮುಕ್ತ್ಯವಸ್ಥೆಯು ಅಬಾಧಿತ ವಾದರೆ ಅದ್ವಿತೀಯತ್ವಕ್ಕೆ ಹಾನಿಯು ಬರಬೇಕಾಗುವುದು. ಬಾಧಿತವಾದರೆ ಅಮುಕ್ತತ್ವವೇ ಬರಬೇಕಾಗುವುದು. (3) ಹಾಗೆಯೇ ಬಂಧನಿವೃತ್ತ್ಯುತ್ತರ ಕಾಲವು ಬಾಧರಹಿತವಾದರೆ ಅದ್ವೈತ ಭಂಗವು, ಬಾಧಿತವಾದರೆ ಕಾಲವಿಲ್ಲದಿರುವುದರಿಂದ ನಿತ್ಯತ್ವವನ್ನು ನಿರೂಪಿಸಲಿಕ್ಕೆ ಅಶಕ್ಯವಾದುದರಿಂದ ಮುಕ್ತಿಗೆ ನಿವೃತ್ತಿಯಾಗಿ ಆತ್ಮನಿಗೆ ಸಂಸಾರವೇ ಬರಬೇಕಾಗುವುದು ॥ ೬೧ ॥ ೬೨ ॥

ಸ. ರ. ವಿ.— (1) 'ನಾಸೀತ್, ನಾಸ್ತಿ ನ ಭವಿಷ್ಯತಿ' ಎನ್ನುವ ಬಾಧವು ಕಾಲಕ್ಕೆ ಕೂಡಲಾರದು. ಏಕೆಂದರೆ— ಸ್ವವ್ಯಾಹತವಾಗುವುದು. (2) ಮತ್ತು 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ । ಅಥ ಮರ್ತ್ಯೋಽಮೃತೋ ಭವತಿ' ಎಂದು ಕಾಲಸಂಬಂಧವು ಮುಕ್ತಿಯಲ್ಲಿಯೇ ಶ್ರುತವಾಗಿರುವುದರಿಂದ, ಮುಕ್ತಿಯಲ್ಲಿ ಕಾಲಕ್ಕೆ ನಿವೃತ್ತಿಯನ್ನು ಹೇಳಲಿಕ್ಕೆ ಕೂಡಲಾರದು. ತಥಾಚ ಕಾಲಸಂಬಂಧರಹಿತವಾದುದು ಯಾವುದೂ ಇಲ್ಲ ಎನ್ನುತ್ತಾರೆ.

ನ್ಯಾಯಸುಧಾ— ಮುಕ್ತಿಗೆ ಕಾಲವು ಅಧಿಕರಣವಾಗಿದೆ ಎನ್ನುವ ನಿಯಮವು ಕೇವಲ ಅನುಮಾನಸಿದ್ಧವಲ್ಲ. ಮತ್ತೆ **'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ' 'ದೃಷ್ಟ್ವೈವ ತಂ ಮುಚ್ಯತೇ'** ಇದು ಮೊದಲಾದ ಆಗಮಸಿದ್ಧವೂ ಆಗಿದೆ ಎನ್ನುತ್ತಾರೆ.

**ಮೂ ॥ ಕಾಲ ಏವಾಗಮೋಽಪ್ಯಾಹ ಮುಕ್ತಿಂ ಕಾಲನಿವರ್ತನೇ ।**
**ಮುಕ್ತೇರಪಿ ನಿವೃತ್ತಿಃ ಸ್ಯಾತ್ ಸಂಸಾರಿತ್ವಮತೋ ಭವೇತ್ ॥ ೬೩ ॥**

ಅ ॥ 'ಆಗಮೋಽಪಿ ತದಾ ವಿದ್ವಾನ್' ಇತ್ಯಾದ್ಯಾಗಮವೂ ಕೂಡ, ಕಾಲ ಏವ= ಕಾಲದಲ್ಲಿಯೇ, ಮುಕ್ತಿಂ = ಮೋಕ್ಷವನ್ನು, ಆಹ = ಹೇಳುತ್ತದೆ. (ಹೀಗೆ ಅಧಿಕರಣವಾದ ಕಾಲದಿಂದ ಮುಕ್ತಿಯು ವ್ಯಾಪ್ತವಾಗಿದ್ದರೆ ಅದರಿಂದ ಏನಾಯಿತೆಂದರೆ—) ಕಾಲನಿವರ್ತನೇ= ಕಾಲಕ್ಕೆ ಅಸತ್ವವಿದ್ದರೆ, ಮುಕ್ತೇರಪಿ=ಮೋಕ್ಷಕ್ಕೂ, ನಿವೃತ್ತಿಃ=ಅಸತ್ವವು, ಸ್ಯಾತ್=ಬರಬೇಕಾಗುವುದು. (ವ್ಯಾಪಕವು ನಿವೃತ್ತವಾದರೆ ವ್ಯಾಪ್ಯನಿವೃತ್ತಿಯು ಆವಶ್ಯಕವೇ. ತಥಾಚ ಮೋಕ್ಷವು ಕಾಲಸಂಬಂಧಿಯು ಆಗದಿದ್ದರೆ ಆಗ ಶಶಶೃಂಗದಂತೆ ಅಸತ್ತಾಗಬೇಕಾಗುವುದು). (ಹಾಗಾದರೆ **'ನ ಮುಮುಕ್ಷುರ್ನ ವೈ ಮುಕ್ತಃ ಇತ್ಯೇಷಾ ಪರಮಾರ್ಥತಾ'** ಎಂದು ಮುಕ್ತಿಗೂ ಅಸತ್ವವು ಇಷ್ಟವಾಗಿರುವುದರಿಂದ ನಮಗೆ ಇದು ಅನಿಷ್ಟವಲ್ಲ, ಎಂದು ಮಾಯಾವಾದಿಗಳು ಆಶಂಕಿಸಿದರೆ—) ಅತಃ=ಬಂಧಾಭಾವರೂಪವಾದ ಮೋಕ್ಷವು ಸುಳ್ಳಾಗಿರುವುದರಿಂದ, ಸಂಸಾರಿತ್ವಂ=ಸಂಸಾರಿತ್ವವು, ಭವೇತ್=ಆಗುವುದು. ಅಂದರೆ ಸತ್ತಾದ ಚೈತನ್ಯಕ್ಕೆ ಬಂಧಾಭಾವರೂಪವಾದ ಮೋಕ್ಷವು ಅಸತ್ತಾದರೆ ದೇವದತ್ತನಂತೆ ಮುಕ್ತಾಭಿಮತನಿಗೂ ಸಂಸಾರಿತ್ವವು ಬರಬೇಕಾಗುವುದು ॥ ೬೩ ॥

ಸ. ರ. ವಿ.— (1) ಪ್ರತ್ಯಕ್ಷಾದಿಸಿದ್ಧವಾದ ದ್ವೈತಕ್ಕೆ ಹೇಗೂ ಬಾಧಕವು ಕೂಡಲಾರದು. ಎಲ್ಲಿಯೂ ದೃಢಪ್ರತ್ಯಕ್ಷಸಿದ್ಧವಾದುದು ಅನುಮಾನದಿಂದಲಾಗಲೀ, ಆಗಮದಿಂದಲಾಗಲೀ, ಆ ಎರಡರಿಂದಲಾಗಲೀ ಭಾಧ್ಯವಾಗಿ ಕಾಣಲ್ಪಡುವುದಿಲ್ಲ. ದೇಹಾತ್ಮತ್ವವು ಪ್ರತ್ಯಕ್ಷಸಿದ್ಧವೆಂದು ಹೇಳಕೂಡದು. 'ಮಮ ದೇಹಃ' ಎಂದು ಭೇದವೇ ಅನುಭೂತವಾಗಿದೆ. 'ಕೃಷ್ಣೋಽಹಂ' ಎನ್ನುವುದರಂತೆ ದೇಹಿಯಲ್ಲಿ ದೇಹದಲ್ಲಿರತಕ್ಕ ಕಾರ್ಷ್ಣ್ಯಾರೋಪವು. ಅದರಲ್ಲಿ ಕೃಷ್ಣಶಬ್ದವು ಔಪಚಾರಿಕವು. ಹುಟ್ಟುವಾಗಲೇ ಮೂಕನಾದವನಿಗೂ ಕೆಸರಿನಿಂದ ಲಿಪ್ತವಾದ ಬಟ್ಟೆಯಲ್ಲಿ ಕಪ್ಪು, ಎನ್ನುವ ಬುದ್ಧಿಯು ಹುಟ್ಟುವುದರಿಂದ ಕೃಷ್ಣಶಬ್ದಕ್ಕೆ ಕೇವಲ ಉಪಚಾರತ್ವವಲ್ಲ. ಮತ್ತೆ ಕಾರ್ಷ್ಣ್ಯವೇ ಕರ್ದಮೋಪಾಧಿಕವಾಗಿದೆ ಎಂದು ಕೂಡುತ್ತದೆ. ಹಾಗಾದರೆ ಸ್ವತಃ ಶುಕ್ಲವಾದ ಪಟಕ್ಕೆ ಹೇಗೆ ಕರ್ದಮೋಪಾಧಿಕೃತವಾದ ಕಾರ್ಷ್ಣ್ಯವಿದೆಯೋ, ಹಾಗೆಯೇ ಸ್ವತಃಚಿದ್ರೂಪನಾದ ಆತ್ಮನಿಗೂ ನನಗೆ ತೋರತಕ್ಕ ಕಾರ್ಷ್ಣ್ಯವು ಅಭ್ರಾಂತವೇ, ದೇಹೋಪಾಧಿಕವೆಂದು ಏಕೆ ಆಗಲಾರದು? ಕರ್ದಮೋಪಾಧಿಕವೆಂದೇ ತೋರುತ್ತದೆ. ಶುಕ್ಲಪಟದಲ್ಲಿಯೂ ಕಾರ್ಷ್ಣ್ಯವು ಭ್ರಾಂತವಲ್ಲವೆನ್ನುತ್ತಾರೆ.

**ನ್ಯಾಯಸುಧಾ—** ಉಪಜೀವ್ಯತ್ವಾದಿ ಗುಣದಿಂದ ಮಾತ್ರ ಇತರದಿಂದ ಪ್ರತ್ಯಕ್ಷವು ಪ್ರಬಲವೆಂದಲ್ಲ. ಮತ್ತೆ ಸ್ವಭಾವತೋಽಪಿ ಪ್ರಬಲವೇ ಎನ್ನುತ್ತಾರೆ.

**ಮೂ ॥ ಕ್ವ ಚ ಪ್ರತ್ಯಕ್ಷತಃ ಪ್ರಾಪ್ತಮನುಮಾಗಮಬಾಧಿತಂ ॥ ೬೪ ॥**
**ದೇಹಾತ್ಮತ್ವಂ ಯದಿ ನ ತತ್ಪ್ರಾಪ್ತಂ ಪ್ರತ್ಯಕ್ಷತಃ ಕ್ವಚಿತ್ ।**
**ಮಮ ದೇಹ ಇತಿ ಹ್ಯೇವ ನ ದೇಹೋಽಹಮಿತಿ ಪ್ರಮಾ ॥ ೬೫ ॥**
**ಉಪಚಾರಶ್ಚ ಕೃಷ್ಣೋಽಹಮಿತಿ ಕರ್ದಮಲೇಪನೇ ।**
**ವಸ್ತ್ರಸ್ಯ ಯದ್ವದೇವಂ ಸ್ಯಾದ್ಯದ್ಯುಪಾಧಿಕೃತಂ ತದಾ ।**
**ಸ್ವತಃ ಶುಕ್ಲತ್ವವತ್ಕಾರ್ಷ್ಣ್ಯಂ ನ ಮಮೇತಿ ಪ್ರತೀಯತೇ ॥ ೬೬ ॥**

**ಅ ॥** ಪ್ರತ್ಯಕ್ಷತಃ ಪ್ರಾಪ್ತಂ=ಸಾಕ್ಷಾತ್ಕಾರ ಸಿದ್ಧವಾದುದು, ಅನುಮಾಗಮಬಾಧಿತಂ= ಅನುಮಾನ ಆಗಮಗಳಿಂದ ಬಾಧಿಸಿಕೊಳ್ಳಲ್ಪಟ್ಟದ್ದು, ಕ್ವಚ=ಎಲ್ಲಿ, (ದೃಷ್ಟಂ=ಕಾಣಲ್ಪಟ್ಟದೆ.) (ಅಂದರೆ, ಪ್ರತ್ಯಕ್ಷ ಪ್ರಾಪ್ತವಾದುದು ಎಲ್ಲಿಯಾದರೂ ಅನುಮಾನ, ಆಗಮಗಳಿಂದ ಬಾಧಿತ ವಾದುದಾಗಿ ಕಂಡಿದ್ದರೆ ಆಗ ಅನುಮಾನಾದಿಗಳಿಂದ ಪ್ರತ್ಯಕ್ಷಕ್ಕೆ ದೌರ್ಬಲ್ಯವನ್ನು ತಿಳಿಯುತ್ತಿದ್ದೆವು. ಹಾಗೆ ಎಲ್ಲಿಯೂ ಕಂಡುಬರಲಿಲ್ಲ.) (ದೇಹಕ್ಕೆ ಆತ್ಮತ್ವವು ಪ್ರತ್ಯಕ್ಷದಿಂದ ಪ್ರಾಪ್ತವಾದಾಗ್ಯೂ 'ದೇಹೋ ನಾತ್ಮಾ ಭೂತತ್ವಾತ್ ಕಾರ್ಯತ್ವಾತ್ ಘಟವತ್=ಶರೀರವು ಆತ್ಮವಲ್ಲ ಭೂತವಾಗಿರುವುದರಿಂದ, ಕಾರ್ಯವಾಗಿರುವುದರಿಂದ ಘಟದಂತೆಯೇ, ಇತ್ಯಾದ್ಯನುಮಾನಗಳಿಂದಲೂ '**ತಂ ಸ್ವಾಚ್ಛರೀರಾತ್ಪ್ರವೃಹೇತ್**' ಜೀವನನ್ನು ತನ್ನ ಶರೀರದೆಶೆಯಿಂದ ಭಿನ್ನನನ್ನಾಗಿ ತಿಳಿಯಬೇಕು. ಇತ್ಯಾದ್ಯಾಗಮಗಳಿಂದಲೂ ಬಾಧಿತವಾಗಿ ದೃಷ್ಟವಾಗಿದೆ. ಆದುದರಿಂದ ಪ್ರತ್ಯಕ್ಷಸಿದ್ಧವಾದುದು ಅನುಮಾನಾಗಮಗಳಿಂದ ಬಾಧಿತವಾಗುವುದಿಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—) ದೇಹಾತ್ಮತ್ವಂ=ಶರೀರಕ್ಕೆ ಆತ್ಮತ್ವವು, ಪ್ರತ್ಯಕ್ಷತಃ ಪ್ರಾಪ್ತಂ=ಪ್ರತ್ಯಕ್ಷದಿಂದ ಪ್ರಾಪ್ತವಾದುದು, ಅನುಮಾಗಮಬಾಧಿತಂ=ಅನುಮಾನ ಆಗಮಗಳಿಂದ ಬಾಧಿಸಿಕೊಳ್ಳಲ್ಪಟ್ಟದ್ದಾಗಿ, (ದೃಷ್ಟಮಿತಿ ಭ್ರೂಯಾತ್) ಯದಿ=ಕಂಡದೆ ಎಂದು ಹೇಳುವುದಾದರೆ, (ಆಗ) ತತ್=ಅದು, ನ=ಅಲ್ಲ(ವೆನ್ನುತ್ತೇವೆ.) (ಏಕೆ ಕೂಡುವುದಿಲ್ಲವೆಂದರೆ,) ತತ್=ದೇಹಾತ್ಮತ್ವವು, ಕ್ವಚಿತ್=ಪಂಡಿತರಲ್ಲಿಯೂ, ಪಾಮರರಲ್ಲಿಯೂ ಎಲ್ಲಿಯೂ, ಪ್ರತ್ಯಕ್ಷತಃ ಪ್ರಾಪ್ತಂ=ಸಾಕ್ಷಾತ್ಕಾರದಿಂದ ಪ್ರಾಪ್ತವಾದುದೇ, ನ= ಆಗುವುದಿಲ್ಲ. (ಅಂದರೆ ಅನುಮಾನಾದಿಗಳಿಂದ ಯಾವ ಪ್ರತೀತಿಯು ಬಾಧಿತವಾಗಿಯದೆ ಎಂದು ಹೇಳುವಿರೋ, ಅಂತಹ ದೇಹಾತ್ಮತ್ವ ಪ್ರತೀತಿಯೇ ಇಲ್ಲ. ಯಾವ ನಾಸ್ತಿಕಾದಿಗಳು ದೇಹವನ್ನೇ ಜೀವನನ್ನಾಗಿ ತಿಳಿಯುತ್ತಾರೋ ಅವರ ಅಪ್ರತೀತಿಯೂ ಕೂಡ ಇಂದ್ರಿಯದಿಂದ ಹುಟ್ಟಿದ್ದಲ್ಲ. ಮತ್ತೆ ಅನುಮಾನಾಭಾಸ=ಆಗಮಾಭಾಸಗಳಿಂದಲೇ ಹುಟ್ಟಿದ್ದು) (ಪಂಡಿತರಿಗೆ ಶರೀರವೇ ಆತ್ಮನೆನ್ನುವ ಪ್ರತೀತಿಯು ಇಲ್ಲದಿರಲಿ, ಪಾಮರರಿಗೆ ಈ ಪ್ರತೀತಿಯು ಇದ್ದೇ ಇದೆ ಎಂದರೆ, ಹಾಗೆ ಹೇಳಕೂಡದು. ಏಕೆಂದರೆ— (ಅದನ್ನುಪಪಾದಿಸುತ್ತಾರೆ.) ಮಮದೇಹಃ ಇತ್ಯೇವ=(ಎಲ್ಲಾ ಜನರಿಗೂ) ನನ್ನ ಶರೀರವು ಎಂದೇ, ಪ್ರಮಾ ಹಿ=ಪ್ರತೀತಿಯುಷ್ಟೇ, ದೇಹಃ ಅಹಂ=ಶರೀರವು ನಾನು, ಇತಿ=ಹೀಗೆ, ಪ್ರಮಾ ನ ಹಿ=ಪ್ರತೀತಿಯು (ಯಾರಿಗೂ) ಇಲ್ಲವಷ್ಟೆ? ಅಥವಾ ಹಿ= ಯಾವ ಕಾರಣದ್ದೆಶೆಯಿಂದ, (ಸರ್ವರಿಗೂ) ಮಮದೇಹಃ ಇತ್ಯೇವ ಪ್ರಮಾ=ನನ್ನ ಶರೀರವು ಎಂದೇ ಸಮ್ಯಕ್ ಪ್ರತೀತಿಯು (ಯಾವಾಗಲೂ ಇದೆ. ಆದಕಾರಣ) ದೇಹಃ ಅಹಂ ಇತಿ ಪ್ರಮಾ=ಶರೀರವು ನಾನು ಎನ್ನುವ ದೇಹಾಭೇದ ಪ್ರತೀತಿಯು, ನ ಹಿ=ಇಲ್ಲ. (ದೇಹೋಽಹಂ ಎಂದು ದೇಹಾಭೇದ ಪ್ರತೀತಿಯು ಇಲ್ಲದಿದ್ದರೂ ದೇಹ ಧರ್ಮಗಳಾದ ಕಾರ್ಷ್ಣ್ಯಾದಿಗಳು ತನ್ನಲ್ಲಿ

ರುತ್ತವೆ ಎನ್ನುವ ಪ್ರತೀತಿಯು 'ಕೃಷ್ಣಃ ಅಹಂ' ಇದುಮೊದಲಾದ ವ್ಯವಹಾರವು ಇರುವುದರಿಂದ ಇದ್ದೇ ಇದೆ. ಆ ಪ್ರತೀತಿಯು ಅನುಮಾನ, ಆಗಮಗಳಿಂದ ಉಂಟಾದುದು ಅಲ್ಲವಾದುದರಿಂದ ಪ್ರತ್ಯಕ್ಷಜನ್ಯವೆಂದೇ ಒಪ್ಪಬೇಕು. ಅದು ಅನುಮಾನಾದಿಗಳಿಂದ ಬಾಧಿತವಾಗುತ್ತದೆ. ಆದ ಕಾರಣ ಇದೇವೇ ಪ್ರತ್ಯಕ್ಷ ಪ್ರಾಪ್ತವಾದುದು ಅನುಮಾನ, ಆಗಮಗಳಿಂದ ಬಾಧಿತವಾಗುವು ದೆನ್ನುವಲ್ಲಿ ಉದಾಹರಣವು ಆಗುವುದು ಎಂದರೆ) ಕೃಷ್ಣಃ ಅಹಂ ಇತಿ= (ಕೃಷ್ಣೋಽಹಂ ಎನ್ನುವ ಪ್ರತೀತಿಯು ಯಾರಿಗೂ ಇರುವುದಿಲ್ಲ.) ಕೃಷ್ಣೋಽಹಂ ಎನ್ನುವ ವ್ಯವಹಾರವಾದರೂ, ಉಪ ಚಾರಶ್ಚ=ಕಪ್ಪುದೇಹವು ಆತ್ಮನಿಗೆ ಇದ್ದುದರಿಂದ ಅಮುಖ್ಯವು. (ಈ ವಿಷಯದಲ್ಲಿ ದೃಷ್ಟಾಂತ ವನ್ನು ಹೇಳುತ್ತಾರೆ.) ಯದ್ವತ್=ಹೇಗೆ, ವಸ್ತ್ರಸ್ಯ=ವಸ್ತ್ರಕ್ಕೆ, ಕರ್ದಮಲೇಪನೇ=ಕೆಸರಿನ ಲೇಪವಾದಾಗ, ಕೃಷ್ಣಂ ವಸ್ತ್ರಂ ಎಂದು ಅಮುಖ್ಯ ವ್ಯವಹಾರವಾಗುತ್ತದೋ,) ಹೀಗೆಯೇ ಪ್ರಕೃತದಲ್ಲಿಯೂ, ಕೃಷ್ಣೋಽಹಂ ಎನ್ನುವ ವ್ಯವಹಾರವು, ಸ್ಯಾತ್=ಆಗುವುದು. (ಅಂದರೆ— ಯಾವುದು ವಸ್ತ್ರವು ಬಿಳಿಪು ಆಗಿದೆ. ಕೆಸರಿನಿಂದ ಸಂಬಂಧವಾಗಿದೆ ಎಂದು ಚೆನ್ನಾಗಿ ತಿಳಿದು ಕೊಳ್ಳುತ್ತಾನೋ, ಆತನಿಗೆ ವಸ್ತ್ರವು ಕಪ್ಪು ಎನ್ನುವ ಪ್ರತೀತಿಯು ಇಲ್ಲ. ವಸ್ತ್ರದಲ್ಲಿ ಕಪ್ಪುಬಣ್ಣ ಇಲ್ಲದಿದ್ದರೂ ಕಪ್ಪುಬಣ್ಣ ಉಳ್ಳ ಕೆಸರಿನ ಸಂಬಂಧವಿದ್ದುದರಿಂದ ಕಪ್ಪು ವಸ್ತ್ರವೆಂದು ವ್ಯವಹಾರ ವನ್ನೂ ಮಾಡುತ್ತಾರೆ. ಅದರಂತೆಯೇ ಕಪ್ಪುಬಣ್ಣ ಉಳ್ಳ ದೇಹಸಂಬಂಧವು ಆತ್ಮನಿಗೆ ಇರುವುದ ರಿಂದ ಕೃಷ್ಣೋಽಹಂ ಎಂದು ವ್ಯವಹಾರಮಾತ್ರವೇ ಅಲ್ಲದೆ ದೇಹಧರ್ಮವಾದ ಕಾರ್ಷ್ಣ್ಯಾದಿಗಳಿಗೆ ಆತ್ಮನಲ್ಲಿ ಪ್ರತೀತಿಯು ಇರುವುದಿಲ್ಲ.) (ಹಾಗಾದರೆ ವಸ್ತ್ರದಲ್ಲಿ ಕೆಸರು ಎನ್ನುವ ಉಪಾಧಿಯಿಂದ ಮಾಡಲ್ಪಟ್ಟ ಕಾರ್ಷ್ಣ್ಯವು ಹೇಗೋ ಹಾಗೆಯೇ ಆತ್ಮನಲ್ಲಿ ದೇಹೋಪಾಧಿಯಿಂದ ಮಾಡಲ್ಪಟ್ಟ ಕಾರ್ಷ್ಣ್ಯವಿದೆ ಎಂದರೆ—) ಯದಿ=ಯಾವಪಕ್ಷದಲ್ಲಿ, ಉಪಾಧಿಕೃತಂ=(ವಸ್ತ್ರದಲ್ಲಿದ್ದಂತೆಯೇ ಆತ್ಮನಲ್ಲಿ)ದೇಹೋಪಾಧಿಕೃತವಾದ ಕಾರ್ಷ್ಣ್ಯಂ=ಕಾರ್ಷ್ಣ್ಯವು, (ಇದೆ ಎಂದು ಅದರ ಪ್ರತೀತಿಯು ಊಹಿಸಲ್ಪಡುತ್ತದೋ) ತದಾ= ಆಗ, (ಪ್ರತ್ಯಕ್ಷದಿಂದ ಪ್ರತೀತವಾದುದಕ್ಕೆ ಅನುಮಾನಾದಿ ಗಳಿಂದ ಬಾಧವು ಎನ್ನುವಲ್ಲಿ ಇದು ಉದಾಹರಣವಲ್ಲ.) (ಹೇಗೆಂದರೆ—) ಸ್ವತಃ=ಸ್ವಾಭಾವಿಕ ವಾಗಿ, ಶುಕ್ಲತ್ವವತ್=ಶೌಕ್ಲ್ಯದಂತೆಯೇ, ಮಮ=ನನಗೆ, ಕಾರ್ಷ್ಣ್ಯಂ=ಕೃಷ್ಣತ್ವವು, ನ=ಇಲ್ಲ. ಇತಿ=ಹೀಗೆ, ಪ್ರತೀಯತೇ=ತೋರುತ್ತದೆ. ಅಂದರೆ ವಸ್ತ್ರದಲ್ಲಿ ಕಾರ್ಷ್ಣ್ಯವು ಕರ್ದಮೋಪಾಧಿ ಯಿಂದ ಮಾಡಲ್ಪಟ್ಟದ್ದು ಎಂದು ತೋರುತ್ತದೆ ಎಂದು ತಿಳಿಯತಕ್ಕದ್ದು. ಸ್ವಾಭಾವಿಕವಾಗಿ ಈ ವಸ್ತ್ರವು ಬಿಳಿಪೇ, ಕಪ್ಪಲ್ಲ. ಕಪ್ಪು ಎನ್ನುವುದು ಔಪಾಧಿಕವಾದುದು. ಹಾಗೆಯೇ ಇಲ್ಲಿಯೂ ಸ್ವಾಭಾವಿಕವಾಗಿ ನಾನು ರೂಪವಿಲ್ಲದಿರುವವನೇ ಕಪ್ಪು ಎನ್ನುವುದು ನನ್ನ ಸ್ವಭಾವವಲ್ಲ. ಮತ್ತೆ ದೇಹರೂಪವಾದ ಉಪಾಧಿಯಿಂದ ಮಾಡಲ್ಪಟ್ಟದ್ದು ಎಂದು ತೋರುತ್ತದೆ. ಹೀಗೆ ಅಂಗೀಕರಿಸ ಬೇಕು. ಅಂತೂ ಈ ಪ್ರತೀತಿಯು ಯಥಾರ್ಥವಾಗಿರುವುದರಿಂದ ಇದಕ್ಕೆ ಅನುಮಾನಾದಿಗಳಿಂದ ಬಾಧವಿಲ್ಲ ॥ ೬೪ ॥ ೬೫ ॥ ೬೬ ॥

ಸ. ರ. ವಿ— ಹಾಗಾದರೆ ಪಟಕ್ಕೂ ಕೆಸರಿಗೂ ಭೇದಪ್ರತೀತಿಯಿದ್ದಪ್ರಯುಕ್ತ ವಸ್ತ್ರದಲ್ಲಿ ತೋರುವ ಕಪ್ಪು ಕೆಸರಿನಿಂದ ಆದದ್ದು ಎಂದು ತಿಳಿಯಲಿಕ್ಕೆ ಶಕ್ಯವಾಗುತ್ತದೆ. ದೇಹ-ಆತ್ಮರಿಗೆ ಭೇದಪ್ರತೀತಿಯಿಲ್ಲದಿರುವುದರಿಂದ ಆತ್ಮನಲ್ಲಿ ತೋರುವ ಕಾರ್ಷ್ಣ್ಯವು ದೇಹೋಪಾಧಿನಿಮಿತ್ತಕವೆನ್ನು ವುದು ಕೂಡುವುದಿಲ್ಲ. 'ಕೃಶಃ ಅಹಂ' ಎಂದು ದೇಹ-ಆತ್ಮರಿಗೆ ಅಭೇದಪ್ರತೀತಿಯನ್ನಂಗೀಕರಿಸಿ 'ಮಮ ದೇಹಃ' ಎನ್ನುವ ತೋರುವ ಭೇದವಾದರೂ 'ಮಮ ಚೈತನ್ಯಂ' ಎನ್ನುವುದರಂತೆ ಔಪಚಾರಿಕವೆಂದೂ ಹೇಳಲಿಕ್ಕೆ ಶಕ್ಯವಾಗುತ್ತದೆ. ಪಶ್ವಾದಿಗಳಿಗೂ ಪಶುತುಲ್ಯರಾದ ಮನುಷ್ಯ ರಿಗೂ ದೇಹಾತ್ಮಭೇದಜ್ಞಾನವು ಸಂಭಾವಿತವಲ್ಲವೆಂದರೆ—

ನ್ಯಾಯಸುಧಾ— (1) 'ಕೃಷ್ಣಃ ಅಹಂ' ಎನ್ನುವ ಪ್ರತೀತಿಯು ಪ್ರತ್ಯಕ್ಷದಿಂದ ಹುಟ್ಟತಕ್ಕದ್ದು, ಆದುದರಿಂದ ಪ್ರತ್ಯಕ್ಷಸಿದ್ಧವಾದುದಕ್ಕೆ ಅನುಮಾನಾದಿಗಳಿಂದ ಬಾಧವಿಲ್ಲ ವೆನ್ನುವುದು ಹೇಗೆಂದರೆ—

**ಮೂ ॥ ಕಥಂ ಚ ಭೇದೋ ದೇಹಾದೇರಾತ್ಮನೋ ನ ಪ್ರತೀಯತೇ ॥ ೬೭ ॥**

**ಜಾತಮಾತ್ರಾ ಮೃಗಾ ಗಾವೋ ಹಸ್ತಿನಃ ಪಕ್ಷಿಣೋ ಝಷಾಃ ।**

**ಭಯಾಭಯಸ್ವಭೋಗಾದೌ ಕಾರಣಾನಿ ವಿಜಾನತೇ ॥ ೬೮ ॥**

**ಅಸ್ಮೃತೌ ಪೂರ್ವದೇಹಸ್ಯ ವಿಜ್ಞಾನಂ ತತ್ಕಥಂ ಭವೇತ್ ।**

**ಅನ್ವಯವ್ಯತಿರೇಕಾದೇರನುಸಂಧಾನವಿಸ್ಮೃತೌ ॥ ೬೯ ॥**

ಅ ॥ ದೇಹಾದೇಃ=ಶರೀರ, ಶರೀರಧರ್ಮಾದಿಗಳದೆಶೆಯಿಂದ, ಆತ್ಮನಃ=ಜೀವನಿಗೆ, ಭೇದಃ=ಭೇದವು, ಕಥಂ=ಹೇಗೆ, ನ ಪ್ರತೀಯತೇ ಚ=ತೋರುವುದಿಲ್ಲ. ಅಥವಾ ಆತ್ಮನಃ= ಜೀವನದೆಶೆಯಿಂದ, ದೇಹಾದೇಃ = ಶರೀರಾದಿಗಳಿಗೆ, ಭೇದಃ = ಭೇದವು, ಕಥಂ = ಹೇಗೆ, ನ ಪ್ರತೀಯತೇ ಚ=ತೋರುವುದಿಲ್ಲ. (ಅಂದರೆ ದೇಹಾದಿಗಳ ಸಂಘಾತಕ್ಕೂ ಆತ್ಮನಿಗೂ ಪರಸ್ಪರ ಭೇದವೂ ಅದರ ಧರ್ಮಗಳಿಗೂ ಪರಸ್ಪರವಾಗಿ ಅಸಂಸರ್ಗವೂ ಪ್ರತೀತವೇ ಆಗುತ್ತದೆ.) ಅದು ಹೇಗೆಂದರೆ—) ಜಾತಮಾತ್ರಾಃ=ಹುಟ್ಟಿದವುಗಳೇ, ಮೃಗಾಃ=ಮೃಗಗಳು, ಗಾವಃ=ಗೋವು ಗಳು, ಹಸ್ತಿನಃ=ಆನೆಗಳು, ಪಕ್ಷಿಣಃ=ಪಕ್ಷಿಗಳು, ಝಷಾಃ=ಮತ್ಸ್ಯಗಳು, ಭಯಾಭಯ ಸ್ವಭೋಗಾದೌ ಭಯ = ಭೀತಿಯು, ಅಭಯ = ಭಯವಿಲ್ಲದಿರುವಿಕೆಯು, ಸ್ವ = ತನ್ನ, ಭೋಗಾದೌ=ಸುಖದುಃಖಾದಿಗಳ ಅನುಭವದಲ್ಲಿ, ಕಾರಣಾನಿ=ಕಾರಣಗಳನ್ನು, ವಿಜಾನತೇ= ತಿಳಿಯುತ್ತಾರೆ. ಪೂರ್ವದೇಹಸ್ಯ=ಮೊದಲಿನ ಶರೀರದ, ಅಸ್ಮೃತೌ=ಸ್ಮರಣೆಯಿಲ್ಲದಿದ್ದರೆ, ತತ್ ವಿಜ್ಞಾನಂ=ಇದು ಭಯಾದಿಗಳಿಗೆ ಕಾರಣವು, ಇದು ಭೋಗಾದಿಕಾರಣವು ಎನ್ನುವ ಜ್ಞಾನವು, ಕಥಂ=ಹೇಗೆ, ಭವೇತ್=ಆಗುವುದು? (ಪೂರ್ವದೇಹದ ಸ್ಮರಣವಿಲ್ಲದಿದ್ದರೆ ಹಿಂದೆ ಹೇಳಿದ ವಿಜ್ಞಾನವು ಹೇಗೆ ಆಗಲಾರದು ಎಂದರೆ) ಅನ್ವಯವ್ಯತಿರೇಕಾದೇಃ=ಅನ್ವಯವ್ಯತಿರೇಕ ದೃಷ್ಟಾಂತಾದಿಗಳಿಗೆ, ವಿಸ್ಮರಣವಾದರೆ, (ಇಷುಮಾತ್ರವಲ್ಲ, ಮತ್ತೆ) ಅನುಸಂಧಾನವಿಸ್ಮೃತೌ= ತಥಾಚಾಯಂ ಎನ್ನುವ ಅನುಸಂಧಾನಕ್ಕೂ ವಿಸ್ಮೃತಿಯಾದರೆ, ವಿಜ್ಞಾನಂ=ವಿಜ್ಞಾನವು, ಕಥಂ=ಹೇಗೆ, ಭವೇತ್=ಆದೀತು?

ತಾ ॥ ಸ. ರ. ವಿ— (1) ಜಾತಿಮಾತ್ರಸ್ಮರಣದಿಂದ ಪೂರ್ವದೇಹದಲ್ಲಿ ಅನುಭೂತ ವಾದುದನ್ನು ಅನುಸಂಧಾನ ಮಾಡುವವರಿಗೆ ಹೇಗೆ ದೇಹಕ್ಕೂ ಆತ್ಮನಿಗೂ ಭೇದಜ್ಞಾನವು ಸಿದ್ಧ ವಾಗಿದೆಯೋ,ಹಾಗೆಯೇ ಅನ್ನಪಾನಾದಿಗಳೂ ಇಷ್ಟಸಾಧನಗಳೆಂದು ಪೂರ್ವದೇಹದಲ್ಲಿ ಅನುಭೂತ ವಾದ ಅನ್ವಯವ್ಯಾಪ್ತಿಯನ್ನೂ ವ್ಯತಿರೇಕ ವ್ಯಾಪ್ತಿಯನ್ನೂ ಅನುಸಂಧಾನಮಾಡಿಕೊಂಡೇ ಬಾಲ್ಯಾ ವಸ್ಥೆಯಲ್ಲಿ ಮನುಷ್ಯಾದಿಗಳಿಗೆ ಪ್ರಥಮತಃ ಸ್ತನಪಾನಾದಿಗಳಲ್ಲಿ ಪ್ರವೃತ್ತಿಯು ಬರುವುದರಿಂದ ಎಲ್ಲರಿಗೂ ದೇಹಾತ್ಮಭೇದ ಜ್ಞಾನವು ಇದ್ದೇ ಇದೆ. ಆದಕಾರಣ ಗೃಹವೊದಲಾದುದು ನಷ್ಟವಾದಾಗ 'ನಷ್ಟಃ ಅಹಂ' ಎಂದೂ ಸಮೃದ್ಧವಾದಾಗ 'ಸಮೃದ್ಧಃ ಅಹಂ' ಎಂದೂ ವ್ಯವಹಾರದಂತೆಯೇ 'ಗೌರಃ ಅಹಂ' ಎನ್ನುವ ವ್ಯವಹಾರವೂ ಕೂಡ ದೇಹಕ್ಕೂ ಆತ್ಮನಿಗೂ ಅಭೇದಪ್ರತ್ಯಯನಿಮಿತ್ತಕವಲ್ಲ. ಮತ್ತೆ ಔಪಚಾರಿಕವೇ.

ತಾ || ನ್ಯಾಯಸುಧಾ— (1) ಸಿಂಹವ್ಯಾಘ್ರಮೊದಲಾದವುಗಳು ಭಯಕಾರಣಗಳು, ಮಾತೃಾದಿಗಳು ಅಭಯಕಾರಣಗಳು, ಸ್ತನಪಾನಾದಿಗಳು ಸುಖಕಾರಣಗಳು, ಶಂಕ್ವಾದಿಗಳಿಂದ ನಯನದೊಳಗೆ ಕಂಡೂಯನ ಮೊದಲಾದವುಗಳು ದುಃಖಕಾರಣಗಳೆಂದು ಗೋವು ಮೊದಲಾದ ಪಶ್ವಾದಿಗಳು ತಿಳಿಯುತ್ತಾವೆ. ಆದುದರಿಂದಲೇ ಸಿಂಹಾದಿಗಳ ಧ್ವನಿಮಾತ್ರದಿಂದ ಓಡುತ್ತವೆ. ಮಾತ್ರಾದಿಗಳ ಸಮೀಪಕ್ಕೆ ಹೋಗುತ್ತವೆ. ಸ್ತನಪಾನಾದಿಗಳಿಗೋಸ್ಕರ ಪ್ರವರ್ತಿಸುತ್ತವೆ. ಶಂಕುವಿನಿಂದ ಕಂಡೂಯಾದಿಗಳನ್ನು ಬಿಡುತ್ತವೆ. (2) ಪಶ್ವಾದಿಗಳಿಗೆ ಕೂಡ ಸ್ತನಪಾನಾದಿಗಳಲ್ಲಿ ಪ್ರವೃತ್ತಿಯೂ ಶಂಕು ಕಂಡೂಯನಾದಿಗಳಿಂದ ನಿವೃತ್ತಿಯೂ ದೃಷ್ಟವಾಗಿದೆಯಷ್ಟೆ. ಆದಕಾರಣ ಅವುಗಳಲ್ಲಿ ಮೃಗಾದಿಗಳಿಗೆ ರಾಗದ್ವೇಷಗಳು ಇರುತ್ತವೆಂದು ಅನುಮೇಯಿಸುತ್ತೇವೆ. ರಾಗದ್ವೇಷಗಳೇ ಪ್ರವೃತ್ತಿಗೆ ಕಾರಣಗಳೆಂದು ಅಸ್ಮದಾದಿಗಳಲ್ಲಿ ನಿಶ್ಚಿತಗಳಾಗಿವೆ. ರಾಗದಿಂದ ಇಷ್ಟಸಾಧನತ್ವಜ್ಞಾನವು. ಮತ್ತು ದ್ವೇಷದಿಂದ ಅನಿಷ್ಟಸಾಧನತ್ವ ಜ್ಞಾನವು. ಇಷ್ಟಾನಿಷ್ಟಸಾಧಕತ್ವ ಜ್ಞಾನವೇ ರಾಗಾದಿಗಳಿಗೆ ಕಾರಣವೆಂದು ನಿಶ್ಚಿತವಾಗಿದೆ. ಈ ಇಷ್ಟಾನಿಷ್ಟಸಾಧನತ್ವ ಜ್ಞಾನವು ಪ್ರತ್ಯಕ್ಷದಿಂದ ಹುಟ್ಟಿದ್ದೆಂದು ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ— ಕಾರ್ಯಕಾರಣಭಾವವು ಕಾಲ ಘಟಿತವಾದುದರಿಂದ ಅತೀಂದ್ರಿಯವಾಗಿದೆ. ಮತ್ತೆ ಅನುಮಾನದಿಂದಲೂ ಉಪದೇಶದಿಂದಲೂ ಉಂಟಾಗತಕ್ಕದು ಎಂದು ಹೇಳಬೇಕು. ಪಶುಗಳಿಗೆ ಉಪದೇಶವು ಕೂಡಲಾರದು. ಆದುದರಿಂದ ಜನ್ಮಾಂತರದಲ್ಲಿ ಅನುಭೂತವಾದುದರ ಸ್ಮೃತಿಯನ್ನೇ ಅಂಗೀಕರಿಸಬೇಕು. ಆದುದರಿಂದ ಮೃಗಾದಿಗಳಿಗೆ ಪೂರ್ವದೇಹದ ಸ್ಮರಣವು ಇದ್ದೇ ಇದೆ. ಹಾಗೆಯೇ ಮನುಷ್ಯಾದಿಗಳಿಗೂ ಪೂರ್ವದೇಹಸ್ಮರಣವಿದೆ ಎಂದು ಸಿದ್ಧವಾಯಿತು || ೬೭ || ೬೮ || ೬೯ ||

ಮೃಗಾದಿಗಳಿಗೆ ಪೂರ್ವದೇಹಸ್ಮರಣೆವಿದ್ದಂತೆಯೇ ಮನುಷ್ಯಾದಿಗಳಿಗೂ ಪೂರ್ವದೇಹ ಸ್ಮರಣೆವಿದೆ ಎಂದು ಸಿದ್ಧವಾದಾಗ್ಯೂ ಪ್ರಕೃತದಲ್ಲಿ ಏನಾಯಿತೆಂದರೆ—

**ಮೂ || ಯದಾ ದೇಹಾಂತರಜ್ಞಾನಂ ದೇಹೈಕ್ಯಾವಸಿತಿಃ ಕುತಃ ।**
**ವ್ಯಾಪ್ತತ್ವಾದಾತ್ಮನೋ ದೇಹೇ ವ್ಯವಹಾರೇಷ್ವಪಾಟವಾತ್ || ೭೦ ||**
**ಭೇದಜ್ಞಾನೇಽಪಿ ಚಾಂಗಾರವಹ್ನಿವತ್ಸ್ವವಿವಿಕ್ತವತ್ ।**
**ಭವಂತಿ ವ್ಯವಹಾರಾಶ್ಚ ನ ಹಿ ಪ್ರತ್ಯಕ್ಷಗಾನಪಿ || ೭೧ ||**
**ಅರ್ಥಾನ್ಯಥಾನುಭವತಃ ಪ್ರತಿಪಾದಯಿತುಂ ಕ್ಷಮಾಃ ।**
**ಲೋಕಾಸ್ತತೋ ಹಿ ಪ್ರತ್ಯಕ್ಷಸಿದ್ಧಂ ನಾನ್ಯೇನ ಕೇನಚಿತ್ ।**
**ಶಕ್ಯಂ ವಾರಯಿತುಂ ಕ್ವಾಪಿ [ತಚ್ಚೇನ್ನೋತ್ತರಗೋಚರಂ] || ೭೨ ||**

ಅ || ಯದಾ=ಯಾವಾಗ, ದೇಹಾಂತರಜ್ಞಾನಂ=ದೇಹಾಂತರ ಸ್ಮರಣವೋ, (ಅಂದರೆ ಈಗ ಈ ದೇಹದಲ್ಲಿರತಕ್ಕ ನನಗೆ ಕೇವಲ ಇದೇ ದೇಹವಲ್ಲ. ಮತ್ತೆ ಇದಕ್ಕಿಂತ ಮೊದಲು ಬೇರೆ ಶರೀರವಿತ್ತು ಎಂದು ದೇಹಾಂತರಸ್ಮರಣವು ಪ್ರಮಿತವಾಗುವುದೋ), (ತದಾ=ಆಗ) ದೇಹೈಕ್ಯಾವಸೀತಿಃ = ಈ ಶರೀರದಿಂದ ತನಗೆ ಐಕ್ಯನಿಶ್ಚಯವು, ಕುತಃ = ಯಾವುದರಿಂದ ಬರುವುದು? (ಆದರೆ ಅನೇಕ ಮಣಿಗಳಲ್ಲಿ ಸಂಬದ್ಧವಾದ ಸೂತ್ರ (ಹಗ್ಗ) ವೆನ್ನೆಂಬಂತೆ ಅನೇಕ ದೇಹಗಳಲ್ಲಿ ಸಂಬದ್ಧನಾದ ತನ್ನನ್ನು ನೋಡತಕ್ಕ ತನಗೆ ದೇಹದ್ದೆಶೆಯಿಂದ ಅತ್ಯಂತವಾಗಿ ಭೇದನಿಶ್ಚಯವೇ ಯುಕ್ತವು. ತಥಾಚ ಕಾಷ್ಣ್ಯಾದಿಗಳಿಗೆ ಅಸಂಸರ್ಗಜ್ಞಾನವೂ ಸುಸ್ಥವೇ. ಆದುದರಿಂದ 'ಮಮ ದೇಹಃ' ಎಂದು ದೇಹಭೇದ ಪ್ರತ್ಯಯವು ಯಥಾರ್ಥವೆಂದೇ ಯುಕ್ತವು. 'ಕೃಷ್ಣಃ ಅಹಂ'

ಎಂದು ತನ್ನಲ್ಲಿ ದೇಹಧರ್ಮವಾದ ಕಾರ್ಷ್ಣ್ಯಾದಿಗಳ ಪ್ರತ್ಯಯವು ಔಪಚಾರಿಕವೆಂದಂಗೀಕರಿಸಬೇಕು). (ಸ. ರ. ವಿ— ಹಾಗಾದರೆ ನನ್ನ ಮನೆಯು ಇತ್ಯಾದಿಗಳಂತೆಯೇ ನನ್ನ ಶರೀರವು ಎಂದು ದೇಹಕ್ಕೂ, ಆತ್ಮನಿಗೂ ಭೇದಜ್ಞಾನವಿದ್ದರೆ ನನ್ನ ಶರೀರವು ಬಿಳಿಪು, ನ ತ್ವಹಂ ಗೌರಃ= ನಾನು ಬಿಳುಪು ಅಲ್ಲ ಎನ್ನುವ ವ್ಯವಹಾರವು ಜನರಿಗೆ ಏಕೆ ಆಗಲಾರದು, ಎಂದರೆ—) ಭೇದಜ್ಞಾನೇऽಪಿ='ಮಮ ದೇಹಃ' ಎಂದು ಭೇದಜ್ಞಾನವಿದ್ದಾಗ್ಯೂ, ಆತ್ಮನಃ=ಜೀವನಿಗೆ, ದೇಹೇ= ಶರೀರದಲ್ಲಿ, ವ್ಯಾಪ್ತತ್ವಾತ್=ವ್ಯಾಪ್ತಿಯಿದ್ದ ಪ್ರಯುಕ್ತ, (ಅಂದರೆ ಜೀವನು ಶರೀರದಲ್ಲಿ ವ್ಯಾಪಿಸಿಕೊಂಡು ಪ್ರಕಾಶದಿಂದ ಇದ್ದ ಪ್ರಯುಕ್ತ) ಅಂಗಾರವಹ್ನಿವತ್=ಅಂಗಾರದಲ್ಲಿ ವ್ಯಾಪ್ತವಾದ ವಹ್ನಿಯಲ್ಲಿ ವಹ್ನಿಯು ಎನ್ನುವ ವ್ಯವಹಾರವಿದ್ದಂತೆಯೇ, (ಜನರಿಗೆ) ವ್ಯವಹಾರೇಷು = ಶಬ್ದಪ್ರಯೋಗಗಳಲ್ಲಿ, ಅಪಾಟವಾತ್=ಅತ್ಯಂತವಾಗಿ ಭಿನ್ನಗಳಾಗಿವೆ ಎಂದು ತಿಳಿಯುವುದರಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದ, ಸ್ವಾವಿವಿಕ್ತವತ್=ಸ್ವಾಭಿನ್ನದಲ್ಲಿಯೂ, ಸ್ವಸಂಸೃಷ್ಟದಲ್ಲಿಯೂ ಹೇಗೆ ವ್ಯವಹಾರವೋ ಹಾಗೆಯೇ, ವ್ಯವಹಾರಾಶ್ಚ=ಹಿಂದೆ ಹೇಳಿದ 'ಕೃಷ್ಣಃ ಅಹಂ' ಇತ್ಯಾದಿ ವ್ಯವಹಾರಗಳು, ಭವಂತಿ=ಆಗುತ್ತವೆ. ಅಂದರೆ, ಸ್ಪಷ್ಟವಾದ ಭೇದಜ್ಞಾನವಿಲ್ಲವೆನ್ನುವ ಅಭಿಪ್ರಾಯದಿಂದಲೇ ಈ ವ್ಯವಹಾರವು. ಆತ್ಮನು ದೇಹದಲ್ಲಿ ವ್ಯಾಪಿಸಿಕೊಂಡು ಇದ್ದುದರಿಂದಲೂ ದೇಹವು ಅತ್ಯಂತ ಪ್ರೇಮಾಸ್ಪದವಾಗಿರುವುದರಿಂದಲೂ ಅದರಲ್ಲಿ ರಾಗಾದಿಗಳು ಕೂಡುತ್ತವೆ.) (ಹಾಗಾದರೆ ಲೋಕದಲ್ಲಿ ಜ್ಞಾನವೇ ವ್ಯವಹಾರಕಾರಣವು. ಅಂತಹ ಭೇದಜ್ಞಾನವಿದ್ದರೆ ವ್ಯವಹಾರಗಳಲ್ಲಿ ಅಭೇದ ಸಾಮರ್ಥ್ಯವು ಹೇಗೆಂದರೆ—) ಲೋಕಾಃ=ಯಮಲರಿಗೆ ಅತ್ಯಂತ ವಿವೇಕವನ್ನು ತಿಳಿದಿರುವ ಮಾತ್ರಾದಿಗಳೂಕೂಡ (ಈ ಯಮಲರು ಹೇಗೆ ವಿವಿಕ್ತರನ್ನಾಗಿ ತಿಳಿಯಬೇಕು ಎಂದು ಪ್ರಶ್ನಿಸಲ್ಪಟ್ಟವರು ಹೀಗೆ ಎಂದು) ಯಥಾನುಭವತಃ = ಸ್ವಪ್ರತ್ಯಕ್ಷ ಅನುಭವಾನುಸಾರವಾಗಿ, ಪ್ರತ್ಯಕ್ಷಗಾನಪಿ=ಪ್ರತ್ಯಕ್ಷ ವಿಷಯಗಳಾದ, ಅರ್ಥಾನ್ = ಅರ್ಥಗಳನ್ನೂಕೂಡ, (ಪರರನ್ನು) ಪ್ರತಿಪಾದಯಿತುಂ = ಪ್ರತಿಪಾದಿಸಲಿಕ್ಕೆ, ನ ಕ್ಷಮಾಃ = ಸಮರ್ಥರಾಗುವುದಿಲ್ಲ. (ಇತ್ಯಾದಿಯು ಅನುಭವಸಿದ್ಧವು.) ಆದುದರಿಂದ ತಿಳಿದಿದ್ದ ಕೆಲವು ವಿಷಯಗಳನ್ನು ಮತ್ತೊಬ್ಬನಿಗೆ ತಿಳಿಸಲಿಕ್ಕೆ ಸಾಧ್ಯವಿಲ್ಲವೆನ್ನುವುದು ಅನುಭವಸಿದ್ಧವಾಗಿರುವುದರಿಂದ ಹಿಂದೆ ಹೇಳಿದ ಆಕ್ಷೇಪಕ್ಕೆ ಅವಕಾಶವಿಲ್ಲ. (ಶುಕ್ತಿರಜತಾದಿ ಪ್ರತ್ಯಕ್ಷಗಳಿಗೆ ಅನುಮಾನಾದಿಗಳಿಂದ ಬಾಧವಿಲ್ಲವೆನ್ನುವುದು ಬೇರೆಕಡೆ ಉಪಪಾದಿತವಾಗಿದೆ ಎನ್ನುವ ಅಭಿಪ್ರಾಯದಿಂದ '**ಕ್ವಚ ಪ್ರತ್ಯಕ್ಷತಃ ಪ್ರಾಪ್ತಂ**' ಇತ್ಯಾದಿಗಳಿಂದ ಹೇಳಿದ್ದನ್ನು ಉಪಸಂಹಾರಮಾಡುತ್ತಾರೆ.) ತತಃ=ಕೆಲವುಕಡೆ ವ್ಯವಹಾರಮಾತ್ರವಲ್ಲದೆ ಪ್ರತೀತಿಯೇ ಇಲ್ಲದಿರುವುದರಿಂದಲೂ ಕೆಲವುಕಡೆ ಪ್ರತೀತಿ ಇದ್ದರೂ ಅದು ಪ್ರತ್ಯಕ್ಷದಿಂದ ಹುಟ್ಟದಿರುವುದರಿಂದಲೂ, ಕೆಲವುಕಡೆ ಪ್ರತ್ಯಕ್ಷ ಪ್ರತೀತಿಯಿದ್ದರೂ ಯಥಾರ್ಥವಾಗಿರುವುದರಿಂದಲೂ, ಕೆಲವುಕಡೆ ಅಯಥಾರ್ಥವಾಗಿದ್ದರೂ ಪ್ರಬಲ ಪ್ರತ್ಯಕ್ಷದಿಂದಲೇ ಬಾಧವಿದ್ದುದರಿಂದಲೂ, ಕ್ವಾಪಿ=ಎಲ್ಲಿಯೂ, ಅನ್ಯೇನ ಕೇನಚಿತ್=ಇತರವಾದ ಯಾವುದರಿಂದಲೂ, ಅಂದರೆ, ಅನುಪಜೀವ್ಯವಾದ ಆಗಮಾದಿಗಳಿಂದ, ಪ್ರತ್ಯಕ್ಷಸಿದ್ಧಂ = ಪ್ರತ್ಯಕ್ಷ ಸಿದ್ಧವಾದುದನ್ನು, ವಾರಯಿತುಂ=ನಿವಾರಿಸಲಿಕ್ಕೆ, ಶಕ್ಯಂ ನ ಹಿ = ಸಮರ್ಥವಲ್ಲವಷ್ಟೆ. (ತಥಾಚ ಸ್ವಭಾವತಃ ಪ್ರಬಲವಾದ ಪ್ರತ್ಯಕ್ಷದಿಂದ ವಿರುದ್ಧಗಳಾದ ಅನುಮಾನ, ಆಗಮಗಳು ಆಭಾಸಗಳೇ.)

**ತಾ || ಸ. ರ. ವಿ**— (1) ಹೇಗೆ ಒಳಗೂ, ಹೊರಗೂ ಅಗ್ನಿಯಿಂದ ಆಕ್ರಾಂತವಾದ ಅಯಃ ಪಿಂಡವನ್ನು ಅಗ್ನಿಯ ಸಕಾಶದೆಶೆಯಿಂದ ಪ್ರತ್ಯೇಕವಾಗಿ ವ್ಯವಹರಿಸಲಿಕ್ಕೆ ಅಶಕ್ಯವಾಗಿರುವುದರಿಂದ 'ಅಯೋ ದಹತಿ' ಎಂದು ಹೇಗೆ ವ್ಯವಹರಿಸುತ್ತಾರೋ, ಹಾಗೆಯೇ ತನ್ನಿಂದ ವ್ಯಾಪ್ತವಾಗಿರುವುದರಿಂದ ತನ್ನಿಂದ ಪ್ರತ್ಯೇಕವಾಗಿ ವ್ಯವಹರಿಸಲಿಕ್ಕೆ ಅಶಕ್ಯರಾದ ಜನರಿಂದ ಆತ್ಮದೇಹ

ಭೇದವು ಪ್ರತ್ಯಕ್ಷಸಿದ್ಧವಾಗಿದ್ದಾಗ್ಯೂ ದೇಹವು ಸ್ವಾಭಿನ್ನದಂತೆ ಹೇಳಲ್ಪಡುತ್ತದೆ. ಆದುದರಿಂದ ದೇಹಾತ್ಮಾಭೇದವು ಪ್ರತ್ಯಕ್ಷವಲ್ಲ. ಪ್ರಮಾಣಾಂತರದಿಂದ ಬೋಧ್ಯವೂ ಅಲ್ಲ. ಪ್ರಾದೇಶಪರಿಮಿತ ಶ್ಚಂದ್ರಮಾಃ=ಚಂದ್ರನು ಗೇಣುಪರಿಮಿತನು ಎನ್ನುವ ಪ್ರತ್ಯಕ್ಷವಾದರೂ ದೂರಸ್ಥತ್ವ ದೋಷದಿಂದ ಕೂಡಿರುವುದರಿಂದ ಅಪಟುವಾಗಿರುವ ಪ್ರಯುಕ್ತ ಪ್ರಮಾಣಾಂತರದಿಂದ ಬಾಧಿಸಲ್ಪಡುತ್ತದೆ. ದೃಢಪ್ರತ್ಯಕ್ಷವಾದರೂ ಯಾವುದರಿಂದಲೂ ಬಾಧ್ಯವಲ್ಲ. ಆದುದರಿಂದ ದೃಢ ಪ್ರತ್ಯಕ್ಷಸಿದ್ಧ ವಾದ ಜಗತ್ತಿಗೆ ಯಾವಾಗಲೂ ಪ್ರಮಾಣಾಂತರದಿಂದ ಬಾಧ್ಯತ್ವವಿಲ್ಲ. ॥ ೨೦ ॥ ೨೧ ॥ ೨೨ ॥

ಪ್ರತ್ಯಕ್ಷವು ವರ್ತಮಾನಾರ್ಥವನ್ನು ಮಾತ್ರ ಗೃಹಿಸುವುದಾದರೂ ಜಗತ್ತಿಗೆ ಕಾಲತ್ರಯ ಬಾಧ್ಯತ್ವವನ್ನು ಹೇಳುತ್ತದೆಂದು ಪರರು ಹೇಳುವ 'ನೇಹ ನಾನಾಸ್ತಿ' ಇತ್ಯಾದಿ ಆಗಮಾದಿ ಗಳಿಗೆ ಪ್ರತ್ಯಕ್ಷ ವಿರೋಧವನ್ನು ಪರಿಹರಿಸಲು ಅಸಾಧ್ಯವೇ. ಆದಾಗ್ಯೂ ಪ್ರಸಕ್ತಿಯು ಬರುವಾಗ ವಸ್ತು ಸ್ಥಿತಿಯನ್ನು ಹೇಳಬೇಕು ಎನ್ನುವ ಅಭಿಪ್ರಾಯದಿಂದ ಪ್ರತ್ಯಕ್ಷವು ವರ್ತಮಾನಾರ್ಥವನ್ನು ಮಾತ್ರ ಗೃಹಿಸುತ್ತದೆನ್ನುವ ನಿಯಮವನ್ನು ತಿರಸ್ಕರಿಸುವುದಕ್ಕೋಸ್ಕರ ಮೇಲಿನ ಪ್ರಕರಣವನ್ನು ಆರಂಭಿಸುವವರಾಗಿ ಸಾಕ್ಷಿಪ್ರತ್ಯಕ್ಷಕ್ಕಾದರೂ ವರ್ತಮಾನಮಾತ್ರ ಗ್ರಾಹಿತ್ವ ನಿಯಮವನ್ನು ತಿರಸ್ಕರಿಸುತ್ತಾರೆ—

**ಮೂ ॥ [ಶಕ್ಯಂ ವಾರಯಿತುಂ ಕ್ವಾಪಿ] ತಚ್ಚೇನ್ನೋತ್ತರಗೋಚರಂ ।**
**ಕಥಮೇವೋತ್ತರಃ ಕಾಲಃ ತದ್ಗೋ ಮೋಕ್ಷಶ್ಚ ಗಮ್ಯತೇ ॥ ೨೩ ॥**

ಅ ॥ ತತ್=ಪ್ರತ್ಯಕ್ಷ ವಿಶೇಷವಾದ ಸಾಕ್ಷಿಯು, ನೋತ್ತರಗೋಚರಂ ಚೇತ್=ಉತ್ತರ ಕಾಲವನ್ನೂ, ಅತೀತಕಾಲವನ್ನೂ ವಿಷಯೀಕರಿಸದೆ ಇರುವುದಾದರೆ ಅಂದರೆ ವರ್ತಮಾನಕಾಲ ವನ್ನು ಮಾತ್ರ ವಿಷಯೀಕರಿಸುವುದಾದರೆ, ಉತ್ತರಃ ಕಾಲಃ=ಉತ್ತರಕಾಲವು (ಅತೀತ ಕಾಲವೂ ಕೂಡ) ಕಥಮೇವ=ಹೇಗೆತಾನೆ, ಗಮ್ಯತೇ=ತಿಳಿಯಲ್ಪಡುತ್ತದೆ? (ಯಾರು ಅಖಂಡ ಕಾಲ ವೆಂದು ಹೇಳುತ್ತಾರೋ ಅವರ ಕಾಲದಲ್ಲಿ ಉಪಾಧಿಭೇದವನ್ನು ಅಂಗೀಕರಿಸಲೇ ಬೇಕು. ಇಲ್ಲ ವಾದರೆ ಲಡಾದಿ ಎಲ್ಲಾ ಆಖ್ಯಾತ ಪ್ರತ್ಯಯಗಳಿಗೂ ಒಂದೇ ಅರ್ಥವು ಬರಬೇಕಾಗುವುದು. ಆದ ಕಾರಣ ಸ್ವಾಭಾವಿಕವಾದ ಅಥವಾ ಔಪಾಧಿಕವಾದ ಉತ್ತರ ಕಾಲವಿದೆ ಎಂದು ಒಪ್ಪಲೇಬೇಕು. ಉತ್ತರ ಕಾಲವನ್ನು ಸಾಕ್ಷಿಯು ಗ್ರಹಿಸುತ್ತದೆಂದು ಒಪ್ಪದಿದ್ದರೆ ನಮಗೆ ಏನು ಕೆಡಕು ಎಂದರೆ—) ತದ್ಗಃ=ಉತ್ತರಕಾಲದಲ್ಲಿರತಕ್ಕ, ಮೋಕ್ಷಃ=ಮುಕ್ತಿಯು, ಚ = ಉತ್ತರಕಾಲವು ತಿಳಿಯದೆ ಇದ್ದರೆ, ಕಥಮೇವ=ಹೇಗೆತಾನೆ, ಗಮ್ಯತೆ=ತಿಳಿಯಲ್ಪಡುತ್ತದೆ?

ತಾ ॥ ಉತ್ತರಕಾಲವು ತಿಳಿಯದೆ ಇದ್ದರೆ ಉತ್ತರಕಾಲ ಸಂಬಂಧವಾದ ಮೋಕ್ಷವೂ ಸರ್ವಥಾ ತಿಳಿಯಲ್ಪಡಲಾರದು. ವಿಶೇಷಣ ಜ್ಞಾನವಿಲ್ಲವಾದರೆ ವಿಶಿಷ್ಟಜ್ಞಾನವೂ ಬರಲಾರದು. ಮೋಕ್ಷವು ಮುಂದಕ್ಕೆ ಆಗುವುದು ಎಂದು ಜ್ಞಾನವಿಲ್ಲವಾದರೆ ಅದಕ್ಕಾಗಿ ಪ್ರಯತ್ನವೂ ಇಲ್ಲದೆ ಹೋಗಬೇಕಾಗುವುದು. ಮತ್ತು ಮೋಕ್ಷದಲ್ಲಿ ಸರ್ವಕ್ಕೂ ಬಾಧವು ಬರುವುದು ಎನ್ನುವುದೂ ಕೂಡದೆ ಹೋಗಬೇಕಾಗುವುದು ॥ ೨೩ ॥

ಶುಕ-ವಾಸುದೇವಾದಿಗಳು ಜ್ಞಾನದಿಂದಲೇ ಮುಕ್ತರಾಗಿರುವರು. ನಾನೂ ಕೂಡ ಮುಕ್ತನಾಗುವೆನು. ಇತ್ಯಾದಿ ಜ್ಞಾನವು ಆಗಮದಿಂದಲೇ ಬರುವುದು. ಇಲ್ಲಿ ಸಾಕ್ಷಿಯು ಅತೀತವಾದ ಅರ್ಥವನ್ನೂ, ಭವಿಷ್ಯದರ್ಥವನ್ನೂ ವಿಷಯೀಕರಿಸುತ್ತದೆನ್ನುವುದರಿಂದ ಏನು ಪ್ರಯೋಜನವು ಎಂದರೆ—

**ಮೂ || ಆಗಮೋಽಪಿ ಹಿ ಸಾಮಾನ್ಯೇ ಸಿದ್ಧೇ ಪ್ರತ್ಯಕ್ಷತಃ ಪುನಃ ||**
**ವಿಶೇಷಂ ಗಮಯೇದೇವ ಕಥಂ ಶಕ್ತಿಗ್ರಹೋಽನ್ಯಥಾ || ೭೪ ||**

ಅ || ಆಗಮೋಽಪಿ = ಆಗಮವೂ ಕೂಡ, ಸಾಮಾನ್ಯೇ = ಅನ್ವಯಸಾಮಾನ್ಯವುಳ್ಳ ಪದಾರ್ಥಸಮುದಾಯವು, ಪ್ರತ್ಯಕ್ಷತಃ=ಪ್ರಮಾಣಾಂತರದಿಂದ, ಸಿದ್ಧೇ=ಸಿದ್ಧವಾಗುತ್ತಿರಲು, ಪುನಃ=ಮತ್ತು ಆಮೇಲೆ, ವಿಶೇಷಂ=ಅನ್ವಯ ವಿಶೇಷವುಳ್ಳ ಆಯಾಯ ಪದಾರ್ಥಸಮುದಾಯವನ್ನೇ, ಗಮಯೇದೇವ=ತಿಳಿಸಿಕೊಡುವುದು, ಎಂದೇ ಸರಿ. (ಪುನಃ ಪದಾರ್ಥಗಳನ್ನು ತಿಳಿಸಿಕೊಡುವುದಿಲ್ಲ.) ಹಿ='ನದ್ಯಾಸ್ತೀರೇ ಪಂಚ ಫಲಾನಿ ಸಂತಿ' ಇತ್ಯಾದಿಗಳಲ್ಲಿ ಹಾಗೆ ದೃಷ್ಟವಾಗಿದೆ ಎಂದು ಪ್ರಸಿದ್ಧವು. (ಮೊದಲು ಪದಾರ್ಥ ಸಿದ್ಧಿಯಿಂದ ಏನು ಪ್ರಯೋಜನವು ಎಂದರೆ—) ಅನ್ಯಥಾ= ಪದಾರ್ಥಗಳು ಮೊದಲು ಸಿದ್ಧಗಳಾಗಲಿಲ್ಲವೆಂದು ಹೇಳುವುದಾದರೆ, ಶಕ್ತಿಗ್ರಹಃ=ಶಕ್ತಿಜ್ಞಾನವು, ಕಥಂ=ಹೇಗೆ ಬರುವುದು? ಅಂದರೆ ಪದಾರ್ಥಗಳು ಮೊದಲು ಸಿದ್ಧಗಳಾಗದೆ ಇದ್ದರೆ ಪದಗಳಿಗೆ ಪದಾರ್ಥಗಳಲ್ಲಿ ವಾಚಕತ್ವ ಶಕ್ತಿಜ್ಞಾನವು ಬಾರದೆ ಹೋಗಬೇಕಾಗುವುದು. ವಿಷಯವೇ ತಿಳಿಯದೆ ಇದ್ದರೆ ಶಕ್ತಿಯನ್ನು ತಿಳಿಯಲಿಕ್ಕೆ ಅಸಾಧ್ಯವು. ಕಟ್ಟಿಗೆಯನ್ನೇ ತಿಳಿಯದೆ ಇದ್ದವನಿಗೆ ಕುಠಾರಕ್ಕೆ ಕಟ್ಟಿಗೆಯನ್ನು ಭೇದಿಸತಕ್ಕ ಶಕ್ತಿಯನ್ನು ತಿಳಿಯಲಿಕ್ಕೆ ಸಾಧ್ಯವಿಲ್ಲವಷ್ಟೇ || ೭೪ ||

ಪದಗಳಿಗೆ ಶಕ್ತಿಜ್ಞಾನವು ಬರುವುದಕ್ಕಾಗಿ ಪದಾರ್ಥಜ್ಞಾನವೂ ಆವಶ್ಯಕವಾಗಲಿ, ಶಕ್ತಿಜ್ಞಾನವೇ ಏತಕ್ಕೆ ಬೇಕು? ಎಂದರೆ—

**ಮೂ || ಅತೀತಾನಾಗತಾರ್ಥೇಷು ಜಾತೇ ಶಕ್ತಿಗ್ರಹೇಽಖಿಲಂ |**
**ವಿಶೇಷಂ ಜ್ಞಾಪಯೇದ್ವಾಕ್ಯಂ ನ ತದಜ್ಞಾತಶಕ್ತಿಕೇ || ೭೫ ||**

ಅ || ಅಖಿಲಂ ವಾಕ್ಯಂ = ಎಲ್ಲಾ ವಾಕ್ಯವು, ಅತೀತಾನಾಗತಾರ್ಥೇಷು = ಅತೀತ-ಅನಾಗತ ವಸ್ತುಗಳಲ್ಲಿ, ಅಂದರೆ ಪದಗಳಿಗೆ ಪದಾರ್ಥಗಳಲ್ಲಿ, ಶಕ್ತಿಗ್ರಹೇ = ವಾಚಕತ್ವಶಕ್ತಿಜ್ಞಾನವು, ಜಾತೇ = ಉಂಟಾದರೇನೇ, ವಿಶೇಷಂ = ಅನ್ವಯವಿಶೇಷವನ್ನು, ಜ್ಞಾಪಯೇತ್ = ತಿಳಿಸಿಕೊಡುವುದು. ತತ್=ಆ ವಾಕ್ಯವು, ಅಜ್ಞಾತಶಕ್ತಿಕೇ=ಪದಾರ್ಥಗಳಲ್ಲಿ ಪದಸಮೂಹವು ತಿಳಿಯಲ್ಪಡದಿರುವ ಶಕ್ತಿಯುಳ್ಳದ್ದಾಗುತ್ತಿರಲು, ವಿಶೇಷಂ=ವಿಶೇಷವನ್ನು, ನ ಜ್ಞಾಪಯೇತ್= ತಿಳಿಸಿಕೊಡಲಾರದು. (ಹೀಗೆ ವಾಕ್ಯದಿಂದ ವಾಕ್ಯಾರ್ಥಜ್ಞಾನವು ಉಂಟಾಗಬೇಕಾದರೆ ಅನ್ವಯವ್ಯತಿರೇಕಗಳಿಂದ ಶಕ್ತಿಗ್ರಹವು ಅಂಗವೆಂದು ತಿಳಿಯುತ್ತದೆ. ಆದುದರಿಂದ ಇದು ಆವಶ್ಯಕವೇ ||೭೫||

ಶಕ್ತಿಜ್ಞಾನವು ಅಂಗವಾಗಿರಲಿ, ಅದು ವರ್ತಮಾನಾರ್ಥಗಳಲ್ಲಿಯೇ ಉಪಯೋಗವಿಲ್ಲದಿರುವುದರಿಂದ ಭೂತ-ಭವಿಷ್ಯದರ್ಥಗಳಲ್ಲಿ ಬೇಡ ಎಂದರೆ—

**ಮೂ || ಶಕ್ತಿಶ್ಚೇದ್ವರ್ತಮಾನೇ ಸ್ಯಾನ್ನಾತೀತಾನಾಗತಂ ವದೇತ್ |**
**ಯದಿ ಶಕ್ತಿಗ್ರಹೋಽನ್ಯತ್ರ ಕಥಂ ಸ ಸ್ಯಾತ್ತದಗ್ರಹೇ || ೭೬ ||**

ಅ || ವರ್ತಮಾನೇ = ವರ್ತಮಾನಾರ್ಥದಲ್ಲಿಯೇ, ಶಕ್ತಿಃ ಸ್ಯಾಚ್ಚೇತ್ = ಪದಗಳಿಗೆ ಶಕ್ತಿಯು ಗೃಹೀತವಾಗುವುದಾದರೆ, (ವಾಕ್ಯಂ=ವಾಕ್ಯವು) ಅತೀತಾನಾಗತಂ=ಭೂತ-ಭವಿಷ್ಯದರ್ಥಸಂಗ್ರಹವನ್ನು, ನ ವದೇತ್=(ಸಹಕಾರಿಯೇ ಇಲ್ಲದಿರುವುದರಿಂದ) ಪ್ರತಿಪಾದಿಸಲಾರದು. (ಅತೀತಾನಾಗತಾರ್ಥಗಳಲ್ಲಿಯೂ ಪದಗಳಿಗೆ ಶಕ್ತಿಗ್ರಹವಿರಲಿ. ಅದರಿಂದ ಏನಾಯಿತೆಂದರೆ—)

ಅನ್ಯತ್ರ=ವರ್ತಮಾನದೆಶೆಯಿಂದ ಇತರಗಳಾದ ಭೂತಭವಿಷ್ಯದರ್ಥಗಳಲ್ಲಿಯೂ, ಶಕ್ತಿಗ್ರಹಃ= ಪದಗಳಿಗೆ ಶಕ್ತಿಜ್ಞಾನವು, ಯದಿ=ಯಾವಪಕ್ಷದಲ್ಲಿ, (ಅಂಗೀಕೃತಃ=ಅಂಗೀಕರಿಸಿಕೊಳ್ಳಲ್ಪಡು ತ್ತದೋ, ತದಾ=ಆಗ,) ಸಃ=ಆ ಭೂತಭವಿಷ್ಯದರ್ಥಗಳಲ್ಲಿ ಪದಗಳಿಗೆ ಶಕ್ತಿಜ್ಞಾನವು, ತದಗ್ರಹೇ=ಭೂತಭವಿಷ್ಯದರ್ಥಗಳನ್ನು ತಿಳಿಯದೆಯಿದ್ದರೆ, ಕಥಂ=ಹೇಗೆ, ಸ್ಯಾತ್=ಆಗು ವುದು. ಅಂದರೆ ವಿಷಯವನ್ನು ಬಿಟ್ಟು ಶಕ್ತಿಯನ್ನು ತಿಳಿಯಲಿಕ್ಕೆ ಸಾಧ್ಯವೇ ಇಲ್ಲ. ಆದಕಾರಣ ಭೂತಭವಿಷ್ಯದರ್ಥಗಳ ಜ್ಞಾನವನ್ನು ಅಂಗೀಕರಿಸಲೇ ಬೇಕು.

ತಾ || **ನ್ಯಾಯಸುಧಾ**— ವಾಕ್ಯವಾದರೂ ಪದಾರ್ಥಸಂಸರ್ಗವಿಶೇಷರೂಪವಾದ ವಾಕ್ಯಾರ್ಥವನ್ನೇ ತಿಳಿಸಿಕೊಡುತ್ತದೆ. ಕೇವಲ ಪದಾರ್ಥವನ್ನು ತಿಳಿಸಿಕೊಡುವುದಿಲ್ಲ. ಅದಾದರೂ ಪದಗಳಿಗೆ ಪದಾರ್ಥಗಳಲ್ಲಿ ವಾಚಕತ್ವಶಕ್ತಿಜ್ಞಾನವನ್ನು ಅಪೇಕ್ಷಿಸುತ್ತದೆ. ಶಕ್ತಿಜ್ಞಾನವು ಪದಾರ್ಥಜ್ಞಾನವನ್ನು ಅಪೇಕ್ಷಿಸುತ್ತದೆ. ಪದಾರ್ಥಜ್ಞಾನವಾದರೂ ಪ್ರಮಾಣಾಂತರಾಧೀನ ವಾದುದು. ಪದವಾಕ್ಯಗಳಿಂದ ಹುಟ್ಟತಕ್ಕದ್ದಲ್ಲ. ಹಾಗಾದರೆ ಅನ್ಯೋನ್ಯಾಶ್ರಯಾದಿ ದೋಷವು ಬರಬೇಕಾಗುವುದು. ಎಲ್ಲಿ ಭೂತಭವಿಷ್ಯದರ್ಥಗಳ ಸಂಸರ್ಗವೇ ವಾಕ್ಯಾರ್ಥವೋ ಅಲ್ಲಿ ಭೂತ ಭವಿಷ್ಯದರ್ಥಗಳ ಜ್ಞಾನವೂ ಆವಶ್ಯಕವು. ಶುಕ-ವಾಮದೇವಾದಿಗಳು ಮುಕ್ತರಾಗಿರುವರು, ನಾನೂ ಮುಕ್ತನಾಗುವೆನು. ಇತ್ಯಾದಿಗಳೂ ಹಾಗೆಯೇ. ಆದುದರಿಂದ ಲುಙ್ ಲೃಙ್ ಇತ್ಯಾದಿಗಳೇ ಅಂತವಾಗಿವುಳ್ಳ ಪದಗಳಿಂದ ಹೇಳಲ್ಪಡುವ ಅತೀತಾನಾಗತ ಕಾಲಗಳಿಗೂ ಭೂತ ಭವಿಷ್ಯತ್ಕಾಲಸಂಬಂಧಿಗಳಾದ ಪದಾರ್ಥಗಳಿಗೂ ಜ್ಞಾನವನ್ನು ಆಗಮದಿಂದ ಹಿಂದೆ ಹೇಳಿದ ಅರ್ಥಜ್ಞಾನವನ್ನು ಇಚ್ಛಿಸತಕ್ಕ ಪರರೂ ಅಂಗೀಕರಿಸಲೇ ಬೇಕು. ಸಾಕ್ಷಿಯಿಲ್ಲದೆ ಅದು ಬರಲಾರದು ಆದಕಾರಣ ಭೂತಭವಿಷ್ಯದರ್ಥಗಳನ್ನು ಗ್ರಹಿಸತಕ್ಕ ಸಾಕ್ಷಿಗೆ ವರ್ತಮಾನಾರ್ಥ ಮಾತ್ರ ವಿಷಯತ್ವನಿಯಮವು ಸರ್ವಥಾ ಕೂಡಲಾರದು || ೭೬ ||

ಮೀಮಾಂಸಕ ಮತವನ್ನು ಅನುಸರಿಸಿ ಶಂಕಿಸುತ್ತಾರೆ—

**ಮೂ || ಸಾಮಾನ್ಯಂ ದೃಷ್ಟಮೇವಾಸಾವನ್ಯತ್ರ ಗಮಯೇದ್ಯದಿ ।**
**ಸಾಮಾನ್ಯವರ್ಜಿತಂ ವಸ್ತು ಸ್ವರೂಪಂ ಗಮಯೇತ್ಕಥಂ || ೭೭ ||**

ಅ || ಅಸೌ=ಈ ಶಬ್ದವು, ಸಾಮಾನ್ಯಂ=ಸಾಮಾನ್ಯವನ್ನು, ದೃಷ್ಟಮೇವ=ಶಬ್ದಶಕ್ತಿಗೆ ವಿಷಯವಾದುದಾಗಿ ತಿಳಿಯಲ್ಪಟ್ಟದ್ದನ್ನೇ, ಅನ್ಯತ್ರ=ಕಾಲಾಂತರದಲ್ಲಿಯೂ, ಯದಿ=ಯಾವ ಪಕ್ಷದಲ್ಲಿ, ಅನ್ಯತ್ರ=ಕಾಲಾಂತರದಲ್ಲಿಯೂ, ಗಮಯೇತ್=ತಿಳಿಸುವುದಾದರೆ, ಸಾಮಾನ್ಯ ವರ್ಜಿತಂ=ಸಾಮಾನ್ಯವಿರಹಿತವಾದ, ವಸ್ತುಸ್ವರೂಪಂ=ವಸ್ತುಸ್ವರೂಪವನ್ನು, ಕಥಂ=ಹೇಗೆ, ಗಮಯೇತ್=ತಿಳಿಸುವುದು.

ತಾ || **ನ್ಯಾಯಸುಧಾ**— (1) ಅಸೌ ಎನ್ನುವುದರಿಂದ ಪ್ರಕೃತ ವಾಕ್ಯದ ಏಕದೇಶ ದಲ್ಲಿರತಕ್ಕ ಶಬ್ದವನ್ನು ಇಟ್ಟುಕೊಳ್ಳಬೇಕು. (2) ಎಲ್ಲಾ ವಸ್ತುವೂ ಸಾಮಾನ್ಯ ವಿಶೇಷರೂಪ ವಾದುದು. ಅದರಲ್ಲಿ ಸಾಮಾನ್ಯಾಕಾರವೇ ಶಬ್ದದಿಂದ ಹೇಳಲ್ಪಡುತ್ತದೆ. ವಿಶೇಷವಾದರೂ ಲಕ್ಷ್ಯವೇ ಆಗಿದೆ. ಸಾಮಾನ್ಯವು ಅತೀತ-ಅನಾಗತ ವಿಶೇಷಗಳಲ್ಲಿ ಒಂದೇ. ಆ ಸಾಮಾನ್ಯವು ವರ್ತಮಾನಕಾಲಿಕವನ್ನು ಚಕ್ಷುರಾದಿಗಳಿಂದ ಶಬ್ದಶಕ್ತಿವಿಷಯವಾಗಿ ತಿಳಿಯಲ್ಪಟ್ಟದನ್ನೇ ಕಾಲಾಂತರದಲ್ಲಿಯೂ ಶಬ್ದವು ತಿಳಿಸಿಕೊಡುತ್ತದೆ. ಅತೀತ-ಅನಾಗತ ಅರ್ಥಗಳ ಜ್ಞಾನದಿಂದ ಪ್ರಯೋಜನವೇನು? ವಿಶೇಷಗಳು ಶಬ್ದವಾಚ್ಯಗಳಾದರೆ, ಅವುಗಳಿಗೆ ಅತೀತಾದಿ ರೂಪತ್ವವಿರುವು

ದರಿಂದ ಶಕ್ತಿಜ್ಞಾನಕ್ಕಾಗಿ ಅತೀತಾದಿ ಜ್ಞಾನವು ಅಪೇಕ್ಷಿತವಾಗುತ್ತಿತ್ತು. ಲುಙ್ ಲ್ಯೃಙ್ ಮೊದಲಾದವುಗಳ ಶಕ್ತಿಜ್ಞಾನಬರುವುದಕ್ಕಾಗಿ ಅತೀತಾದಿ ಕಾಲಜ್ಞಾನವೂ ಆವಶ್ಯಕವೆಂದು ಹೇಳಕೂಡದು. ಅಲ್ಲಿಯೂ ಕಾಲತ್ವಜಾತಿಯೇ ವಾಚ್ಯವಾಗಿದೆ. ವೈಶೇಷಿಕಾದಿಗಳಂತೆಯೇ ಮೀಮಾಂಸಕರಿಗೆ ಸಾಮಾನ್ಯ ವಿರಹಿತವಾದುದಾವುದೂ ಇಲ್ಲ. ಆದುದರಿಂದ ಶಕ್ತಿಜ್ಞಾನಕ್ಕಾಗಿ ಅತೀತಾದಿ ಜ್ಞಾನಾಪೇಕ್ಷೆಯಿಲ್ಲವೆಂದು ಪೂರ್ವಪಕ್ಷಮಾಡಿದರೆ— ಉತ್ತರವನ್ನು ಸಾಮಾನ್ಯಂ ಇತ್ಯಾದಿಗಳಿಂದ ಹೇಳಿದರು. (3) ಎಲ್ಲಾ ವಿಶೇಷಗಳಲ್ಲಿ ಅನುಗತವಾದ, ನಿತ್ಯವಾದ ಗೋತ್ವಾದಿ ಸಾಮಾನ್ಯವೇ ಗವಾದಿಶಬ್ದವಾಗಲಿ, ಸಾಸ್ನಾದಿಗಳುಳ್ಳ ವಿಶೇಷಗಳಾದರೂ ಲಕ್ಷ್ಯಗಳೇ ಆಗಿವೆ. ಆದರೂ ಇಷ್ಟು ಹೇಳಬೇಕು. ಸ್ವರೂಪಶಬ್ದವು ವಸ್ತುಸ್ವರೂಪಗಳನ್ನು ತಿಳಿಸುತ್ತದೋ ಇಲ್ಲವೋ, ತಿಳಿಸದೆ ಇರುವುದಾದರೆ ಅನುಭವವಿರೋಧವು. ತಿಳಿಸುವುದಾದರೆ ಯಾವ ವೃತ್ತಿಯಿಂದ? ಲಕ್ಷಣಾವೃತ್ತಿಯಿಂದ ಎಂದು ಹೇಳಕೂಡದು. ವಾಚ್ಯಾರ್ಥದ್ವಾರದಿಂದಲೇ ಲಕ್ಷಣಾವೃತ್ತಿಯು ಸಿಗುವುದು. ಸಾಮಾನ್ಯವೇ ವಾಚ್ಯವಾಗಿದೆ. ಸ್ವರೂಪಗಳಿಗಾದರೂ ಸಾಮಾನ್ಯವಲ್ಲ. ಆದುದರಿಂದ ಸ್ವರೂಪಶಬ್ದವು ವಸ್ತುಸ್ವರೂಪವನ್ನು ಹೇಳುತ್ತದೆ ಎಂದೇ ಅಂಗೀಕರಿಸಬೇಕು ॥ ೭೭ ॥

ಹಾಗಾದರೆ ಸರ್ವಸಾಮಾನ್ಯಗಳಿಗೆ ವಸ್ತುಸ್ವರೂಪದಿಂದ ಬಹಿರ್ಭೂತಗಳಾಗದೆ ಇರುವುದರಿಂದ ಸಾಮಾನ್ಯವಿಲ್ಲದಿರುವುದು, ವಸ್ತುಸ್ವರೂಪವೆನ್ನುವುದು ಹೇಗೆ ಕೂಡುತ್ತದೆ, ಎಂದರೆ—

**ಮೂ ॥ ನ ಸ್ವರೂಪತ್ವಸಾಮಾನ್ಯಂ ಕೇನಾಪ್ಯಂಗೀಕೃತಂ ಕ್ವಚಿತ್ ।**
**ಸ್ವರೂಪಂ ಚೇದನುಗತಂ ವ್ಯಾವೃತ್ತಂ ತತ್ರ ಕಿಂ ಭವೇತ್ ॥ ೭೮ ॥**

ಅ ॥ ಸ್ವರೂಪತ್ವಸಾಮಾನ್ಯಂ=ಸ್ವರೂಪತ್ವಸಾಮಾನ್ಯವು, ಕೇನಾಪಿ=ಯಾರಿಂದಲೂ, ಕ್ವಚಿತ್=ಎಲ್ಲಿಯೂ, ನಾಂಗೀಕೃತಂ=ಅಂಗೀಕರಿಸಿಕೊಳ್ಳಲ್ಪಡಲಿಲ್ಲ. ಸ್ವರೂಪಂ=ಸ್ವರೂಪವು, ಅನುಗತಂ ಚೇತ್=ಅನುಗತವಾದರೆ, ತತ್ರ=ವಸ್ತುವಿನಲ್ಲಿ, ವ್ಯಾವೃತ್ತಂ=ವ್ಯಾವೃತ್ತವಾದುದು, ಕಿಂ=ಯಾವುದು, ಭವೇತ್=ಆಗುವುದು.

ತಾ ॥ ನ್ಯಾಯಸುಧಾ— (1) ಸ್ವರೂಪದಲ್ಲಿ ಸಾಮಾನ್ಯಗಳು ಇವೆ ಎನ್ನುವುದು ಸತ್ಯವೇ. ಆ ಸಾಮಾನ್ಯಗಳು ಸ್ವರೂಪಶಬ್ದವಾಚ್ಯಗಳಲ್ಲ. ಸಾಸ್ನಾಶೃಂಗಗಳುಳ್ಳ ವಸ್ತುವಿನಲ್ಲಿ ಇರತಕ್ಕ ಪಶುತ್ವವು ಗೋಶಬ್ದವಾಚ್ಯವಲ್ಲವಷ್ಟೇ. ಮತ್ತೆ ಗೋತ್ವವೇ ಗೋಶಬ್ದವಾಚ್ಯವು. ಆದುದರಿಂದ ಇಲ್ಲಿಯೂ ಸ್ವರೂಪಶಬ್ದವಾಚ್ಯವಾದ ಸಾಮಾನ್ಯವನ್ನು ಅಂಗೀಕರಿಸುವವನು ಸ್ವರೂಪತ್ವವನ್ನೇ ಅಂಗೀಕರಿಸಬೇಕು. ಯಾವ ಪರೀಕ್ಷಕರೂ ಎಲ್ಲಿಯೂ ಅಂಗೀಕರಿಸದೆ ಇರುವುದರಿಂದ ಸ್ವರೂಪತ್ವಸಾಮಾನ್ಯವಾದರೂ ಇಲ್ಲವೇ ಇಲ್ಲ. (2) ಯಾರೂ ಕೂಡ ಸ್ವರೂಪತ್ವಸಾಮಾನ್ಯವನ್ನು ಅಂಗೀಕರಿಸುವುದು ಬೇಡ. ನಾನಾದರೂ ಅಂಗೀಕರಿಸುತ್ತೇನೆ. ಎಲ್ಲರೂ ಅಂಗೀಕರಿಸಿದ್ದನ್ನೇ ಅಂಗೀಕರಿಸಬೇಕೆನ್ನುವ ನಿಯಮವಿಲ್ಲ. ಹಾಗೆ ಇರುತ್ತಿದ್ದರೆ ಮತಭೇದವೇ ಕೂಡಲಾರದು, ಎಂದು ಔದ್ಧತ್ಯದಿಂದ ಹೇಳುವವನನ್ನುಕುರಿತು ಹೇಳುತ್ತಾರೆ. ಸ್ವರೂಪತ್ವವು ಅನುಗತವಾದರೆ ವಸ್ತುವಿನಲ್ಲಿ ವ್ಯಾವೃತ್ತವಾದುದು ಯಾವುದಿದೆ? ಹೀಗಾದರೆ ಪ್ರಶ್ನೆಯು ನಿರುತ್ತರವು ಆಗಬೇಕಾಗುವುದು ॥ ೭೮ ॥

ಅದು ಹೇಗೆಂದರೆ—

ಮೂ || ಸರ್ವಾನುಗತಧರ್ಮಾಣಾಮಂತೇ ಹಿ ಸ್ವತ್ವಮಿಷ್ಯತೇ ।
ಕಿಂ ವ್ಯಾವೃತ್ತಮಿತಿ ಪ್ರಶ್ನೇ ಸ್ವರೂಪಮಿತಿ ಕೇವಲಂ || ೭೯ ||
ಸ್ಯಾದುತ್ತರಂ ತತೋಽನ್ಯಚ್ಚೇತ್ತದೇವ ಸ್ವಯಮೇವ ನಃ ।
ಏವಂ ವ್ಯಾವೃತ್ತರೂಪೇಽಪಿ ಯದಾ ಶಕ್ತಿಗ್ರಹೋ ಭವೇತ್ || ೮೦ ||
ತಸ್ಯ ಸಾಮಾನ್ಯತೋ ಜ್ಞಾನಂ ವಿನಾ ಸ ಚ ಭವೇತ್ಕುತಃ ।
ಅತೋ ವಿಶೇಷ ಸಾಮಾನ್ಯರೂಪಂ ಸರ್ವಮಪೀಷ್ಯತೇ || ೮೧ ||

ಅ || ಹಿ=ಯಾವಕಾರಣದೆಶೆಯಿಂದ, ಸರ್ವಾನುಗತಧರ್ಮಾಣಾಂ=ಎಲ್ಲಾ ಅನುಗತ ಧರ್ಮಗಳಿಗೆ, ಅಂತೇ=ಅವಸಾನದಲ್ಲಿ, ಸ್ವತ್ವಂ=ಸ್ವರೂಪತ್ವವು, ಇಷ್ಯತೇ=(ಮೀಮಾಂಸಕರಿಂದ) ಅಂಗೀಕರಿಸಲ್ಪಡುತ್ತದೋ, (ಆದಕಾರಣ) ಕಿಂ=ಯಾವುದು, (ಅಲ್ಲಿ) ವ್ಯಾವೃತ್ತಂ=ವ್ಯಾವೃತ್ತವಾಗಿದೆ. ಇತಿ=ಹೀಗೆ, ಪ್ರಶ್ನೇ=ಪ್ರಶ್ನೆಯು ಮಾಡುತ್ತಿರಲು, ಸ್ವರೂಪಮಿತಿ ಕೇವಲಂ=ಕೇವಲ ಸ್ವರೂಪತ್ವವೆಂದೇ, ಉತ್ತರಂ=ಉತ್ತರವು, ಸ್ಯಾತ್=ಹೇಳಬೇಕಾಗುವುದು. (ಹಾಗಾದರೆ ಭೇದವೇ ವ್ಯಾವೃತ್ತವಾಗುವುದು. ಅದಕ್ಕೆ ಅನುಗತಿಯೂ, ಅನುಗತವಾದ ಆಧಾರತ್ವವೂ ಇಲ್ಲವೆಂದರೆ—) (ಒಂದೇ ಶಬ್ದಕ್ಕಾದರೆ,) ತತಃ = ಸ್ವರೂಪತ್ವದೆಶೆಯಿಂದ, ಅನ್ಯಚ್ಚೇತ್=ಭೇದರೂಪವಾದುದು ವ್ಯಾವೃತ್ತವು ಎಂದು ಅಂಗೀಕರಿಸಲ್ಪಡುವುದಾದರೆ, ತದೇವ=ಅದೇವೇ, ನಃ = ನಮಗೆ, ಸ್ವಯಮೇವ = ಸ್ವರೂಪವೇ, (ಯಾವುದಕ್ಕಾಗಿ ಸ್ವಸ್ವರೂಪವು ಉದಾಹೃತವಾಗಿದೆಯೋ ಅಲ್ಲಿ ಭೇದವೇ ಉದಾಹರಣವಾಗುವುದು.) (ಅದರಿಂದ ಪ್ರಕೃತಕ್ಕೆ ಏನಾಯಿತೆಂದರೆ—) ಏವಂ = ಹಿಂದೆ ಹೇಳಿದಪ್ರಕಾರ, ವ್ಯಾವೃತ್ತರೂಪೇಽಪಿ = ನಿಸ್ಸಾಮಾನ್ಯದಲ್ಲಿಯೂ, ಸ್ವರೂಪದಲ್ಲಿ ಆಗಲೀ, ಭೇದದಲ್ಲಿ ಆಗಲೀ, (ಸ್ವರೂಪಭೇದಾದಿಶಬ್ದಗಳಿಗೆ) ಶಕ್ತಿಗ್ರಹಃ = ವಾಚಕತ್ವಶಕ್ತಿಜ್ಞಾನವು, ಯದಾ = ಯಾವಾಗ, ಭವೇತ್ = ಅಂಗೀಕೃತವಾಗುವುದೋ, (ತದಾ = ಆಗ) ಸ ಚ = ಆ ಶಕ್ತಿಗ್ರಹವು, ತಸ್ಯ = ಸ್ವರೂಪಾದಿಗಳ, ಸಾಮಾನ್ಯತಃ ಜ್ಞಾನಂ ವಿನಾ=ಸಾಮಾನ್ಯಾಕಾರವಾಗಿ ಜ್ಞಾನವಿಲ್ಲದೆ, ಕುತಃ=ಹೇಗೆ, ಭವೇತ್=ಆಗುವುದು? (ತಥಾಚ ಸಂಬಂಧಜ್ಞಾನಕ್ಕೆ ಸಂಬಂಧಿಜ್ಞಾನಪೂರ್ವಕತ್ವವು ನಿಯತವಾಗಿರುವುದರಿಂದ ಸರ್ವಥಾ ಶಕ್ತಿಗ್ರಹವು ಆಗಲಾರದು. ಅದರ ಜ್ಞಾನವನ್ನೂ ಅಂಗೀಕರಿಸಲೇ ಬೇಕು. ಸರ್ವ ಸ್ವರೂಪಗಳದ್ದೂ, ಭೇದಗಳದ್ದೂ ಜ್ಞಾನವಿದ್ದರೆ ಸಾರ್ವಜ್ಞ್ಯವು ಪ್ರಾಪ್ತವಾಗಬೇಕಾಗುವುದು ಎಂದರೆ ಸಾಮಾನ್ಯತಃ ಜ್ಞಾನದಿಂದಲೇ ವ್ಯುತ್ಪತ್ತಿಯು ಕೂಡುತ್ತದೆ. ವಿಶೇಷತಃ ಜ್ಞಾನವಿಲ್ಲದಿರುವುದರಿಂದ ಸರ್ವಜ್ಞತ್ವವೂ ಪ್ರಾಪ್ತವಾಗುವುದಿಲ್ಲ.) (ಹಾಗಾದರೆ ಸಾಮಾನ್ಯವಿಲ್ಲದಿರುವ ಸ್ವರೂಪಾದಿಗಳಿಗೆ ಸಾಮಾನ್ಯತಃ ಜ್ಞಾನವು ಹೇಗೆಂದರೆ) ಅತಃ=ಆದಕಾರಣ, ಸರ್ವಮಪಿ=ಎಲ್ಲವೂಕೂಡ, (ನಮ್ಮಿಂದ) ವಿಶೇಷಸಾಮಾನ್ಯರೂಪಂ=ವ್ಯಾವೃತ್ತರೂಪವೂ ಸಾಮಾನ್ಯರೂಪವೂ ಕೂಡ, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. (ಯಾವ ಅನುಪಪತ್ತಿಯೂ ಇಲ್ಲ.)

ತಾ || ನ್ಯಾಯಸುಧಾ— (1) ದ್ರವ್ಯಗಳಲ್ಲಿ ಅತ್ಯಂತವಾಗಿ ವ್ಯಾವೃತ್ತಗಳಾದ ಧರ್ಮಗಳು ಅಂತ್ಯವಿಶೇಷಗಳು ಎಂದು ವೈಶೇಷಿಕರು ಅಂಗೀಕರಿಸಿರುವರು. ವಿಶೇಷಗಳಲ್ಲಿಯೂ ಕೂಡ ವಿಶೇಷಾಂತರವನ್ನು ಅಂಗೀಕರಿಸಿದರೆ ಅನವಸ್ಥೆಯು ಬರಬೇಕಾಗುವುದು. ಅದರಲ್ಲಿ ಹೇಗೆ ಸ್ವರೂಪತ್ವವೇ ವ್ಯಾವೃತ್ತವಾಗಿದೆಯೋ, ಹಾಗೆಯೇ ದ್ರವ್ಯಗಳಲ್ಲಿಯೂ ಸ್ವರೂಪತ್ವವೇ

ಇರಲಿ. ವಿಶೇಷಗಳಿಂದ ಏನು ಪ್ರಯೋಜನವು? ಹೀಗೆ ವಿಶೇಷಗಳನ್ನು ತಿರಸ್ಕರಿಸಿ, ವಿಶೇಷ ಸ್ಥಾನದಲ್ಲಿ ಸ್ವರೂಪತ್ವವನ್ನು ಹೇಳುವ ಮೀಮಾಂಸಕನಿಂದ ಯಾವುದು ವ್ಯಾವೃತ್ತವು ಎಂದು ಪ್ರಶ್ನೆಮಾಡಿದರೆ— 'ಅಂತ್ಯಾಃ ವಿಶೇಷಾಃ' ಎಂದು ಹೇಳಲಿಕ್ಕೆ ಶಕ್ಯವಾಗುವುದೇ ಇಲ್ಲ. ಅಪಸಿದ್ಧಾಂತವು ಬರಬೇಕಾಗುವುದು. ಗುಣಾದಿಗಳಾದರೂ ವ್ಯಾವೃತ್ತಗಳಾದಾಗ್ಯೂ ಅನುಗತಾಧಾರವಾಗಿ ಅಂಗೀಕೃತಗಳಾಗಿರುವುದರಿಂದ ಅನುಗತಕಲ್ಪಗಳೇ. ಆದುದರಿಂದ ಸ್ವರೂಪತ್ವವೆಂದೇ ಹೇಳಬೇಕು. ಅದಕ್ಕಾದರೂ ಈಗ ಅನುಗತತ್ವವನ್ನು ಅಂಗೀಕರಿಸಿದರೆ ಈ ಪ್ರಶ್ನೆಯು ಹೇಗೆ ನಿರುತ್ತರವಾಗದೆ ಹೋದೀತು? (2) ಉದಾಹರಣವು ಅನಾದರಣೀಯವಾಗಿರುವುದರಿಂದ ಭೇದವು ಸಾಮಾನ್ಯ ವಿರಹಿತವಾದಾಗ್ಯೂ ವಚನವೃತ್ತಿಯಿಂದಲೇ ಶಬ್ದಬೋಧ್ಯವೆಂದಂಗೀಕರಿಸ ಬೇಕು. ವಾಚಕವಾದ ಶಬ್ದವು ಶಕ್ತಿಜ್ಞಾನವಾಗದೆ ಅರ್ಥವನ್ನು ತಿಳಿಸಲಾರದು. ಹೀಗೆ ಅದರಲ್ಲಿ ಶಬ್ದಕ್ಕೆ ಶಕ್ತಿಗ್ರಹವನ್ನು ಅಂಗೀಕರಿಸ ಬೇಕು ॥ ೭೯ ॥ ೮೦ ॥ ೮೧ ॥

ಹಾಗಾದರೆ ಇದು ಪೂರ್ವೋಕ್ತವಿರುದ್ಧವಾದುದು ಹೇಳಲ್ಪಡುತ್ತದೆ. ಮೊದಲು ಸ್ವರೂಪಾದಿಗಳು ನಿಸ್ಸಾಮಾನ್ಯವೇ ಎಂದು ಪ್ರಸಾಧಿಸಿ, ಈಗ ಎಲ್ಲಾ ವಿಶೇಷಸಾಮಾನ್ಯರೂಪವು ಅಂಗೀಕರಿಸಲ್ಪಡುತ್ತದೆ ಎಂದು ಹೇಳಲ್ಪಡುತ್ತದೆಂದರೆ—

**ಮೂ ॥ ವ್ಯಾವೃತ್ತಂ ಯಚ್ಚ ಸಾಮಾನ್ಯಂ ತದೇವ ಸ್ಯಾದ್ವಿಶೇಷತಃ ।**
**ನ ಚೈಕಧರ್ಮತಾ ತೇನ ಪದಾರ್ಥಾನಾಂ ಪರಸ್ಪರಂ ॥ ೮೨ ॥**

ಅ ॥ ಯಚ್ಚ = ಯಾವುದು, ವ್ಯಾವೃತ್ತಂ = ವ್ಯಾವೃತ್ತಸ್ವರೂಪವೋ, ತದೇವ = ಅದೇವೇ, ವಿಶೇಷತಃ=ವಿಶೇಷಬಲದಿಂದ, ಸಾಮಾನ್ಯಂ ಚ=ಸಾಮಾನ್ಯವೂ ಕೂಡ, (ಯಾವ ಕಾರಣದಿಂದ) ಸ್ಯಾತ್=ಆಗುವುದೋ, ತೇನ=ಆ ಕಾರಣದಿಂದ, ಪದಾರ್ಥಾನಾಂ=ಪದಾರ್ಥಗಳಿಗೆ, ಪರಸ್ಪರಂ = ಪರಸ್ಪರವಾಗಿ, ಏಕಧರ್ಮತಾ = ಏಕಧರ್ಮತ್ವವು, ನ ಚ=ಇಲ್ಲವೇ ಇಲ್ಲ. ಈ ಮೊದಲು ಸ್ವರೂಪಭೇದಾದಿಗಳಲ್ಲಿ ಸಾಮಾನ್ಯವಿಲ್ಲವೆಂದು ಹೇಳಿದ್ದು ಪದಾರ್ಥಸ್ವರೂಪಗಳಲ್ಲಿ ಪರಸ್ಪರ ಅನುಗತಧರ್ಮವಿಲ್ಲವೆನ್ನುವ ಅಭಿಪ್ರಾಯದಿಂದ ಈಗ ಅನುಗತಧರ್ಮವು ಇಲ್ಲದಿದ್ದರೂ ವ್ಯಾವೃತ್ತಸ್ವರೂಪದಿಂದ ಅಭಿನ್ನವಾದ, ಅಲ್ಲಲ್ಲಿಯೇ ಇರತಕ್ಕ ಸಾಮಾನ್ಯಾಕಾರವನ್ನು ಅಂಗೀಕರಿಸಿ, ಸರ್ವವೂ ಸಾಮಾನ್ಯವಿಶೇಷರೂಪವೆಂದು ಹೇಳಿರುವುದರಿಂದ ಪೂರ್ವೋತ್ತರ ವಿರೋಧವಿಲ್ಲ ॥ ೮೨ ॥

ಹೀಗೆ ಗೋತ್ವಾದಿ ಸಾಮಾನ್ಯಕ್ಕೆ ಅನುಗತತ್ವವನ್ನು ಅಂಗೀಕಾರ ಮಾಡಿಕೊಂಡು ಸ್ವರೂಪತ್ವ ಮೊದಲಾದ ಸಾಮಾನ್ಯವೇ ಇಲ್ಲದಿರುವುದರಿಂದ ಅದರಲ್ಲಿ ಶಬ್ದಶಕ್ತಿಜ್ಞಾನಕ್ಕಾಗಿ ಸಾಮಾನ್ಯಸ್ವರೂಪಜ್ಞಾನವು ಅಪೇಕ್ಷಿತವಾಗಿದೆ ಎಂದುಕ್ತವಾಗಿದೆ. ಈಗ ಗೋತ್ವಾದಿ ಸಾಮಾನ್ಯವೂ ಕೂಡ ಅನುಗತವಲ್ಲವೆನ್ನುತ್ತಾರೆ—

**ಮೂ ॥ ಧರ್ಮಾಣಾಂ ಭೇದದೃಷ್ಟ್ಯೈವ ತತ್ಸಾದೃಶ್ಯಸ್ಯ ದರ್ಶನಾತ್ ।**
**ಅತಃ ಸರ್ವೇ(ರ್ವ)ಪದಾರ್ಥಾಶ್ಚ ಸಾಮಾನ್ಯಾತ್ಸಾಕ್ಷಿಗೋಚರಾಃ ॥**
**॥ ೮೩ ॥**

ಅ ॥ ಧರ್ಮಾಣಾಂ = ಸಮುದಾಯವ್ಯತಿರಿಕ್ತಗಳಾದ ಶೌಕ್ಲ್ಯಾದಿ ಧರ್ಮಗಳಿಗೆ, ಭೇದದೃಷ್ಟ್ಯಾ=ಭೇದಜ್ಞಾನದಿಂದ, ತತ್ಸಾದೃಶ್ಯಸ್ಯ=ಅವುಗಳಿಗೆ ಸಾದೃಶ್ಯಕ್ಕೆ, ದರ್ಶನಾತ್=

ಪ್ರತೀತಿಯಿದ್ದ ಪ್ರಯುಕ್ತ, ಅಂದರೆ ಧರ್ಮಗಳಿಗೆ ಪ್ರತಿಧರ್ಮಿಯಿಂದ ವ್ಯಾವೃತತ್ವವು ತೋರುವು ದರಿಂದ, (ಆ ದೃಷ್ಟಾಂತದಿಂದ) ಪದಾರ್ಥಾನಾಮಪಿ=ಗವಾದಿ ಪದಾರ್ಥಗಳಿಗೂ, ಪರಸ್ಪರಂ= ಪರಸ್ಪರವಾಗಿ, ಏಕಧರ್ಮತಾ = ಅನುಗತವಾದ ಗೋತ್ವಾದಿ ಧರ್ಮತ್ವವು, ನ = ಇಲ್ಲ. (ಎಂದನುಮೇಯಿಸಬೇಕು). (ಶಾಕ್ಲ್ಯಾದಿಗಳಿಗೆ ವ್ಯಾವೃತ್ತತ್ವವಿದ್ದರೆ 'ಶಾಕ್ಲ್ಯಂ ಶಾಕ್ಲ್ಯಂ' ಎಂದು ಅನುಗತವಾದ ಜ್ಞಾನವು ಕೂಡದೆ ಹೋಗುವುದು ಎಂದರೆ) ಅದರ ಸಾದೃಶ್ಯವೇ ತೋರುತ್ತದೆ. ಅಂದರೆ— ಇದು ಶಾಕ್ಲ್ಯವು, ಇದು ಶಾಕ್ಲ್ಯವು ಎನ್ನುವ ಪ್ರತೀತಿಯಲ್ಲಿ ಹಿಮ ಶಾಕ್ಲ್ಯ ಸಾದೃಶ್ಯವೇ ಹಿಮಾಂಶು ಶಾಕ್ಲ್ಯದಲ್ಲಿ ತೋರುತ್ತದೆ. ಆದರಿಂದ ಅವುಗಳಿಗೆ ಪರಸ್ಪರ ಐಕ್ಯವಿಲ್ಲ, ಆದುದರಿಂದ ವಿರೋಧವಿಲ್ಲ. (ಅನುಗತವಾದ ಸಾಮಾನ್ಯವು ಬೇಡ. ಆದರಿಂದ ಪ್ರಕೃತದಲ್ಲಿ ಏನು ಪ್ರಯೋಜನವು? ಎಂದರೆ—) ಅತಃ=ಅನುಗತವಾದ ಸಾಮಾನ್ಯವು ಇಲ್ಲದಿರುವುದರಿಂದ ಅತೀತಾನಾಗತವರ್ತಮಾನ ವ್ಯಕ್ತಿಗಳಿಗೇನೇ ವಾಚ್ಯತ್ವವಿದ್ದುದರಿಂದಲೂ, ಗೃಹೀತವಾಗಿರುವ ಶಕ್ತಿಯುಳ್ಳ ಪದಗಳಿಗೆ ಬೋಧಕತ್ವವಿಲ್ಲದಿರುವುದರಿಂದಲೂ, ಶಕ್ತಿಗ್ರಹಣಕ್ಕೆ ಪದಾರ್ಥಜ್ಞಾನವಿಲ್ಲದೆ ಕೂಡದಿರುವುದರಿಂದಲೂ, ವಿಶೇಷವಾಗಿ ಜ್ಞಾನವಿದ್ದರೆ ಸರ್ವಜ್ಞತ್ವವು ಬರಬೇಕಾಗಿರುವುದರಿಂದಲೂ, ಸರ್ವೇ=ಎಲ್ಲಾ ವರ್ತಮಾನ, ಅತೀತ, ಅನಾಗತಗಳಾದ, ಪದಾರ್ಥಾಶ್ಚ = ಪದಾರ್ಥಗಳೂ ಕೂಡ, ಸಾಮಾನ್ಯಾತ್=ಸಾಮಾನ್ಯಾಕಾರವಾಗಿ, ಸಾಕ್ಷಿಗೋಚರಾಃ=ಸಾಕ್ಷಿವಿಷಯಗಳು.

**ತಾ ॥ ನ್ಯಾಯಸುಧಾ—** (1) 'ಗೋತ್ವಾದಿಕಂ ಪ್ರತಿವ್ಯಕ್ತಿವ್ಯಾವೃತ್ತಂ ಸಮುದಾಯಾತಿರಿಕ್ತಧರ್ಮತ್ವಾತ್ ಶಾಕ್ಲ್ಯಾದಿವತ್' ಗೋತ್ವಮೊದಲಾದುದು ಪ್ರತಿವ್ಯಕ್ತಿಗಳಲ್ಲಿಯೂ ಭಿನ್ನವಾದುದು, ಸಮುದಾಯದಿಂದ ಬೇರೆಯಾದ ಧರ್ಮವಾಗಿರುವುದರಿಂದ ಶಾಕ್ಲ್ಯಾದಿಗಳಂತೆಯೇ ಎಂದನುಮಾನವು ॥ ೮೩ ॥

ಶಕ್ತಿಜ್ಞಾನಕ್ಕೆ ಅತೀತಾದಿಜ್ಞಾನಗಳ ಅಪೇಕ್ಷೆಯಿರಲಿ; ಅದು ಸಾಕ್ಷಿಯಿಂದ ಎಂದು ಹೇಗೆ ಸಿದ್ಧವಾಗುತ್ತದೆ ಎಂದರೆ—

**ಮೂ ॥ ಸರ್ವಮಿತ್ಯೇವ ವಿಜ್ಞಾನಂ ಸರ್ವೇಷಾಂ ಕಥಮನ್ಯಥಾ ।**
**ಕಿಂಚಿತ್ಸಾದೃಶ್ಯವಿಜ್ಞಾನಾದಖಿಲಸ್ಯಾಪಿ ವಸ್ತುನಃ ।**
**ಶಬ್ದಶಕ್ತಿಗ್ರಹಶ್ಚ ಸ್ಯಾತ್ತತ್ತತ್ಸಾದೃಶ್ಯಮಾನತಃ ॥ ೮೪ ॥**

ಅ ॥ ಅನ್ಯಥಾ = ಸಾಕ್ಷಿಗೆ ಅತೀತಾದಿ ವಿಷಯಕತ್ವವಿಲ್ಲವಾದರೆ, ಸರ್ವಮಿತ್ಯೇವ ವಿಜ್ಞಾನಂ=ವಿಶೇಷಾಕಾರವಿಲ್ಲದೆ ಅತೀತ-ಅನಾಗತ-ವರ್ತಮಾನವಿಷಯಕವಾದ ಎಲ್ಲಾ ಜ್ಞಾನವೂ, ಸರ್ವೇಷಾಂ = ಎಲ್ಲರಿಗೂ, ಕಥಂ = ಹೇಗೆ ಆಗುವುದು? (ಹಾಗಾದರೆ ಅನುಗತವಾದ ಸಾಮಾನ್ಯವೇ ಇಲ್ಲವಾದರೆ ವ್ಯಕ್ತಿಗಳು ಅನಂತಗಳಾಗಿರುವುದರಿಂದಲೂ, ವ್ಯಭಿಚಾರಬರುವುದರಿಂದಲೂ ಶಬ್ದಶಕ್ತಿಜ್ಞಾನವೇ ಕೂಡುವುದಿಲ್ಲ. ಅದು ಅನ್ಯಥಾನುಪಪನ್ನವಾಗಿ ಸಾಕ್ಷಿಗೆ ಅತೀತಾದಿವಿಷಯಕತ್ವವು ಹೇಗೆ ಸಿದ್ಧಿಸುವುದು ಎಂದರೆ—) ಕಿಂಚಿತ್ಸಾದೃಶ್ಯವಿಜ್ಞಾನಾತ್ = ಯತ್ಕಿಂಚಿಸ್ಸಾದೃಶ್ಯಜ್ಞಾನದೆಶೆಯಿಂದ, ಅಖಿಲಸ್ಯಾಪಿ ವಸ್ತುನಃ=ಎಲ್ಲಾ ವಸ್ತುವಿಗೂ, ತತ್ತತ್ಸಾದೃಶ್ಯಮಾನತಃ = ಅವಾವ ಸಾದೃಶ್ಯಪ್ರಮಾಣದೆಶೆಯಿಂದ, ಶಬ್ದಶಕ್ತಿಗ್ರಹಶ್ಚ = ಶಬ್ದಶಕ್ತಿಜ್ಞಾನವೂ ಕೂಡ, ಸ್ಯಾತ್=ಆಗುವುದು.

**ತಾ ॥ ನ್ಯಾಯಸುಧಾ—** (1) ಅನುಮಾನದಿಂದ ಅತೀತಾದಿ ಸರ್ವಸಾಮಾನ್ಯಜ್ಞಾನವೂ ಆಗುವುದು ಎನ್ನುವುದಕ್ಕೆ ಇದು ಉತ್ತರವು. ಭೂತಭವಿಷ್ಯದ್ವರ್ತಮಾನವಿಷಯಕವಾದ ಎಲ್ಲಾ

ಲಿಂಗವೂ ಈ ಸಾಧ್ಯದಿಂದ ವ್ಯಾಪ್ತವಾಗಿದೆ ಎನ್ನುವ ಜ್ಞಾನವನ್ನು ಅನುಮಾನವು ಅಪೇಕ್ಷಿಸಿ ಕೊಂಡು ಇದೆ. ಸಾಕ್ಷಿ ಹೊರತು ಈ ಜ್ಞಾನವು ಸರ್ವಥಾ ಕೂಡಲಾರದು. ಅಥವಾ ಸಾಕ್ಷಿಯು ಅತೀತಾದಿ ಸರ್ವವಸ್ತುಗಳನ್ನು ಸಾಮಾನ್ಯಾಕಾರವಾಗಿಯೇ ವಿಷಯೀಕರಿಸುತ್ತದೆ ಎನ್ನುವಲ್ಲಿ ಪ್ರಮಾಣಾಂತರವನ್ನು ಇದರಿಂದ ಹೇಳಿದರು. ಹೇಗೆಂದರೆ— ಅತೀತ ಮೊದಲಾದ ಧೂಮಾದಿಗಳೆಲ್ಲವೂ ಅಂತಹ ಅಗ್ನ್ಯಾದಿಗಳಿಂದ ವ್ಯಾಪ್ತವಾಗಿವೆ ಎನ್ನುವ ಜ್ಞಾನಪೂರ್ವಕ ವಾದುದು ಅನುಮಾನವು. ತಥಾಚ ಸಾಕ್ಷಿಯು ಅತೀತಾದಿವಸ್ತುಗಳನ್ನು ವಿಷಯೀಕರಿಸದೆ ಇದ್ದರೆ ಅಂತಹುದು ಬೇರೆ ಇಲ್ಲದಿರುವುದರಿಂದ ಅನುಮಾನಮಾತ್ರವೇ ಇಲ್ಲವೆಂದಾಗಬೇಕಾಗು ವುದು. (2) ಮತ್ತು ಸರ್ವರಿಗೂ ಸರ್ವಶಬ್ದದ ಶಕ್ತಿಜ್ಞಾನವಿದೆಯಷ್ಟೆ. ಇಲ್ಲವಾದರೆ 'ಸರ್ವಂ ಖಲ್ವಿದಂ ಬ್ರಹ್ಮ' ಎನ್ನುವ ವ್ಯವಹಾರವೇ ಇಲ್ಲವೆಂದು ಆಗಬೇಕಾಗುವುದು. ಶಕ್ತಿಜ್ಞಾನವಾದರೂ ಅರ್ಥಗ್ರಹಣಾಪೇಕ್ಷಿತವಾದುದು. ಹೀಗೆ ಸರ್ವರಿಗೆ ಸಾಮಾನ್ಯವಾಗಿ ಸರ್ವವು ಎನ್ನುವ ಜ್ಞಾನವಿದೆ ಎಂದು ಅಂಗೀಕರಿಸಬೇಕು. ಸಾಕ್ಷಿಗೆ ಅತೀತಾದಿ ಸರ್ವ ವಸ್ತುವಿಷಯಕತ್ವವಿಲ್ಲವಾದರೆ ಅದು ಕೂಡದೆಹೋಗಬೇಕಾಗುವುದು. (3) ಹೀಗಾದರೆ ಗೋ ಶಬ್ದಕ್ಕೆ ಗವಯದಲ್ಲಿಯೂ ಶಕ್ತಿಜ್ಞಾನವು ಬರಬೇಕಾಗುವುದು. ಸಾದೃಶ್ಯವಿದ್ದುದರಿಂದ ಎಂದರೆ- ಯತ್ಕಿಂಚಿತ್ಸಾದೃಶ್ಯಜ್ಞಾನವು ಶಬ್ದಶಕ್ತಿಗ್ರಹಣಕ್ಕೆ ಕಾರಣವಲ್ಲ. ಮತ್ತೆ ಅತಿವ್ಯಾಪ್ತಿವಿರಹಿತ ವಾದುದೇ ಕಾರಣವು. ಹೇಗೆಂದರೆ— ಗೋಶಬ್ದದಲ್ಲಿ ಸಾಸ್ನಾದಿಮತ್ವವು. ಬೇರೆಕಡೆ ಬೇರೆ ಎಂದು ತಿಳಿಯತಕ್ಕದು ॥ ೮೪ ॥

ಹೀಗೆ ಸಾಕ್ಷಿಪ್ರತ್ಯಕ್ಷಕ್ಕೆ ವರ್ತಮಾನ ಮಾತ್ರ ಗ್ರಾಹಿತ್ವವನ್ನು ತಿರಸ್ಕರಿಸಿ ಮಾನಸ ಪ್ರತ್ಯಕ್ಷಕ್ಕೂ ವರ್ತಮಾನ ಮಾತ್ರ ಗ್ರಾಹಿತ್ವವನ್ನು ತಿರಸ್ಕರಿಸುತ್ತಾರೆ—

**ಮೂ ॥ ಪ್ರತ್ಯಕ್ಷಂ ಮಾನಸಂ ಚೈವ ಯದಾತೀತಾರ್ಥಗೋಚರಂ ॥ ೮೫ ॥**
**ತದಾ ಸ್ಮೃತಿಪ್ರಮಾಣತ್ವಮತೀತತ್ವವಿಶೇಷಿತಂ ।**
**ಆಧಿಕ್ಯಮನುಭೂತಾತ್ತು ಯದಾತೀತತ್ವಮಿಷ್ಯತೇ ॥ ೮೬ ॥**
**ಮಾನತಾ ಚ ಕಥಂ ನ ಸ್ಯಾತ್ಸ್ಮೃತೇರ್ಬಾಧಶ್ಚ ನಾತ್ರ ಹಿ ।**
**ಮಾನತ್ವಂ ಪ್ರತ್ಯಭಿಜ್ಞಾಯಾ ಅಪಿ ಸರ್ವಾನುಭೂತಿಗಂ ॥**
**ಅತೀತವರ್ತಮಾನತ್ವಧರ್ಮಿಣೀ ಸಾ ಚ ದೃಶ್ಯತೇ ॥ ೮೭ ॥**

ಅ ॥ ಮಾನಸಂ ಪ್ರತ್ಯಕ್ಷಂ ಚ=ಸ್ಮೃತಿಕಾರಣವಾದ ಮಾನಸ ಪ್ರತ್ಯಕ್ಷವೂ ಕೂಡ, ಅತೀತಾರ್ಥಗೋಚರಮೇವ=ಅತೀತಾರ್ಥವಿಷಯಕವೇ, (ಪೂರ್ವಾನುಭವಕ್ಕಿಂತ ಅಧಿಕವಾದು ದನ್ನು ವಿಷಯೀಕರಿಸದೆ ಇರುವ ಸ್ಮೃತಿಗೆ ಪ್ರಾಮಾಣ್ಯವೇ ದುರ್ಲಭವು. ಮಾನಸಪ್ರತ್ಯಕ್ಷಜ ತ್ವವು ಯಾವುದರಿಂದ ಸಿದ್ಧಿಸುವುದು ಎಂದರೆ—) ಯದಾ=ಯಾವ ಕಾರಣದೆಶೆಯಿಂದ, ಅತೀತ ತ್ವವಿಶೇಷಿತಂ=ಅತೀತತ್ವದಿಂದ ವಿಶಿಷ್ಟವಾದ ಅರ್ಥವನ್ನು (ಸ್ಮೃತಿಯು ವಿಷಯೀಕರಿಸುತ್ತದೋ), ತದಾ=ಆ ಕಾರಣದೆಶೆಯಿಂದ, ಸ್ಮೃತಿಪ್ರಮಾಣತ್ವಂ=ಸ್ಮೃತಿಪ್ರಾಮಾಣ್ಯವು, (ಸಿದ್ಧವಾಯಿತು). (ಅತೀತತ್ವದಿಂದ ವಿಶಿಷ್ಟವಾದ ಅರ್ಥವನ್ನು ವಿಷಯೀಕರಿಸಿಕೊಂಡಿದ್ದರೂ ಸ್ಮೃತಿಗೆ ಹೇಗೆ ಪ್ರಾಮಾ ಣ್ಯವು ಎಂದರೆ—) ಯದಾ=ಯಾವ ಕಾರಣದೆಶೆಯಿಂದ, ಅತೀತತ್ವಂ=ಸ್ಮೃತಿವಿಷಯೀಕೃತ ವಾದ ಅತೀತತ್ವವು, ಅನುಭೂತಾತ್ತು=ವರ್ತಮಾನವಾಗಿ ಅನುಭೂತವಾದ ಅರ್ಥದೆಶೆಯಿಂದ, ಆಧಿಕ್ಯಂ=ಆಧಿಕ್ಯವು, ಇಷ್ಯತೇ =(ಸರ್ವರಿಂದ) ಅಂಗೀಕರಿಸಲ್ಪಡುತ್ತದೋ, (ಆದಕಾರಣ) ಸ್ಮೃತೇಃ=ಸ್ಮೃತಿಗೆ, ಮಾನತಾ=ಪ್ರಾಮಾಣ್ಯವು, ಕಥಂ=ಹೇಗೆ, ನ ಸ್ಯಾತ್=ಆಗಲಾರದು? ಚ = ಮತ್ತು ಪ್ರಾಮಾಣ್ಯವಿದ್ದರೆ ಮಾನಸಪ್ರತ್ಯಕ್ಷಜನ್ಯತ್ವವು ಹೇಗೆ ಬಾರದೆ ಹೋದೀತು?

(ಮತ್ತು ಅನಧಿಗತಾರ್ಥಗಂತೃತ್ವರೂಪವಾದ ಪ್ರಮಾಣಲಕ್ಷಣವನ್ನು ಅಂಗೀಕರಿಸಿ ಸ್ಮೃತಿಯು ಅನುಭವಕ್ಕಿಂತ ಅಧಿಕವಾದುದನ್ನು ವಿಷಯೀಕರಿಸುತ್ತದೆಂದು ವ್ಯುತ್ಪಾದಿಸಿರುವರು. ವಸ್ತುತಃ ಇದು ಪ್ರಮಾಣಲಕ್ಷಣವಲ್ಲ. ಮತ್ತೆ ಯಥಾರ್ಥತ್ವವೇ ಲಕ್ಷಣವು. ಯಥಾರ್ಥತ್ವವು ಸ್ಮೃತಿಗೆ ಅನುಭವಸಿದ್ಧವಾಗಿದೆ. ಬಾಧಕಪ್ರತ್ಯಯವಿದ್ದರೆ ಯಥಾರ್ಥವು ಬರಲಾರದು. ಬಾಧಕಪ್ರತ್ಯಯವಾದರೂ ಇಲ್ಲಿ ಇಲ್ಲವೆನ್ನುತ್ತಾರೆ.) ಅತ್ರ=ಇಲ್ಲಿ, ಸ್ಮೃತೇಃ=ಸ್ಮೃತಿಗೆ, ಬಾಧಶ್ಚ=ಬಾಧವೂ ಕೂಡ, ನ ಹಿ=ಇಲ್ಲವಷ್ಟೆ. (ಚಾಕ್ಷುಷಾದಿಪ್ರತ್ಯಕ್ಷವಿದ್ಯಾಗ್ನ್ಯೂ ವರ್ತಮಾನಮಾತ್ರಗ್ರಾಹಿತ್ವ ನಿಯಮವಿಲ್ಲವೆನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.) ಪ್ರತ್ಯಭಿಜ್ಞಾಯಾಮಪಿ=ಪ್ರತ್ಯಭಿಜ್ಞೆಗೂ ಕೂಡ, ಮಾನತ್ವಂ=ಪ್ರಾಮಾಣ್ಯವು, ಸರ್ವಾನುಭೂತಿಗಂ=ಸರ್ವರ ಅನುಭವಸಿದ್ಧವಾದುದು. (ಎಲ್ಲಾ ಪರೀಕ್ಷಕರೂ ಪ್ರತ್ಯಭಿಜ್ಞೆಯ ಬಲದಿಂದಲೇ ಆತ್ಮಾದಿಗಳಿಗೆ ಸ್ಥಾಯಿತ್ವವನ್ನು ಸಾಧಿಸುತ್ತಾರೆ. ಆದರಿಂದ ಪ್ರಕೃತಕ್ಕೆ ಏನಾಯಿತೆಂದರೆ—) ಅತೀತತ್ವ-ವರ್ತಮಾನತ್ವಧರ್ಮಿಣೀ=ಅತೀತತ್ವವರ್ತಮಾನತ್ವಧರ್ಮವಿಶಿಷ್ಟವಾದ ಅರ್ಥವನ್ನು ವಿಷಯೀಕರಿಸತಕ್ಕ, ಸಾ ಚ=ಪ್ರತ್ಯಭಿಜ್ಞೆಯು, ದೃಶ್ಯತೇ=(ಸಾಕ್ಷಿಯಿಂದ) ಕಾಣಲ್ಪಡುತ್ತದೆ. (ಅಂದರೆ 'ಸೋಽಯಂ' ಎಂದು ಪ್ರತ್ಯಭಿಜ್ಞೆಯ ಆಕಾರವು ಅನುಭೂತವಾಗುತ್ತದೆ. ಆ ಪ್ರತ್ಯಭಿಜ್ಞೆಯು ಚಕ್ಷುರಾದಿಗಳಿಂದಲೇ ಹುಟ್ಟುತ್ತದೆ.) ॥ ೮೫ ॥ ೮೬ ॥ ೮೭ ॥

ಹಾಗಾದರೆ ಪ್ರತ್ಯಭಿಜ್ಞೆಯಲ್ಲಿ ೪ ಪಕ್ಷಗಳು ಕೂಡುತ್ತವೆ. ೧ ಅನುಭವವೇ ಎಂದಾಗಲೀ, ೨ ಸ್ಮೃತಿಯೇ ಎಂದಾಗಲೀ, ೩ ಸ್ಮೃತ್ಯನುಭವರೂಪವಾದ ಎರಡು ಜ್ಞಾನಗಳು ಎಂದಾಗಲೀ, ೪ ಒಂದೇ ಜ್ಞಾನವು ಅಂಶದಲ್ಲಿ ಸ್ಮೃತಿಯು, ಅಂಶದಲ್ಲಿ ಅನುಭವವು ಎಂದಾಗಲೀ ಹೇಳಬೇಕು. ಅವುಗಳಲ್ಲಿ ಒಂದನೇದ್ದೂ ಕೂಡಲಾರದು. ಹಾಗಿದ್ದರೆ 'ಅಯಂ' ಎಂದೇ ಪ್ರತ್ಯಭಿಜ್ಞೆಗೆ ಆಕಾರವಿರಬೇಕಾದೀತು. 'ಸಃ' ಎಂದು ಆಕಾರವು ಬಾರದೆ ಇರಬೇಕಾಯಿತು. ೨ನೇದ್ದೂ ಕೂಡಲಾರದು. ಹಾಗಿದ್ದರೆ 'ಸಃ' ಎಂದೇ ಆಕಾರವಿರಬೇಕಾದೀತು. ಆದಕಾರಣ ಮೇಲಿನ ಎರಡು (೨)ಪಕ್ಷಗಳನ್ನೇ ಅಂಗೀಕರಿಸಬೇಕಾಗುವುದು. ತಥಾಚ 'ಸಃ' ಎನ್ನುವ ಅಂಶವು ಸ್ಮೃತಿಯಾಗಿರುವುದರಿಂದ ಚಾಕ್ಷುಷಾದಿ ಪ್ರತ್ಯಕ್ಷಕ್ಕೆ ಅತೀತ ವಿಷಯತ್ವವು ಇಲ್ಲ ಎಂದಾಶಂಕಿಸಿದರೆ—

**ಮೂ ॥ ನ ಚ ಸಾ ಸ್ಮೃತಿಮಾತ್ರಾರ್ಥಾ ತದಿದಂ ತ್ವಗ್ರಹೈಕತಃ ॥ ೮೮ ॥**

**ಅ ॥** ಸಾ = ಆ ಪ್ರತ್ಯಭಿಜ್ಞೆಯು, ಸ್ಮೃತಿಮಾತ್ರಾರ್ಥಾ =('ಸ್ಮೃತಿರೇವ ಮಾತ್ರಾ ಸ್ಮೃತಿಮಾತ್ರಾ-ಸ್ಮೃತಿಮಾತ್ರಾ ಅರ್ಥಂ ಯಸ್ಯಾಃ ಸಾ' ಎನ್ನುವ ವ್ಯುತ್ಪತ್ತಿಯಿಂದ) ಸ್ಮೃತ್ಯನುಭವರೂಪೈಕದೇಶಸಮುದಾಯರೂಪವಾದುದು, ಹಾಗೆಯೇ ಸ್ಮೃತ್ಯನುಭವಾತ್ಮಕವಾದ ಏಕಜ್ಞಾನರೂಪವಾದುದು, ನ ಚ=ಅಲ್ಲ. (ಏಕೆಂದರೆ— ಪ್ರಥಮ ಪ್ರತಿಜ್ಞೆಯಲ್ಲಿ ಹೇತುವನ್ನು ಹೇಳುತ್ತಾರೆ). ತದಿದಂ ತ್ವಗ್ರಹೈಕತಃ=ತತ್ವ-ಇದಂತ್ವ ಅನುಭವಗಳಿಗೆ ಏಕತ್ವಾನುಭವವಿದ್ದುದರಿಂದ (ಎರಡನೇ ಪ್ರತಿಜ್ಞೆಯಲ್ಲಿ ಹೇತುವನ್ನು ಹೇಳುತ್ತಾರೆ). ತದಿದಂ ತ್ವಗ್ರಹೈಕತಃ = ತತ್ವ-ಇದಂತ್ವ ಅನುಭವಕ್ಕೆ ನಿರಂಶತ್ವವಿದ್ದಪ್ರಯುಕ್ತ.

**ತಾ ॥ ನ್ಯಾಯಸುಧಾ—** (1) ಪ್ರತ್ಯಭಿಜ್ಞೆಯು ಸ್ಮೃತಿಯೇ ಅಲ್ಲವೆಂದು ಪರರೂ ಹೇಳಿರುವರು. ಜ್ಞಾನದ್ವಯರೂಪವೂ ಅಲ್ಲ. (2) ಸ್ಮೃತ್ಯನುಭವರೂಪವಾದುದು ಒಂದೇ ಜ್ಞಾನವೆನ್ನುವುದೂ ಅಲ್ಲ. ಏಕತ್ವವಿದ್ದರೆ ದ್ವಿರೂಪತ್ವವು ವಿರುದ್ಧವು. ಆದುದರಿಂದ ಅನುಭವರೂಪವಾದುದು ಒಂದೇ ವಿಜ್ಞಾನವು. ಸಂಸ್ಕಾರಯುಕ್ತವಾದ ಚಕ್ಷುರಾದಿಗಳಿಂದ ಹುಟ್ಟಿರುವುದರಿಂದ 'ಸೋಽಯಂ' ಎನ್ನುವ ಆಕಾರವುಳ್ಳದ್ದು ಆಗುವುದಿಲ್ಲ. **ಹೇಗೆ ಶುಕ್ಲ, ಹರಿತ,**

ಪೀತಾದಿ ರೂಪಗಳಿಗೆ ಚಿತ್ರರೂಪಾರಂಭಕತ್ವವಿದೆಯೋ, ಹೇಗೆ ದೋಷಸಹಕೃತಗಳಾದ ಇಂದ್ರಿಯಗಳಿಗೆ ವಿಪರ್ಯಯ ಹೇತುತ್ವವಿದೆಯೋ, ಹಾಗೆಯೇ ಸಂಸ್ಕಾರಯುಕ್ತಗಳಾದ ಇಂದ್ರಿಯಗಳಿಗೆ ಪ್ರತ್ಯಭಿಜ್ಞಾನ ಹೇತುತ್ವವು ಬರುವುದು. (3) ಸ್ಮೃತಿಯು ಮಾನಸ ಪ್ರತ್ಯಕ್ಷ ದಿಂದ ಹುಟ್ಟಿದ್ದು ಎಂದಂಗೀಕರಿಸಿರುವುದರಿಂದ ಸ್ವತಂತ್ರವಾದ ಸಂಸ್ಕಾರವು ಜ್ಞಾನಕ್ಕೆ ಕಾರಣ ವಲ್ಲ ॥ ೮೮ ॥

'ತಚ್ಚೇನ್ನೋತ್ತರಗೋಚರಂ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನು ಉಪಸಂಹಾರ ಮಾಡುತ್ತಾರೆ—

**ಮೂ ॥ ಅತೋ ನ ವರ್ತಮಾನೈಕ ನಿಯಮಃ ಸ್ಯಾದ್ಗ್ರಹೇಽಕ್ಷಜೇ ।**
**ನ ಚ ಪ್ರಮಾಣತೋಽನ್ಯಾ ಸ್ಯಾತ್ಪ್ರಮಿತಿರ್ನಾಮ ಕುತ್ರಚಿತ್ ॥ ೮೯ ॥**
**ಮಾನಾಭಾವಾದ್ಗೌರವಾಚ್ಚ ಕಲ್ಪನಾಯಾಃ ಕಿಮೇತಯಾ ।**
**ಮಯ್ಯೈತಜ್ಜ್ಞಾತಮಿತಿ ತು ಸಾಕ್ಷಿಗಂ ಜ್ಞಾನಗೋಚರಂ ॥**
**ಜ್ಞಾನಮೇವ ತತೋಽನ್ಯಾ ನ ಪ್ರಮಿತಿರ್ನಾಮ ದೃಶ್ಯತೇ ॥ ೯೦ ॥**

ಅ ॥ ಅತಃ=ಆದ ಕಾರಣ, ಅಕ್ಷಜೇ ಗ್ರಹೇ=ಪ್ರತ್ಯಕ್ಷ ಜ್ಞಾನದಲ್ಲಿ, ವರ್ತಮಾನೈಕ ನಿಯಮಃ=ವರ್ತಮಾನವನ್ನೇ ವಿಷಯೀಕರಿಸುತ್ತದೆ ಎನ್ನುವ ನಿಯಮವು, ನ ಸ್ಯಾತ್=ಆಗಲಾ ರದು. (ಪ್ರಮಾಣ-ಪ್ರಮೇಯ-ಪ್ರಮಾತೃ ಇವುಗಳಿಂದ ಭಿನ್ನವಾದ ಜಗತ್ತು ಅಬಾಧ್ಯವೆಂದು ಯಾವುದು ಹೇಳಲ್ಪಟ್ಟಿತೋ ಅದನ್ನು ಉಪಸಂಹಾರಮಾಡುತ್ತಾ ಅರ್ಥದಲ್ಲಿರತಕ್ಕ ಪ್ರಾಕಟ್ಯ ನಾಮಕವಾದ ಜ್ಞಾತತಾರೂಪವಾದ ನಾಲ್ಕನೇ ಪ್ರಮಿತಿಯು ಇದ್ದುದರಿಂದ ಜಗತ್ತು ಮೂರು ಪ್ರಕಾರವುಳ್ಳದ್ದು ಎನ್ನುವುದು ಹೇಗೆ ಕೂಡುತ್ತದೆ? ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ). ಪ್ರಮಾಣತಃ = ಕರಣರೂಪವಾದ ಪ್ರಮಾಣದ್ದೆಶೆಯಿಂದ, ಅನ್ಯಾ = ಇತರವಾದ, ಪ್ರಮಿತಿ ರ್ನಾಮ = ಫಲರೂಪವಾದ ಪ್ರಮಿತಿ ಎನ್ನುವ ವಸ್ತುವು, ಕುತ್ರಚಿತ್ = ಎಲ್ಲಿಯೂ, ನ ಚ ಸ್ಯಾತ್ = ಇಲ್ಲವೇ ಇಲ್ಲ. ಮಾನಾಭಾವಾತ್ = ಪ್ರಮಾಣವಿಲ್ಲದಿರುವುದರಿಂದ, (ಹಾಗಾದರೆ **'ಪ್ರಮಾತಾ ಚ ಪ್ರಮೇಯಂ ಚ ಪ್ರಮಾಣಂ ಪ್ರಮಿತಿಸ್ತಥಾ ।'** ಇದು ಮೊದಲಾದ ಆಗಮವು ಇದ್ದುದರಿಂದ ಪ್ರಮಾಣವಿಲ್ಲದಿರುವುದು ಹೇಗೆ? ಎಂದರೆ— 'ಪ್ರಮಾಣತಃ ಅನ್ಯಾ' ಎಂದು ಹೇಳಿರುವರು. ಪ್ರಮಾಣವು, ೧ ಕರಣವು, ೨ ಫಲವು ಎಂದು ಎರಡು ವಿಧವು. ಪ್ರಮಾಣಶಬ್ದದಿಂದ ಕರಣವನ್ನು ಹೇಳಿ, ಪ್ರಮಿತಿಶಬ್ದದಿಂದ ಫಲರೂಪವಾದ ಪ್ರಮಾಣವು. ಪ್ರಮಿತಿಯು ಅದರಿಂದ ಬೇರೆಯಲ್ಲ). (ಮತ್ತು ಜ್ಞಾನವು ೧ ಸ್ವವಿಷಯದಲ್ಲಿ ಜ್ಞಾತತೆಯನ್ನು ಹುಟ್ಟಿಸುವುದೋ, ೨ ಎಲ್ಲಿಯಾದರೂ ಹುಟ್ಟಿಸುವುದೋ, ೨ನೇ ಕಲ್ಪದಲ್ಲಿ ಅತಿಪ್ರಸಂಗವು. ೧ನೇ ಕಲ್ಪದಲ್ಲಿ ಜ್ಞಾತತೆಯು ಹುಟ್ಟುವುದಕ್ಕಿಂತ ಮೊದಲೇ ಅರ್ಥಕ್ಕೆ ವಿಷಯತ್ವವು ಸಿದ್ಧಿಸುವುದ ರಿಂದ ಹಾಗೆ ಕಲ್ಪಿಸುವುದು ವ್ಯರ್ಥವು ಎಂದರೆ—) ಏತಯಾ=ಈ ಜ್ಞಾತತೆಯಿಂದ, ಕಿಂ= ಏನು ಪ್ರಯೋಜನವು? (ಮತ್ತು ಜ್ಞಾತತೆಯಲ್ಲಿಯೂ ಜ್ಞಾತತೆಯು ಹುಟ್ಟುತ್ತದೆಂದು ಅಂಗೀಕರಿ ಸುತ್ತೀರೋ ಇಲ್ಲವೋ, ಇಲ್ಲವೆಂದರೆ— ಜ್ಞಾನವಿಷಯತ್ವವೇ ಇಲ್ಲದೆ ಹೋಗುವುದು. ೧ನೇ ಕಲ್ಪದಲ್ಲಿ ಅನುಭವದಲ್ಲಿ ಆರೂಢವಾದ ಜ್ಞಾತತಾಪ್ರವಾಹವನ್ನು ಅಂಗೀಕರಿಸುವವನಿಗೆ ಕಲ್ಪನಾ ಗೌರವವು ಬರುವುದು ಎನ್ನುತ್ತಾರೆ). ಕಲ್ಪನಾಯಾಃ ಗೌರವಾಚ್ಚ = ಕಲ್ಪನೆಗೆ ಗೌರವವು ಬರುವುದರಿಂದಲೂ ಕೂಡ, (ಹಾಗಾದರೆ ಘಟವು ಜ್ಞಾತವಾಯಿತು. ಘಟವು ಪ್ರಕಟ ವಾಯಿತು, ಎನ್ನುವ ಅರ್ಥದಲ್ಲಿ ವಿಶೇಷಣವಾಗಿ ಜ್ಞಾತತಾ ಪ್ರತ್ಯಕ್ಷವು ಆಗುತ್ತದೆ ಎಂದರೆ—)

ಮಯಾ=ನನ್ನಿಂದ, ಏತತ್=ಇದು, ಜ್ಞಾತಮಿತಿ=ತಿಳಿಯಲ್ಪಟ್ಟಿತು ಎಂದು, ಜ್ಞಾನಗೋಚರಂ=ಜ್ಞಾನವಿಷಯಕವಾದುದು, ಸಾಕ್ಷಿಗಂ = ಸಾಕ್ಷಿಯಲ್ಲಿರತಕ್ಕದ್ದು, ಜ್ಞಾನಮೇವ=ಜ್ಞಾನವೇ, (ಸಾಕ್ಷಿಯು ಸ್ವಪ್ರಕಾಶವು.) (ಮತ್ತು ಜ್ಞಾತತೆಯು ಸರ್ವತ್ರ ಎಲ್ಲಿಯೂ ತೋರುವುದೂ ಇಲ್ಲವು ಎನ್ನುತ್ತಾರೆ.) ತತಃ=ಆದರಿಂದ, ಅನ್ಯಾ=ಇತರವಾದ, ಪ್ರಮಿತಿರ್ನಾಮ=ಪ್ರಮಿತಿಯೆನ್ನುವುದು, ನ ದೃಶ್ಯತೇ = ಕಾಣಲ್ಪಡುವುದೇ ಇಲ್ಲ. (ಅಂದರೆ ಪ್ರಥಮ ಜ್ಞಾನದಲ್ಲಿ ಶುದ್ಧವಾದ ಅರ್ಥವೇ ತಿಳಿಯಲ್ಪಡುತ್ತದೆ. ಜ್ಞಾತತಾವಿಶಿಷ್ಟವಾದುದು ತಿಳಿಯಲ್ಪಡುವುದಿಲ್ಲ. ಆಗ ಜ್ಞಾತತೆಯೇ ಹುಟ್ಟಲಿಲ್ಲ. ಜ್ಞಾತತೆಯನ್ನು ಹುಟ್ಟಿಸಿ ಪುನಃ ಜ್ಞಾತತಾವಿಶಿಷ್ಟವಾದ ಅರ್ಥವನ್ನು ವಿಷಯೀಕರಿಸುವುದಾದರೆ ವಿರಮ್ಯವ್ಯಾಪಾರವು ಬರಬೇಕಾಗುವುದು. ಮತ್ತು ಪ್ರಥಮ ಜ್ಞಾನದಲ್ಲಿ ವಿಷಯೀಕೃತವಾದ ಅರ್ಥದಶೆಯಿಂದ ಹೆಚ್ಚು ಅರ್ಥವು ಉತ್ತರಜ್ಞಾನಗಳಲ್ಲಿ ಇರುವುದಿಲ್ಲ. ಜ್ಞಾತಃ ಎನ್ನುವಲ್ಲಿ ಆದರೂ ಜ್ಞಾನವು ವಿಷಯವು ಎಂದು ಉಕ್ತವೇ ಆಗಿದೆ) ॥ ೮೯ ॥ ೯೦ ॥

ಈಗ ಈಶ ತಜ್ಜ್ಞಾನ ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನು ಉಪಸಂಹಾರಮಾಡುತ್ತಾರೆ-

ಮೂ ॥ ಮಾನಮಾತೃಪ್ರಮೇಯಾಣಾಂ ತದುಚ್ಛಿತ್ತಿರ್ನಹಿ ಕ್ವಚಿತ್ ॥ ೯೧ ॥
ಸ್ವಾಪ್ನಾನಾಮಪಿ ಚೈತೇಷಾಂ ನ ಬಾಧೋ ದೃಶ್ಯತೇ ಕ್ವಚಿತ್ ।
ಜಾಗ್ರತ್ವಮಾತ್ರಮತ್ರೈಕಮನ್ಯಥಾ ದೃಶ್ಯತೇ ಸ್ಫುಟಂ ॥ ೯೨ ॥
ಅತೋ ಮಿಥ್ಯಾ ನ ಚ ಸ್ವಪ್ನೋ ಜಾಗ್ರದ್ವಜ್ಜಾಗ್ರದೇವ ಚ ।
ಆತ್ಮವತ್ಕ್ವಚಿದಾತ್ಮಾ ಚ ಸ್ಯಾದೇವ ಭ್ರಮಗೋಚರಃ ।
ಏತಾವತಾ ನ ಮಿಥ್ಯಾಸೌ ಸ್ವಪ್ನೇ ಜಾಗರಿತೇ ತಥಾ ॥ ೯೩ ॥

ಅ ॥ ತತ್=ಆದಕಾರಣ, ಮಾನಮಾತೃಪ್ರಮೇಯಾಣಾಂ—ಮಾನ = ಪ್ರಮಾಣವು, ಮಾತೃ=ಪ್ರಮಾತನು, ಅಂದರೆ- ತಿಳಿಯುವವನು, ಪ್ರಮೇಯಾಣಾಂ=ಪ್ರಮಾ ವಿಷಯಗಳಾದ ವಸ್ತುಗಳೂ ಇವುಗಳಿಗೆ, ಅಂದರೆ— ಮಾನಾದಿಗಳ ಭೇದದಿಂದ ತ್ರಿವಿಧವಾದ ಪ್ರಪಂಚಕ್ಕೂ, ಕ್ವಚಿತ್=ಯಾವ ಕಾಲದಲ್ಲಿಯೂ, ಉಚ್ಛಿತ್ತಿಃ=ಬಾಧವು, ನ ಹಿ=ಇಲ್ಲವಷ್ಟೆ. (ಪ್ರಕೃತವನ್ನು ಅನುಸರಿಸುತ್ತಾ ಸ್ವಪ್ನಕ್ಕೆ ಮಿಥ್ಯಾತ್ವವನ್ನು ಹೇತ್ವಂತರದಿಂದ ದೂಷಿಸುತ್ತಾರೆ.) ಚ = ಯಾವ ಕಾರಣದಶೆಯಿಂದ ಬಾಹ್ಯ ಪ್ರಪಂಚವು ಮಾತ್ರ ಮಿಥ್ಯೆಯಲ್ಲವೆಂದಿಷ್ಟೆ ಅಲ್ಲ. ಮತ್ತೆ ಸ್ವಾಪ್ನಾನಾಮಪಿ=ಸ್ವಪ್ನದಲ್ಲಿ ತೋರುವ, ಏತೇಷಾಂ = ಈ ಮಾನ ಮಾತೃಪ್ರಮೇಯಗಳಿಗೆ, ಕ್ವಚಿತ್ = ಯಾವ ಕಾಲದಲ್ಲಿಯೂ, ಬಾಧಃ=ಬಾಧವು, ನ ದೃಶ್ಯತೇ=ಕಾಣಲ್ಪಡುವುದಿಲ್ಲವೋ, (ಆದಕಾರಣ ಸ್ವಪ್ನವೂಕೂಡ ಮಿಥ್ಯೆಯಲ್ಲವೇ ಅಲ್ಲ.) ಸ್ವಪ್ನದಿಂದ ಎಚ್ಚತ್ತವನಿಗೆ ಇಲ್ಲಿ ಗಜವು ಇರಲಿಲ್ಲ ಇತ್ಯಾದಿಗಳಿಂದ ಬಾಧವು ತೋರುವುದರಿಂದ ಬಾಧವಿಲ್ಲವೆನ್ನುವುದು ಹೇಗೆ ಕೂಡುತ್ತದೆ ಎಂದರೆ,) ಅತ್ರ=ಇಲ್ಲಿ, ಜಾಗ್ರತ್ವಮಾತ್ರಂ ಏಕಂ=ಕೇವಲ ಜಾಗ್ರತ್ಕಾಲದಲ್ಲಿ ಅನುಭೂತವಾದ ಪದಾರ್ಥೈಕ್ಯವಂದೇ, ಅನ್ಯಥಾ = ಅವಿದ್ಯಮಾನವಾದುದಾಗಿ, ಸ್ಫುಟಂ=ಸ್ಪಷ್ಟವಾಗಿ, ದೃಶ್ಯತೇ = ಕಾಣಲ್ಪಡುತದೆ. ಅತಃ=ಆದಕಾರಣ, ಸ್ವಪ್ನಃ=ಸ್ವಪ್ನವು, ಮಿಥ್ಯಾ=ಮಿಥ್ಯೆಯು, ನ ಚ=ಅಲ್ಲ. ಜಾಗ್ರದ್ವತ್=ಜಾಗ್ರದವಸ್ಥೆಯಲ್ಲಿ ದೃಷ್ಟವಾದ ಶುಕ್ತ್ಯಾದಿಗಳು ಹೇಗೋ ಹಾಗೆಯೇ (ಅಂದರೆ ಹೇಗೆ ಶುಕ್ತಿಕಾದಿಗಳಿಗೆ ಆರೋಪಾಧಿಷ್ಠಾನತ್ವ, ಬಾಧಾಧಿಷ್ಠಾನತ್ವವಿದ್ದರೂ ಮಿಥ್ಯಾತ್ವವಿಲ್ಲವೋ, ಹಾಗೆಯೇ ಸ್ವಾಪ್ನ ಪದಾರ್ಥಗಳಿಗೂ ಆರೋಪಾಧಿಷ್ಠಾನತ್ವ, ಬಾಧಾಧಿಷ್ಠಾನತ್ವವಿದ್ದರೂ ಮಿಥ್ಯಾತ್ವವಿಲ್ಲ. (ಹಾಗಾದರೆ, ಜಾಗ್ರದವಸ್ಥೆಯಲ್ಲಿ ತೋರುವ ಶುಕ್ತ್ಯಾದಿಗಳಿಗೂ ಆರೋಪಾದ್ಯಧಿಷ್ಠಾನತ್ವರೂಪ

ಹೇತುವಿನಿಂದಲೇ ಮಿಥ್ಯಾತ್ವವನ್ನು ಸಾಧಿಸುವೆವೆಂದರೆ, ಜಾಗ್ರತ್=ಜಾಗ್ರದವಸ್ಥೆಯಲ್ಲಿ ತೋರಿದ ಶುಕ್ತ್ಯಾದಿ ಪದಾರ್ಥವು, (ಸ್ವಪ್ನಃ) ಚ=ಸ್ವಪ್ನವೂ ಕೂಡ, ಆತ್ಮವತ್=ಭ್ರಮಾದ್ಯಧಿಷ್ಠಾನನಾದ ಆತ್ಮನಂತೆಯೇ, ಕ್ವಚಿತ್=ಎಲ್ಲಿಯೂ, ಮಿಥ್ಯಾ=ಮಿಥ್ಯೆಯು, ನೈವ ಸ್ಯಾತ್=ಆಗಲಾರದು. ಆತ್ಮಾ ಚ=ಆತ್ಮನೂ ಕೂಡ, ಭ್ರಮಗೋಚರಃ ಅಹಂ ಕ್ಷಣಿಕಃ=ನಾನು ಕ್ಷಣಿಕನು ಇತ್ಯಾದಿ ಭ್ರಮಾಧಿಷ್ಠಾನನು, ಸ್ಯಾದೇವ=ಆಗಿಯೇ ಆಗುವನು.) (ಮತ್ತು ನಾನು ಕ್ಷಣಿಕನಲ್ಲ ಸ್ಥಿರನೇ ಎನ್ನುವ ಬಾಧಾಧಿಕರಣನೂ ಆಗುವನು.) ಏತಾವತಾ=ಭ್ರಮಾದ್ಯಧಿಷ್ಠಾನತ್ವಮಾತ್ರದಿಂದಲೇ, ಸ್ವಪ್ನೇ=ಸ್ವಪ್ನದಲ್ಲಿಯೂ, ತಥಾ=ಹಾಗೆಯೇ, ಜಾಗರಿತೇ=ಜಾಗರಾವಸ್ಥೆಯಲ್ಲಿಯೂ, ಅಸೌ= ಉಪಲಬ್ಧವಾದ ಪದಾರ್ಥವು, ಮಿಥ್ಯಾ=ಮಿಥ್ಯೆಯು, ನ=ಅಲ್ಲ. ಜಾಗ್ರತ್ಪದಾರ್ಥ,ಸ್ವಾಪ್ನಪದಾರ್ಥ ಇವೆರಡನ್ನು ಪಕ್ಷಮಾಡಿ ಭ್ರಮಾಧಿಷ್ಠಾನತ್ವಾದಿ ಹೇತುವಿನಿಂದ ಮಿಥ್ಯಾತ್ವವನ್ನು ಸಾಧಿಸಿದರೆ ಭ್ರಮಾಧಿಷ್ಠಾನತ್ವಾದಿ ಹೇತುವು ಸತ್ಯಭೂತ ಆತ್ಮನಲ್ಲಿಯೂ ಹಿಂದೆ ಹೇಳಿದಪ್ರಕಾರ ಇರುವುದ ರಿಂದ ಆ ಹೇತುವಿಗೆ ವ್ಯಭಿಚಾರವು ಆತ್ಮನಲ್ಲಿ ಬಂದೇ ಬರುವುದು ॥ ೯೨ ॥ ೯೩ ॥

ಹಾಗಾದರೆ ಕ್ಷಣಿಕತ್ವಾದ್ಯಾರೋಪಾಧಿಷ್ಠಾನನಾದ ಆತ್ಮನು ಮಿಥ್ಯಾಭೂತನೇ ಆದುದರಿಂದ ಅಲ್ಲಿ ಆ ಹೇತುವಿಗೆ ಹಿಂದೆ ಹೇಳಿದ ವ್ಯಭಿಚಾರವು ಹೇಗೆಂದರೆ— ೧ ಆತ್ಮನಲ್ಲಿ ಆರೋಪಿತವಾದ ಕ್ಷಣಿಕತ್ವಾದಿಗಳಿಗೆ ಮಿಥ್ಯಾತ್ವವಿದ್ದಪ್ರಯುಕ್ತ ಆತ್ಮನು ಮಿಥ್ಯಾಭೂತನು ಎಂದು ಹೇಳುವುದೋ, ಅಥವಾ ೨ ಆತ್ಮಸ್ವರೂಪಕ್ಕೇನೇ ಮಿಥ್ಯಾತ್ವವಿದ್ದಪ್ರಯುಕ್ತ ಹೀಗೆ ಹೇಳುವುದೋ, ೨ನೇ ಕಲ್ಪದಲ್ಲಿ ಆತ್ಮಸ್ವರೂಪವು ಸತ್ಯವು ಎಂದು ನಿಮ್ಮ ಪೂರ್ವಾಚಾರ್ಯರು ಒಪ್ಪಿರುವುದರಿಂದ ಅದಕ್ಕೆ ವಿರುದ್ಧವಾಗಿ ಮಿಥ್ಯಾತ್ವವನ್ನು ಹೇಳಿದರೆ ಅಪಸಿದ್ಧಾಂತವು ಸ್ಪಷ್ಟವೇ. ೧ನೇದ್ದನ್ನು ಆಶಂಕಿಸಿಕೊಂಡು ದೂಷಿಸುತ್ತಾರೆ—

**ಮೂ ॥ ಯದ್ಯಾತ್ಮನ್ಯನ್ಯಥಾದೃಶ್ಯಂ ಭ್ರಾಂತಮತ್ರಾಪಿ ತದ್ಭವೇತ್ ।**
**ಅಬಾಧಿತಾನುವೃತ್ತೇಸ್ತು ಸ್ವಪ್ನಾದೇರ್ಭ್ರಾಂತತಾ ಕುತಃ ॥ ೯೪ ॥**

**ಅ ॥** ಯದಿ = ಯಾವ ಪಕ್ಷದಲ್ಲಿ, ಆತ್ಮನಿ = ಆತ್ಮನಲ್ಲಿ, ಅನ್ಯಥಾದೃಶ್ಯಂ = ಬೇರೆ ಪ್ರಕಾರ ಕಾಣಲ್ಪಡತಕ್ಕದ್ದು, ಅಂದರೆ ಆತ್ಮನಲ್ಲಿ ಆರೋಪಿತವಾದ ಕ್ಷಣಿಕತ್ವಾದಿಯು, ಭ್ರಾಂತಂ= ಆರೋಪಿತವೋ, ತತ್ = ಹಾಗಾದರೆ, ತತ್ = ಆರೋಪಿತತ್ವವು, ಅತ್ರಾಪಿ = ಸ್ವಪ್ನದಲ್ಲಿ ತೋರುವ ಜಾಗ್ರತ್ವಾದಿಗಳಲ್ಲಿಯೂ, ಭವೇತ್ = ಆಗುವುದು. ಅಬಾಧಿತಾನುವೃತ್ತೇಸ್ತು = ಅಬಾಧಿತವಾಗಿ ಅನುವೃತ್ತಿಯಿದ್ದ ಪ್ರಯುಕ್ತ, ಸ್ವಪ್ನಾದೇಸ್ತು=ಸ್ವಪ್ನ ಮೊದಲಾದುದಕ್ಕೆ, ಭ್ರಾಂತತಾ=ಆರೋಪಿತತ್ವವು, ಕುತಃ=ಯಾವುದರಿಂದ?

**ತಾ ॥** (1) ಆರೋಪಿತಾಕಾರವು ಮಿಥ್ಯೆಯಾದುದರಿಂದ ಮಿಥ್ಯಾತ್ವವು ಸಾಧ್ಯವುಎಂದು ಕ್ತವಾಯಿತು. ಅಂತೂ ಸಿದ್ಧಸಾಧನವು. ಹೇಗೆಂದರೆ— ಜಾಗ್ರತ್ಕಾಲದಲ್ಲಿಯೂ, ಸ್ವಪ್ನಕಾಲ ದಲ್ಲಿಯೂ ತಿಳಿಯಲ್ಪಟ್ಟ ಅರ್ಥಗಳಲ್ಲಿ ಆರೋಪಿತಾಕಾರಗಳು ಮಿಥ್ಯೆಯೆಂದು ನಾವು ಅಂಗೀಕರಿ ಸಿರುವೆವು (2) ಆರೋಪ್ಯವಾಗಿ ಭ್ರಾಂತಿವಿಷಯತ್ವವು, ನಿಷೇಧ್ಯವಾಗಿ ಬಾಧವಿಷಯತ್ವವು ಹೇತುವು ಎನ್ನುವ ಪಕ್ಷದಲ್ಲಿ ಉತ್ತರಾರ್ಧದಿಂದ ದೋಷವನ್ನು ಹೇಳಿದರು. ಹೇಗೆಂದರೆ- ಹೇಗೆ ಬಾಧೋತ್ತರ ಕಾಲದಲ್ಲಿಯೂ ಅನುವೃತ್ತನಾದ ಆತ್ಮನು ಆರೋಪ್ಯನಲ್ಲವೋ, ಬಾಧ್ಯನೂ ಅಲ್ಲವೋ, ಹಾಗೆಯೇ ಸ್ವಾಪ್ನ-ಜಾಗ್ರತ್ಪದಾರ್ಥಗಳೂ ಕೂಡ ಬಾಧೋತ್ತರಕಾಲದಲ್ಲಿ ಅನುವೃತ್ತಗಳಾಗಿರುವುದರಿಂದ ಆರೋಪ್ಯಗಳೂ ಬಾಧ್ಯಗಳೂ ಅಲ್ಲ. ಅಂತೂ ಆ ಹೇತುವಿಗೆ ಸ್ವರೂಪಾಸಿದ್ಧಿಯು ಬರುವುದು ॥೯೪॥

ಮತ್ತು ಅನುಕೂಲ ಪ್ರಮಾಣವಿಲ್ಲದಿರುವುದರಿಂದಲೂ, ಪ್ರತಿಕೂಲಪ್ರಮಾಣವಿದ್ದಪ್ರಯುಕ್ತವೂ ಭ್ರಾಂತಿವಿಷಯತ್ವ ಮೊದಲಾದ ಹೇತುವಿನಿಂದ ಜಾಗ್ರತ್ಸ್ವಾಪ್ನಗಳಲ್ಲಿ ಮಿಥ್ಯಾತ್ವ ಸಾಧನವು ಅನುಪಪನ್ನವೆನ್ನುತ್ತಾರೆ—

**ಮೂ ॥ ನ ಚ ಕಾಚಿತ್ಪ್ರಮಾ ವಿಶ್ವಭ್ರಾಂತತ್ವೇ ಸರ್ವಮೇವ ಚ ।**
**ಅಭ್ರಾಂತತ್ವೇ ಪ್ರಮಾಣಂ ತು ಕಥಂ ತದ್ಭ್ರಾಂತತಾ ಭವೇತ್ ॥೯೫॥**

ಅ ॥ ವಿಶ್ವಭ್ರಾಂತತ್ವೇ=ಸ್ವಪ್ನ-ಜಾಗ್ರದ್ರೂಪ ಎರಡುವಿಧ ಜಗತ್ತಿಗೆ ಮಿಥ್ಯಾತ್ವ ವಿಷಯದಲ್ಲಿ, ಕಾಚಿತ್ಪ್ರಮಾ=ಯಾವುದೊಂದು ಪ್ರಮಾಣವೂ, ನ ಚ=ಇಲ್ಲ. ಸರ್ವಮೇವ=ಪ್ರತ್ಯಕ್ಷಮೊದಲಾದ ಎಲ್ಲವೂ, ಅಭ್ರಾಂತತ್ವೇ=ಜಗತ್ತು ಭ್ರಾಂತಿಪರಿಕಲ್ಪಿತವಲ್ಲವೆನ್ನುವ ವಿಷಯದಲ್ಲಿ, (ಸತ್ಯತ್ವವಿಷಯದಲ್ಲಿ,) ಪ್ರಮಾಣಂ ಚ=ಪ್ರಮಾಣವೇ, ಆದುದರಿಂದ ಕಥಂ=ಹೇಗೆ, ತದ್ಭ್ರಾಂತತಾ=ಎರಡುವಿಧ ಜಗತ್ತಿಗೂ ಭ್ರಾಂತಿವಿಷಯತ್ವವು, (ಅಂದರೆ ಮಿಥ್ಯಾತ್ವವು) ಭವೇತ್=ಆಗುವುದು? ॥ ೯೫ ॥

ದೃಶ್ಯತ್ವಾದಿ ಹೇತುಗಳಿಂದ ಸ್ವಾಪ್ನ-ಜಾಗ್ರತ್ಪದಾರ್ಥಗಳಿಗೆ ಮಿಥ್ಯಾತ್ವಾದಿಗಳನ್ನು ಸಾಧಿಸಿರುವುದರಿಂದ ಪ್ರಮಾಣವಿಲ್ಲವೆಂದು ಹೇಳಿದ್ದು ಹೇಗೆ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಭ್ರಾಂತಿವಿಷಯತ್ವವನ್ನು ಪ್ರಕಾರಾಂತರದಿಂದ ದೂಷಿಸುತ್ತಾರೆ—

**ಮೂ ॥ ಕಿಂ ಚ ಭ್ರಾಂತತ್ವವಾದೀ ಸ ಭ್ರಾಂತತ್ವಂ ಸ್ವಮತಸ್ಯ ಚ ॥ ೯೬ ॥**
**ಅಂಗೀಕರೋತಿ ನಿಯತಂ ತತ್ರ ಸಂಪ್ರತಿಪನ್ನತಾ ।**
**ವಾದಿನೋಸ್ತೇನ ಚಾಭ್ರಾಂತಂ ವಿಶ್ವಮೇವ ಭವಿಷ್ಯತಿ ॥**
**ಭ್ರಾಂತತ್ವ ಭ್ರಾಂತತಾ ಚೇತ್ಸ್ಯಾತ್ ಕಥಂ ನಾಭ್ರಾಂತಿ ಸತ್ಯತಾ ॥**
**॥ ೯೭ ॥**

ಅ ॥ ಕಿಂ ಚ = ಮತ್ತು, ಭ್ರಾಂತತ್ವವಾದೀ = ದೃಶ್ಯತ್ವಾದಿಗಳಿಂದ ದ್ವಿವಿಧವಾದ ಜಗತ್ತಿಗೂ ಭ್ರಾಂತಿವಿಷಯತ್ವವನ್ನು ಸಾಧಿಸತಕ್ಕ, ಸಃ=ಅದ್ವೈತಿಯು, ಸ್ವಮತಸ್ಯ ಚ=ತನ್ನ ಪ್ರತಿಜ್ಞಾತವಾದ ವಿಶ್ವಮಿಥ್ಯಾತ್ವರೂಪ ಅರ್ಥಕ್ಕೂ, ಭ್ರಾಂತತ್ವಂ=ಮಿಥ್ಯಾತ್ವವನ್ನು, ನಿಯತಂ=ನಿಯಮವಾಗಿ, ಅಂಗೀಕರೋತಿ = ಅಂಗೀಕರಿಸುತ್ತಾನೆ. ತತ್ರ=ಪರರು ಪ್ರತಿಜ್ಞಾಮಾಡಿದ ಅರ್ಥವು ಭ್ರಾಂತಿವಿಷಯವು ಇತ್ಯಾದ್ಯರ್ಥದಲ್ಲಿ, ವಾದಿನೋಃ = ವಾದಿ-ಪ್ರತಿವಾದಿಗಳಿಗೆ, ಸಂಪ್ರತಿಪನ್ನತಾ=ಸಮ್ಮತಿಯು ಇದೆ. ತೇನ ಚ=ಅದರಿಂದ, ಪರರು ಹೇಳಿರುವ ಸರ್ವಮಿಥ್ಯಾತ್ವವು ಮಿಥ್ಯೆಯಾದುದರಿಂದ, ವಿಶ್ವಂ=ಜಗತ್ತು, ಅಭ್ರಾಂತಮೇವ=ಭ್ರಾಂತಿವಿಷಯವಲ್ಲವೆಂದೇ, ಭವಿಷ್ಯತಿ=ಆಗುವುದು. ಭ್ರಾಂತತ್ವಭ್ರಾಂತತಾ ಚೇತ್=ಭ್ರಾಂತಿವಿಷಯತ್ವಕ್ಕೂ ಭ್ರಾಂತಿವಿಷಯತ್ವವಿದ್ದರೆ, ಕಥಂ = ಹೇಗೆ, ಅಭ್ರಾಂತಿಸತ್ಯತಾ ನ ಸ್ಯಾತ್ = ಭ್ರಮವಿಷಯವಲ್ಲವೆನ್ನುವುದಕ್ಕೆ ಸತ್ಯತ್ವವು ಬರಲಾರದು. (ಸತ್ಯತ್ವವೇ ಬರುವುದು)

ತಾ ॥ (1) ವಿಶ್ವಮಭ್ರಾಂತಂ ಭ್ರಾಂತ-ಭ್ರಾಂತತ್ವಾತ್=ಜಗತ್ತು ಭ್ರಮವಿಷಯವಲ್ಲ, ಭ್ರಾಂತಿವಿಷಯವಾದ ಭ್ರಾಂತಿವಿಷಯತ್ವವಿದ್ದ ಪ್ರಯುಕ್ತ, (2) 'ವಿಶ್ವಮಬಾಧ್ಯಂ ಬಾಧ್ಯಬಾಧ್ಯತ್ವಾತ್ ಆತ್ಮವತ್' ಜಗತ್ತು ಬಾಧ್ಯವಲ್ಲ. ಬಾಧ್ಯವಾದ ಬಾಧ್ಯತ್ವವಿದ್ದಪ್ರಯುಕ್ತ, ಆತ್ಮನಂತೆ. ಎಂದು ಅನುಮಾನಗಳು ಉಕ್ತವಾದುವು ॥ ೯೬ ॥ ೯೭ ॥

ಅಪವ್ಯಾಖ್ಯಾನ ದೂಷಣಕ್ಕೆ ಪ್ರಯೋಜನವನ್ನು ಹೇಳುತ್ತಾರೆ—

**ಮೂ ॥ ಅಶೇಷದೋಷದುಷ್ಟಂ ತನ್ಮತಂ ಹೇಯಂ ಬುಭೂಷುಭಿಃ ॥ ೯೮ ॥**
**ಯೇನ ಸ್ವಮತ ಹೇಯತ್ವಂ ಸ್ವಯಮಂಗೀಕೃತಂ ಸದಾ ।**
**ಭ್ರಾಂತಿತ್ವಾದ್ದುರ್ಘಟತ್ವಸ್ಯ ಭೂಷಣತ್ವಾಚ್ಚ ಕೇವಲಂ ।**
**ಉನ್ಮತ್ತೋಽಪಿ ಕಥಂ ತಸ್ಯ ಮತಂ ಸ್ವೀಕರ್ತುಮಿಚ್ಛತಿ ॥ ೯೯ ॥**

ಅ ॥ ಅಶೇಷದೋಷದುಷ್ಟಂ=ಪ್ರಮಾಣವಿರೋಧಾದಿ ಎಲ್ಲಾ ದೋಷಗಳಿಂದ ದುಷ್ಟವಾದ, ತನ್ಮತಂ = ಸ್ವಾಪ್ನ-ಜಾಗರಪ್ರಪಂಚಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸತಕ್ಕ ಮತವು, ಬುಭೂಷುಭಿಃ=ತಿಳಿಯಲಿಚ್ಛಿಸುವವರಿಂದ, ಹೇಯಂ = ಬಿಡಲರ್ಹವೇ, ಯೇನ = ಯಾವ ಮಾಯಾವಾದಿಯಿಂದ, ಸ್ವಮತಹೇಯತ್ವಂ = ತನ್ನ ಮತಕ್ಕೆ ಹೇಯತ್ವವು, ಸದಾ = ಯಾವಾಗಲೂ, ಸ್ವಯಂ=ತನ್ನಿಂದ, ಅಂಗೀಕೃತಂ=ಅಂಗೀಕೃತವಾಗಿದೆ. ಭ್ರಾಂತಿತ್ವಾತ್=ಸರ್ವವೂ ಭ್ರಾಂತಿ ವಿಷಯವೆಂದು ಅಂಗೀಕರಿಸಿರುವುದರಿಂದಲೂ, ದುರ್ಘಟತ್ವಸ್ಯ ಭೂಷಣತ್ವಾಚ್ಚ=ದೌರ್ಘಟ್ಯಕ್ಕೆ ಭೂಷಣತ್ವವನ್ನು ಅಂಗೀಕರಿಸಿದರಿಂದಲೂ, ಕೇವಲಂ ಉನ್ಮತ್ತೋಽಪಿ=ಸಾಕ್ಷಾತ್ ಉನ್ಮತ್ತನೂ ಕೂಡ ಅಂದರೆ ಉನ್ಮತ್ತಕ (ಉಂಬತ್ತ) ಬೀಜಾದಿಗಳನ್ನು ತಿಂದು ತಾತ್ಕಾಲಿಕ ಉನ್ಮಾದವನ್ನು ಹೊಂದಿದವನಲ್ಲ. ಮತ್ತೆ ಸಹಜವಾಗಿಯೇ ಹುಚ್ಚನಾದವನೂ ಕೂಡ, ತಸ್ಯ=ಆ ಅದ್ವೈತಿಯ, ಮತಂ=ಮತವನ್ನು, ಸ್ವೀಕರ್ತುಂ=ಸ್ವೀಕರಿಸಲಿಕ್ಕೆ, ಕಥಂ=ಹೇಗೆ, ಇಚ್ಛತಿ=ಇಚ್ಛಿಸುತ್ತಾನೆ? ಅಂದರೆ, ಉನ್ಮತ್ತನೂಕೂಡ, ತನ್ನ ಮತವನ್ನು ಭ್ರಾಂತವೆಂದೂ, ದುರ್ಘಟವೆಂದೂ ತಾನೇ ತಿಳಿಯುವುದಿಲ್ಲ ॥ ೯೮ ॥ ೯೯ ॥

ಹಾಗಾದರೆ, ಲೋಕದಲ್ಲಿ ಹೇಗೆ ಪ್ರವೃತ್ತವಾಯಿತು ಎಂದರೆ—

**ಮೂ ॥ ಈಶಶಕ್ತೇರಚಿಂತ್ಯತ್ವಾನ್ಮಹೋನ್ಮತ್ತೈಃ ಪ್ರವರ್ತಿತಂ ॥ ೧೦೦ ॥**
**ಅತಃ ಪ್ರಜ್ಞಾಽತ್ರ ಮಾಯೋಕ್ತಾ ಜೈವ್ಯುಪಾದಾನಮೇವ ಸಾ ॥**
**ನಿಮಿತ್ತಮೈಶ್ವರೀ ಮುಖ್ಯಾ(ಖ್ಯಂ) ನಿರ್ಮಿತಂ ತ್ರಾತಮೇವ ಚ ॥**
**॥ ೧೦೧ ॥**
**ತಾಭ್ಯಾಂ ಸಹ ಪೃಥಕ್ಚೈವ ಮಾಯಾಮಾತ್ರಮಿತೀರ್ಯತೇ ॥**
**ಉಭಾಭ್ಯಾಂ ಮಾತವೈಶ್ವರ್ಯೋರ್ತ್ರಾತಂ ಸಹ ಪೃಥಕ್ತತಃ ॥ ೧೦೨ ॥**

ಅ ॥ ಈಶಶಕ್ತೇಃ = ಶ್ರೀ ಹರಿಯ ಸಾಮರ್ಥ್ಯಕ್ಕೆ, ಅಚಿಂತ್ಯತ್ವಾತ್ = ಚಿಂತಿಸಲಿಕ್ಕೆ ಅಶಕ್ಯತ್ವವಿದ್ದಪ್ರಯುಕ್ತ (ಅಂದರೆ ಶ್ರೀ ಹರಿಯ ಸಾಮರ್ಥ್ಯವನ್ನು ಆಲೋಚಿಸಲಿಕ್ಕೂ ಅಸಾಧ್ಯವಾದಪ್ರಯುಕ್ತ) ಮಹೋನ್ಮತ್ತೈಃ=ಮಹತ್ತಾದ ಮದೋನ್ಮತ್ತರಿಂದ, ದುರ್ಮತಂ=ಮಾಯಾಮತವು, ಪ್ರವರ್ತಿತಂ = ಉಂಟಾಯಿತು. ಇಂತಹ ದುರ್ಮತ ಪ್ರವೃತ್ತಿಯಲ್ಲಿ ಅಚಿಂತ್ಯೇಶ್ವರ ಶಕ್ತಿಯು ಮಹೋನ್ಮತ್ತತ್ವವೂ ಕೂಡ ಕಾರಣವು (ಸೂತ್ರಕ್ಕೆ ವ್ಯಾಖ್ಯಾನವನ್ನುಪಕ್ರಮಿಸಿ ಅಪವ್ಯಾಖ್ಯಾನವು ಹೇಯವು ಎಂದು ವ್ಯುತ್ಪಾದಿಸಿದ್ದು ಅಸಂಗತವು ಎಂದರೆ— ತಮ್ಮ ವ್ಯಾಖ್ಯಾನವು ದೃಢವಾಗುವುದಕ್ಕಾಗಿ ಆವಶ್ಯಕವೇ ಎನ್ನುವ ಅಭಿಪ್ರಾಯದಿಂದ ಸೂತ್ರಾರ್ಥವನ್ನು ವಿವರಿಸುತ್ತಾ ಮಾಯಾ ಶಬ್ದಾರ್ಥವನ್ನು ಹೇಳುತ್ತಾರೆ.) ಅತಃ=ಮಾಯಾವಾದಿ ವ್ಯಾಖ್ಯಾನವು ದುಷ್ಟವಾಗಿರುವುದರಿಂದ, ಅತ್ರ=ಇಲ್ಲಿ, ಜೈವೀ=ಜೀವಸಂಬಂಧಿಯಾದ, ಪ್ರಜ್ಞಾ=ಪ್ರಜ್ಞೆಯೇ, ಮಾಯಾ=

ಮಾಯೆಯೆಂದು, ಉಕ್ತಾ=ಹೇಳಲ್ಪಟ್ಟದೆ. ಸಾ=ಆ ಜೀವ ಪ್ರಜ್ಞೆಯು, ಉಪಾದಾನಮೇವ=ಉಪಾದಾನಕಾರಣವೇ, ಐಶ್ವರೀ = ಈಶ್ವರ ಸಂಬಂಧಿಯಾದ ಪ್ರಜ್ಞೆಯು, ನಿಮಿತ್ತಂ=ಸ್ವಪ್ನಕ್ಕೆ ನಿಮಿತ್ತಕಾರಣವು. ಐಶ್ವರೀ=ಈಶ್ವರಪ್ರಜ್ಞೆಯು, ಮುಖ್ಯಾ=ಮುಖ್ಯವಾದುದೇ. (ಜೀವಪ್ರಜ್ಞೆಯು ಅಮುಖ್ಯವು.) ಅಂದರೆ ಪ್ರಜ್ಞಾ ಶಬ್ದದಿಂದ ಲಕ್ಷಣಾವೃತ್ತಿಯಿಂದ ಪ್ರಜ್ಞೆಯಿಂದ ಉತ್ಪನ್ನವಾದ ಸಂಸ್ಕಾರವನ್ನು ಇಟ್ಟುಕೊಳ್ಳಬೇಕು. '**ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್**'ಎನ್ನುವ ಸೂತ್ರದಲ್ಲಿರುವ'**ಮಾಯಾಮಾತ್ರಂ**'ಎನ್ನುವ ಪದವನ್ನು ವ್ಯಾಖ್ಯಾನ ಮಾಡುತ್ತಾರೆ.) ತಾಭ್ಯಾಂ=ಜೀವೇಶ್ವರ ಪ್ರಜ್ಞೆಗಳಿಂದಲೇವೇ, ಸಹ=ಕೂಡಿ, ಸಂಧ್ಯಂ=ಸ್ವಪ್ನವು, ನಿರ್ಮಿತಂ=ನಿರ್ಮಿಸಲ್ಪಟ್ಟದೆ. ಪೃಥಕ್ಚ=ಪ್ರತ್ಯೇಕವಾಗಿಯೂ, ಈಶ್ವರ ಪ್ರಜ್ಞೆಯಿಂದ, ತ್ರಾತಮೇವ=ರಕ್ಷಿಸಲ್ಪಟ್ಟದೆ. ಇತಿ=ಈ ಪ್ರಕಾರ, ಮಾಯಾಮಾತ್ರಂ=ಮಾಯಾಮಾತ್ರವೆಂದು, ಈರ್ಯತೇ=ಹೇಳಿಸಿಕೊಳ್ಳಲ್ಪಡುತ್ತದೆ. (ಸಹ ಪೃಥಕ್ ಎಂದು ಹೇಳಿದ್ದನ್ನೇ ವಿವರಿಸುತ್ತಾರೆ.) (ಯಾವ ಕಾರಣದೆಶೆಯಿಂದ) ಉಭಾಭ್ಯಾಂ = ಜೀವೇಶ್ವರ ಪ್ರಜ್ಞೆಗಳಿಂದ, ಮಾತಂ= ನಿರ್ಮಿಸಿಕೊಳ್ಳಲ್ಪಟ್ಟದೋ, ಐಶ್ವರ್ಯಾ = ಈಶ್ವರ ಪ್ರಜ್ಞೆಯಿಂದ, ತ್ರಾತಮೇತ = ರಕ್ಷಿಸಿಕೊಳ್ಳಲ್ಪಟ್ಟದೋ, ತತ್=ಆದಕಾರಣ, ಸಹ ಪೃಥಕ್ಚ=ಸಹ ಪೃಥಕ್ ಎಂದು ಹೇಳಲ್ಪಟ್ಟದೆ ॥ ೧೦೦ ॥ ॥ ೧೦೧ ॥ ೧೦೨ ॥

ಹಾಗಾದರೆ ಇದು ಪೂರ್ವಾಪರ ವಿರುದ್ಧವಾಯಿತು. ಮೊದಲು ಸ್ವಾಪ್ನಪದಾರ್ಥಕ್ಕೆ ಜೀವನ ಸಂಸ್ಕಾರವೇ ಉಪಾದಾನಕಾರಣವೆಂದು ಹೇಳಿಯದೆ. ಈಗ ಸ್ವಪ್ನಕ್ಕೆ ಪ್ರಜ್ಞೆಯು ಉಪಾದಾನಕಾರಣವೆಂದು ಹೇಳಲ್ಪಟ್ಟದೆ. ಎಂದರೆ— ಇಲ್ಲಿ ಪ್ರಜ್ಞಾ ಶಬ್ದದಿಂದ, ಲಕ್ಷಣಾವೃತ್ತಿಯಿಂದ ವಾಸನಾವನ್ನು ಇಟ್ಟುಕೊಳ್ಳಬೇಕು. ಹಾಗಾದರೆ ಪ್ರಜ್ಞೆಗೂ, ವಾಸನಾಕ್ಕೂ ಸಂಬಂಧವು ಯಾವುದು, ಯಾವ ಮುಖ್ಯಾರ್ಥಸಂಬಂಧವನ್ನು ಇಟ್ಟುಕೊಂಡು ಲಕ್ಷಣಾಮಾಡಿದ್ದು ಎಂದರೆ—

**ಮೂ ॥ ಪ್ರಜ್ಞಾತ್ಮಕಂ ಮನೋ ಯೇನ ಮನೋ ರೂಪಾಶ್ಚ ವಾಸನಾಃ ।**
**ಧೀರ್ಭೀರಿತಿ ಮನಸ್ತ್ವೇವೇತ್ಯಾಹ ಚ ಶ್ರುತಿರಂಜಸಾ ॥ ೧೦೩ ॥**

ಅ ॥ ಯೇನ = ಯಾವ ಕಾರಣದಿಂದ, ಮನಃ=ಮನಸ್ಸು, ಪ್ರಜ್ಞಾತ್ಮಕಂ=ಪ್ರಜ್ಞೆಗೆ ಉಪಾದಾನಕಾರಣವೋ, ವಾಸನಾಶ್ಚ=ಸಂಸ್ಕಾರಗಳು, ಮನೋರೂಪಾಃ=ಮನಸ್ಸೇ ಉಪಾದಾನ ಕಾರಣವಾಗಿವುಳ್ಳವುಗಳೋ (ಅದರಿಂದ ಇವುಗಳಿಗೆ ಏಕಕಾರಣಕತ್ವರೂಪವಾದ ಸಂಬಂಧದಿಂದ ಲಕ್ಷಣಾವೃತ್ತಿಯು ಕೂಡುತ್ತದೆ.) (ಪ್ರಜ್ಞಾವಾಸನಾದಿಗಳಿಗೆ ಮನಸ್ಸು ಉಪಾದಾನಕಾರಣವು ಎನ್ನುವುದು ಯಾವುದರಿಂದ ಎಂದರೆ—) 'ಧೀಃ ಭೀಃ=' ಇತಿ ಧೀರ್ಭೀರ್ಹ್ರೀಃ ಇತ್ಯಾದಿಗಳಿಗೆಲ್ಲವೂ, ಮನಸ್ತ್ವೇವ=ಮನಸ್ಸೇ ಉಪಾದಾನಕಾರಣವಾಗಿ ಉಳ್ಳದ್ದು, ಇತಿ=ಹೀಗೆ, ಶ್ರುತಿಃ=ಶ್ರುತಿಯು, ಅಂಜಸಾ=ಚೆನ್ನಾಗಿ, ಸ್ಪಷ್ಟವಾಗಿ, ಆಹ ಚ=ಪ್ರತಿಪಾದಿಸುತ್ತದೆ ॥ ೧೦೩ ॥

ಹಾಗಾದರೆ ಪ್ರಜ್ಞಾವಾಸನೆಗಳಿಗೆ ಕಾರ್ಯಕಾರಣಭಾವಸಂಬಂಧವು ಇದೆ. ಅದೇವೇ ಲಕ್ಷಣಾವೃತ್ತಿಗೆ ಕಾರಣವಾಗಲಿ, ಪ್ರಜ್ಞಾವಾಸನೆಗಳೆರಡೂ ಮನಸ್ಸಿನಿಂದ ಹುಟ್ಟಿದವುಗಳು ಎಂದು ಹೇಳಿ ಮನೋದ್ವಾರಕ ಸಂಬಂಧವನ್ನು ಲಕ್ಷಣಾವೃತ್ತಿಗೆ ಬೀಜವೆಂದು ಹೇಳಿದು ಏಕೆಂದರೆ—

**ಮೂ ॥ ಚಿದಚಿನ್ಮಿಶ್ರಮೇವೈತನ್ಮನೋ ಯಾವಚ್ಚ ಸಂಸೃತಿಃ ।**
**ತೇನಾವಸ್ಥಾ ಇಮಾಃ ಸರ್ವಾ ಜೀವಃ ಪಶ್ಯತಿ ಸರ್ವದಾ ॥ ೧೦೪ ॥**

ಅ ॥ (ಸ್ವಪ್ನಮಾತ್ರವಲ್ಲ. ಮತ್ತೆ) ಇಮಾಃ ಸರ್ವಾಃ ಅವಸ್ಥಾಃ=ಈ ಸಂಸಾರದಲ್ಲಿರತಕ್ಕ ಎಲ್ಲಾ ಅವಸ್ಥೆಗಳನ್ನು, ತೇನ=ಮನಸ್ಸಿನಿಂದಲೇ, ಸರ್ವದಾ=ಯಾವಾಗಲೂ, ಜೀವಃ=ಜೀವನು, ಪಶ್ಯತಿ=ನೋಡುತ್ತಾನೆ. (ಆದುದರಿಂದ ಪ್ರಧಾನವಾದುದರಿಂದ ಮನಸ್ಸೇ ದ್ವಾರ ವಾಗಿಉಳ್ಳ ಸಂಬಂಧವನ್ನೇ ಇಟ್ಟುಕೊಂಡದ್ದು.) (ಮನಸ್ಸನ್ನು ಕೆಲವರು ಜಡವೆನ್ನುತ್ತಾರೆ. ಕೆಲವರು ಅಚೇತನವಾದುದನ್ನೇ ಆರೋಪಿತವಾದ ಚೈತನ್ಯವುಳ್ಳದ್ದನ್ನಾಗಿ ಹೇಳುತ್ತಾರೆ. ಅದನ್ನು ನಿರಾಕರಿಸಿ ಮನಸ್ಸಿನ ಸ್ವರೂಪವನ್ನು ಹೇಳುತ್ತಾರೆ.) (ಯತ್=ಯಾವಕಾರಣದೆಶೆಯಿಂದ) ಏತತ್ ಮನಃ=ಈ ಮನಸ್ಸು, ಚಿದಚಿನ್ಮಿಶ್ರಮೇವ = ಚೇತನಾಚೇತನಮಿಶ್ರವೇ, ಯಾವಚ್ಚ ಸಂಸೃತಿಃ=ಸಂಸಾರವಿರುವತನಕವೇ (ಜೀವನಿಗೆ ಉಪಕಾರ-ಅಪಕಾರಗಳನ್ನು ಮಾಡುತ್ತದೆ.) ಅಂದರೆ ಕೇವಲ ಚೇತನಾಮಿಶ್ರವಾದ ಘಟಾದಿಗಳಂತೆ ಅಲ್ಲ. ಆರೋಪಿತ ಚೈತನ್ಯವುಳ್ಳದ್ದೂ ಅಲ್ಲ. (ಮತ್ತೆ ಚಿದಚಿನ್ಮಿಶ್ರವೆಂದೇ ಒಪ್ಪಬೇಕು) ॥ ೧೧೪ ॥

'ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್' ಎನ್ನುವ ಸೂತ್ರಖಂಡವನ್ನು ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ ಮನೋವಿಕಾರಾ ವಿಷಯಾಃ ಸ್ವಾಪ್ನಾ ಯದ್ಬಾಹ್ಯವನ್ನ ತೇ ।**
**ಸ್ಥೂಲಾ ಭವಂತ್ಯತಸ್ತೇಷಾಂ ಸ್ಪಷ್ಟತಾ ನ ತಥಾ ಕ್ವಚಿತ್ ॥ ೧೧೫ ॥**

ಅ ॥ ಯತ್=ಯಾವಕಾರಣದೆಶೆಯಿಂದ, ಸ್ವಾಪ್ನಾಃ ವಿಷಯಾಃ=ಸ್ವಪ್ನದಲ್ಲಿ ತೋರುವ ವಸ್ತುಗಳು, ಮನೋವಿಕಾರಾಃ = ಮನೋಜನ್ಯಗಳಾದ ವಾಸನಾವಿಕಾರಗಳೋ, (ಆದುದರಿಂದಲೇ) ತೇ=ಅವುಗಳು, ಬಾಹ್ಯವತ್=ಬಾಹ್ಯವಸ್ತುವಿನಂತೆ, ಸ್ಥೂಲಾಃ=ಅಲ್ಪದೇಶದಲ್ಲಿರಲಿಕ್ಕೆ ಅನರ್ಹಗಳು ಆಗುವುದಿಲ್ಲ. ತೇಷಾಂ=ಅವುಗಳಿಗೆ, ತಥಾ = ಹಾಗೆ ಬಾಹ್ಯಪದಾರ್ಥದಂತೆ, ಕ್ವಚಿತ್=ಕೆಲವುಕಡೆ, ಸ್ಪಷ್ಟತಾ=ಬಾಹ್ಯಾರ್ಥಕ್ರಿಯಾಕಾರಿತ್ವವು, ನ=ಇಲ್ಲ. ಅಥವಾ ಯಾವ ಕಾರಣದಿಂದ ಅವುಗಳು ಜಾಗ್ರತ್ಕಾಲದಲ್ಲಿ ಕಾಣುವ ಬಾಹ್ಯಪದಾರ್ಥಗಳಂತೆ ಸ್ಥೂಲಗಳಾಗುವುದಿಲ್ಲವೋ ಹಾಗೆಯೇ ಅವುಗಳಿಗೆ ಕೆಲವುಕಡೆ ಸ್ಪಷ್ಟತ್ವವಿಲ್ಲ. ಆದಕಾರಣ ಸ್ವಾಪ್ನವಿಷಯಗಳು ಮನೋವಿಕಾರಗಳು. ॥ ೧೧೫ ॥

ಹಾಗಾದರೆ ಸ್ವಾಪ್ನ-ಕಾಮಿನೀ ಸಂಭೋಗಾದಿಗಳಿಗೆ ಚರಮಧಾತು ವಿಸರ್ಗ ಮೊದಲಾದ ಬಾಹ್ಯಾರ್ಥಕ್ರಿಯಾಕಾರಿತ್ವವು ದೃಷ್ಟವಾಗಿರುವುದರಿಂದ ಬಾಹ್ಯಾರ್ಥ ಕ್ರಿಯಾಕಾರಿತ್ವವಿಲ್ಲವೆಂದು ಹೇಳಿದ್ದು ಕೂಡುವುದಿಲ್ಲವೆಂದರೆ—

**ಮೂ ॥ ಕ್ವಚಿತ್ ಸ್ಪಷ್ಟಾ ಅಪಿ ಸ್ಯುಸ್ತೇ ವಾಸನಾ ಮಾನಸೀ ಚ ಸಾ ॥ ೧೧೬ ॥**

ಅ ॥ ತೇ=ಆ ಸ್ವಾಪ್ನವಿಷಯಗಳು, ಕ್ವಚಿತ್=ಕೆಲವು ಕಡೆ, ಸ್ಪಷ್ಟಾ ಅಪಿ=ಸ್ಪಷ್ಟಗಳೂ ಕೂಡ, ಸ್ಯುಃ=ಆಗುತ್ತವೆ. ಅಂದರೆ ಬಾಹ್ಯಾರ್ಥಕ್ರಿಯೆಯನ್ನು ಹುಟ್ಟಿಸತಕ್ಕವುಗಳೂ ಕೂಡ (ಬಹಳವಾಗಿ ಸ್ವಾಪ್ನಾರ್ಥಗಳು ಬಾಹ್ಯಾರ್ಥಕ್ರಿಯೆಗಳನ್ನುಂಟುಮಾಡದೆ ಇರುವುದರಿಂದ ಸ್ಪಷ್ಟತ್ವವಿಲ್ಲವೆಂದು ಹಿಂದೆ ಹೇಳಿದ್ದು ದೋಷವಿಲ್ಲ). (ಹೀಗಾದರೆ ಬಾಹ್ಯಾರ್ಥಕ್ರಿಯೆಯನ್ನುಂಟು ಮಾಡುವ ಸ್ವಾಪ್ನ-ಕಾಮಿನೀ ಸಂಭೋಗಾದಿರೂಪವಾದ ಕೆಲವು ಸ್ವಾಪ್ನ ಅಂಶಕ್ಕೆ ವಾಸನಾಮಯತ್ವವು ಬಾರದೆ ಹೋಗಬೇಕಾದೀತು. ಎಂದರೆ)—ಸಾ ಚ=ಅದೂ ಕೂಡ, ಮಾನಸೀ=ಮನೋಜನ್ಯವಾದ, ವಾಸನಾ=ಸಂಸ್ಕಾರೋಪಾದಾನಕವಾದುದು, (ಸಿದ್ಧವಾಯಿತು).

ಅಂದರೆ ಆ ಸ್ವಾಪ್ನಾಂಶಗಳಲ್ಲಿ ಅಸ್ಪಷ್ಟತ್ವವಿಲ್ಲದಿದ್ದರೂ ಅಸ್ಥೂಲತ್ವರೂಪ ಸ್ವಾಪ್ನಪದಾರ್ಥ ಧರ್ಮವು ಇದ್ದೇ ಇದೆ. ॥ ೧೦೬ ॥ ಸೂ. ॥ ೧ ॥ ೨ ॥ ೩ ॥ ೪ ॥ ಅಧಿ. ॥ ೧ ॥

**ಸಂಧ್ಯಾಧಿಕರಣವು ಸಮಾಪ್ತವಾಯಿತು.**



## ಪರಾಭಿಧ್ಯಾನಾಧಿಕರಣವು.

**"ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧ ವಿಪರ್ಯಯೌ ಓಂ"** ॥ ಸೂ. ೫ ॥

ಈಶ್ವರನ ಇಚ್ಛೆಯಿಂದಲೇ ಸ್ವಪ್ನವು ತಿರೋಹಿತವಾಗುತ್ತದೆ. ಬಾಹ್ಯಪದಾರ್ಥಜ್ಞಾನದಿಂದ ಅಲ್ಲ. ಯಾವ ಕಾರಣದಿಂದ ಈ ಜೀವನಿಗೆ ಬಂಧಮೋಕ್ಷಗಳು ಶ್ರೀ ಹರಿಯಿಂದಲೇ ಆಗುತ್ತವೆ?

**ಮೂ ॥ ಈಶೇಚ್ಛಯಾಂತರ್ದಧಾತಿ ವ್ಯಜ್ಯತೇ ಚ ಪುನಸ್ತಯಾ ॥**
**ಸೃಷ್ಟ್ವೈವ ವಾಸನಾಭಿಷ್ಟ ಪ್ರಪಂಚಂ ಸ್ವಾಪ್ನಮೀಶ್ವರಃ ।**
**ವಾಸನಾಮಾತ್ರತಾಂ ತಸ್ಯ ನೀತ್ವಾಂತರ್ಧಾಪಯತ್ಯಜಃ** ॥ ೧೦೭ ॥

ಅ ॥ (ಸಂಧ್ಯಂ=ಸ್ವಪ್ನವು) ಈಶೇಚ್ಛಯಾ=ಶ್ರೀಹರಿಯ ಇಚ್ಛೆಯಿಂದ, ಅಂತರ್ದಧಾತಿ= ಅಂತರ್ಧಾನವನ್ನು ಹೊಂದುತ್ತದೆ. ಪುನಃ=ಮತ್ತು, ತಯಾ=ಈಶ್ವರೇಚ್ಛೆಯಿಂದ, ವ್ಯಜ್ಯತೇ ಚ= ವ್ಯಕ್ತವಾಗುತ್ತದೆ. ಅಜಃ=ಉತ್ಪತ್ತಿರಹಿತನಾದ, ಈಶ್ವರಃ=ಶ್ರೀ ಹರಿಯು, ತಸ್ಯ=ಜೀವನ, ವಾಸನಾಭಿಃ=ಸಂಸ್ಕಾರಗಳಿಂದ, ಸ್ವಾಪ್ನಂ=ಸ್ವಪ್ನಸಂಬಂಧಿಯಾದ, ಪ್ರಪಂಚಂ=ಪ್ರಪಂಚವನ್ನು, ಸೃಷ್ಟ್ವೈವ=ಸೃಷ್ಟಿಮಾಡಿಯೇ (ತೋರಿಸಿಯೇ), ತಸ್ಯ=ಸ್ವಾಪ್ನಕ್ಕೆ, ವಾಸನಾಮಾತ್ರತಾಂ= ಸಂಸ್ಕಾರಮಾತ್ರತ್ವವನ್ನು, ನೀತ್ವಾ=ಹೊಂದಿಸಿಕೊಟ್ಟು, ತಸ್ಯ=ಜೀವನಿಗೆ, ಅಂತರ್ಧಾಪಯತಿ= ಅದರ್ಶನವನ್ನು ಹೊಂದಿಸುತ್ತದೆ ॥ ೧೦೭ ॥ ಸೂ. ೫ ॥ ಅಧಿ. ೨ ॥

**ಪರಾಭಿಧ್ಯಾನಾಧಿಕರಣವು ಸಮಾಪ್ತವಾಯಿತು.**

---

## ದೇಹಯೋಗಾಧಿಕರಣವು.

**"ಓಂ ದೇಹಯೋಗಾದ್ವಾಸೋಽಪಿ ಓಂ"** ॥ ಸೂ. ೬ ॥

ದೇಹಾಭಿಮಾನದಿಂದ ಸ್ಥಿತಿಯೂ ಕೂಡ ಅಂದರೆ ಜಾಗ್ರದವಸ್ಥೆಯೂ ಕೂಡ ಶ್ರೀ ಹರಿಯ ಇಚ್ಛೆಯಿಂದಲೇ ಆಗುತ್ತದೆ. ಕಾಲಾದಿಗಳಿಂದ ಅಲ್ಲ ॥ ಸೂ. ೬ ॥ ಅಧಿ ೩ ॥

**ದೇಹಯೋಗಾಧಿಕರಣವು ಸಮಾಪ್ತವಾಯಿತು.**

---

## ತದಭಾವಾಧಿಕರಣವು.

**"ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ"**

|| ಸೂ. ೭ || ಅಧಿ. ೪ |

ಜೀವನಿಗೆ ಜಾಗ್ರತ್ಸ್ವಪ್ನಾಭಾವವು (ಸುಪ್ತಿಯು) ನಾಡಿಗಳಲ್ಲಿರತಕ್ಕ ಪರಮಾತ್ಮನಲ್ಲಿ. ಏಕೆಂದರೆ— ನಾಡಿಗಳಲ್ಲಿದೆ ಆತ್ಮನಲ್ಲಿಯೂ ಇದೆ ಎಂದು ಪ್ರತಿಪಾದಿಸತಕ್ಕ **'ಆಸು ತದಾ ನಾಡೀಷು ಸುಪ್ತೋ ಭವತಿ' 'ಸತಾ ಸೌಮ್ಯ ತದಾ ಸಂಪನ್ನೋ ಭವತಿ'** ಎಂದು ಶ್ರುತಿಯಿದ್ದಪ್ರಯುಕ್ತ. ॥ ಸೂ ೭ ॥ ಅಧಿ. ೪ ॥

**ತದಭಾವಾಧಿಕರಣವು ಸಮಾಪ್ತವಾಯಿತು.**

---

## ಪ್ರಬೋಧಾಧಿಕರಣವು.

**"ಓಂ ಅತಃ ಪ್ರಬೋಧೋಽಸ್ಮಾತ್ ಓಂ"** || ಸೂ. ೮ || ಅಧಿ. ೫ ||

ಜೀವನಿಗೆ ಸುಪ್ತಿಪ್ರಬೋಧವು ಈ ಪರಮಾತ್ಮನಿಂದಲೇ ಆಗುತ್ತದೆ. ಜೀವನು ಶ್ರೀ ಹರಿಯಲ್ಲಿಯೇ ಸುಪ್ತನಾದಪ್ರಯುಕ್ತ ॥ ಸೂ. ೮ ॥ ಅಧಿ. ೫ ॥

**ಪ್ರಬೋಧಾಧಿಕರಣವು ಸಮಾಪ್ತವಾಯಿತು.**

---

## ಕರ್ಮಾನುಸ್ಮೃತ್ಯಧಿಕರಣವು.

**"ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ"**

|| ಸೂ. ೯ || ಅಧಿ. ೬ ||

ಪ್ರಸ್ತುತನಾದ ಶ್ರೀ ಹರಿಯೇ ಸರ್ವಾವಸ್ಥಾಪ್ರವರ್ತಕನು. ದೇಶಾಂತರದಲ್ಲಿಯೂ ಕಾಲಾಂತರದಲ್ಲಿಯೂ ಮತ್ತೊಬ್ಬನಿಲ್ಲ. **'ಸ ಏವ ಸಾಧು ಕರ್ಮ ಕಾರಯತಿ' 'ಏಷ ಹ್ಯೇವಾಸಾಧು ಕರ್ಮ ಕಾರಯತಿ'** ಎಂದು ಕರ್ಮಗಳಿಗೆ ಈಶಾಧೀನತ್ವಪ್ರತಿಪಾದಕ ಶ್ರುತಿಯಿದೆ. **'ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು'** ಎಂದು ಅಭಿಮತಾರ್ಥಾನುಸಾರಿಯಾದ ಸ್ಮೃತಿಯಿದೆ. **'ಏಷ ಸ್ವಪ್ನಾನ್ ದರ್ಶಯತಿ'** ಇತ್ಯಾದಿ ಶಬ್ದವಿದೆ. **'ಆತ್ಮಾನಮೇವ ಲೋಕಮುಪಾಸೀತ'** ಎಂದು ಆತ್ಮನಿಗೇನೇ ಉಪಾಸ್ಯತ್ವವಿಧಿಯುದೆ. ॥ ॥ ಸೂ. ೯ ॥ ಅಧಿ. ೬ ॥

**ಕರ್ಮಾನುಸ್ಮೃತ್ಯಧಿಕರಣವು ಸಮಾಪ್ತವಾಯಿತು.**

---

# ಸಂಪತ್ತ್ಯಧಿಕರಣವು.

## " ಓಂ ಮುಗ್ಧೇರ್ಧಸಂಪತ್ತಿಃ ಪರಿಶೇಷಾತ್ ಓಂ "

|| ಸೂ. ೧೦ || ಅಧಿ. ೭ ||

ಮೋಹಾವಸ್ಥೆಯಲ್ಲಿ ಜೀವನಿಗೆ ಅರ್ಧಪ್ರಾಪ್ತಿಯು, ಸಮ್ಯಕ್ ಪ್ರಾಪ್ತಿಯಲ್ಲ. ೧ ಆತ್ಮ ವಿದೂರತ್ವ, ೨ ಸಾಮೀಪ್ಯ, ೩ ಪ್ರವೇಶ, ೪ ಅರ್ಧಪ್ರವೇಶಗಳಲ್ಲಿ ಪ್ರಾಥಮಿಕ ಮೂರು, 'ಹೃದಯಸ್ಥಾ ತ್ವರಾಜ್ಜೀವಃ' ಎನ್ನುವ ಸ್ಮೃತಿಯಿಂದ ಜಾಗ್ರದಾದ್ಯವಸ್ಥಾಂತರದಲ್ಲಿ ಆದುದರಿಂದ ಅರ್ಧಪ್ರವೇಶವೇ ಪರಿಶಿಷ್ಟವಾಗಿದೆ. || ಸೂ. ೧೦ || ಅ. ೭ ||

ಇಲ್ಲಿ ಜೀವಬ್ರಹ್ಮರಿಗೆ ಐಕ್ಯವನ್ನು ಪರರು ವರ್ಣಿಸಿರುವರು. ಆ ಅರ್ಥವು ಸೂತ್ರಾಕ್ಷರದಿಂದ ತೋರುವುದಿಲ್ಲ. ಸೂತ್ರಾಕ್ಷರವಿರುದ್ಧವೂ ಆಗಿದೆ. ಆದಕಾರಣ ಉಪೇಕ್ಷಣೀಯವೇ ಆಗಿದೆ ಎಂದು ತಿಳಿಸುವುದಕ್ಕಾಗಿ, ೪ ತದಭಾವಾಧಿಕರಣ, ೫ ಪ್ರಬೋಧಾಧಿಕರಣ, ೭ ಸಂಪತ್ತ್ಯಧಿಕರಣ- ಈ ಮೂರು ಅಧಿಕರಣಗಳ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ || ಸುಷುಪ್ತಿ ಬೋಧಮೋಹಾಂಶ್ಚ (ಮೋಹಬೋಧಾಂಶ್ಚ)**
**ಸ್ವವಶಸ್ತದ್ವಶಂ ಸದಾ ।**
**ಜೀವಂ ನಯತಿ ಜೀವೇಶೋ**
**ನಾನ್ಯಃಕರ್ತಾಸ್ಯ ಕಶ್ಚನ || ೧೦೮ ||**

ಅ || ಸ್ವವಶಶ್ಚ = ಸ್ವತಂತ್ರನಾದಾಗ್ಯೂ, ಜೀವೇಶಃ = ಜೀವರಿಗೆ ಸ್ವಾಮಿಯಾದ ಶ್ರೀಹರಿಯು, (ಕ್ರೀಡೆಯಿಂದ ಆ ಕಾರಣಗಳನ್ನು ತೆಗೆದುಕೊಂಡು) ಜೀವಂ = ಜೀವನನ್ನು, ತದ್ವಶಂ = ಸುಪುಪ್ತ್ಯಾದಿಗಳ ಅಧೀನನನ್ನಾಗಿ (ಹೊಂದಿಸಿಕೊಟ್ಟು), ಸದಾ=ಯಾವಾಗಲೂ, ಸುಪುಪ್ತಿ ಬೋಧಮೋಹಾಂಶ್ಚ=ಸುಪ್ತಿ ಪ್ರಬೋಧ, ಮೂರ್ಛಾವಸ್ಥೆಗಳನ್ನು, ನಯತಿ=ಹೊಂದಿಸಿ ಕೊಡುತ್ತಾನೆ. (ಅಧಿ. ೪. ೫. ೭.) ಅಸ್ಯ=ಈ ಸ್ವಪ್ನಮೊದಲಾದುದಕ್ಕೆ, ಅನ್ಯಃ=ಮತ್ತೊಬ್ಬನು, ಕಶ್ಚನ=ಯಾವನೊಬ್ಬನೂ, ಕರ್ತಾ=ಕರ್ತನು, ನ=ಇಲ್ಲ.

ತಾ || ನ್ಯಾಯಸುಧಾ— (1) **'ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ' ।** ಈ ಸೂತ್ರವನ್ನು ಕೆಲವರು ಹೀಗೆ ವ್ಯಾಖ್ಯಾನಮಾಡುತ್ತಾರೆ— ಸುಸುಪ್ತಿಯಲ್ಲಿ ಯಾವ ಜೀವನು ಬ್ರಹ್ಮನನ್ನು ಹೊಂದಿರುತ್ತಾನೋ ಆತನೇ ಏಳುತ್ತಾನೋ ಅಥವಾ ಮತ್ತೊಬ್ಬನೋ ಎಂದು ಸಂಶಯುವು ಬಂದರೆ ಮಹಾಸಮುದ್ರದಲ್ಲಿ ಚೆಲ್ಲಿದ ಜಲಕಣದಂತೆ ಬ್ರಹ್ಮನಿಂದ ಐಕ್ಯವನ್ನು ಹೊಂದಿದವನಿಗೆ ಉದ್ಧರಣವು ಕೂಡದಿರುವುದರಿಂದ ಅವನೇ ಏಳುತ್ತಾನೆ ಎನ್ನುವ ನಿಯಮವಿಲ್ಲ ವೆಂದು ಪ್ರಾಪ್ತವಾದರೆ— ಯಾರು ಸುಪ್ತನೋ ಅವನೇ ಏಳುತ್ತಾನೆ. ಕರ್ಮಶೇಷವನ್ನು ಸಮಾಪ್ತಿಮಾಡುವುದರಿಂದಲೂ, ಪ್ರತ್ಯಭಿಜ್ಞೆಯಿಂದಲೂ, ಶಬ್ದಗಳಿಂದಲೂ, ವಿಧಿಗಳಿಂದಲೂ. ಸುಪ್ತನು ಮುಕ್ತನೆಂದರೆ ವಿಧಿಯು ಕೂಡಲಾರದು ಎಂದು ಪರರು ಹೇಳುತ್ತಾರೆ— ಇದು ಅಪವ್ಯಾಖ್ಯಾನವೆಂದು ಸೂಚಿಸುವುದಕ್ಕಾಗಿ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ. **'ನಾನ್ಯಃ ಕರ್ತಾಸ್ಯ ಕಶ್ಚನ'** ಎಂದು ಸ್ವಪ್ನಾದಿಗಳನ್ನು ಪರಮೇಶ್ವನು ಮಾಡಿದ್ದೆಂದು ಹೇಳೋಣ, ದೇಶಾಂತರದಲ್ಲಿಯೂ ಕಾಲಾಂತರದಲ್ಲಿಯೂ ಮತ್ತೊಬ್ಬನು ಕರ್ತನು ಇದ್ದಾನೋ

ಅಥವಾ ಈಶ್ವರನೋ ಎಂದು ಸಂಶಯವು ಬಂದರೆ—ಲೋಕದಲ್ಲಿರುವ ರಾಜರುಗಳಿಗೆ ದೇಶಕಾಲ ವ್ಯವಸ್ಥೆಯಿಂದ ನಿಯಾಮಕತ್ವಾದಿಗಳು ಕಂಡದರಿಂದ ಈಶ್ವರನೂ ಕೂಡ ಕೆಲವು ದೇಶಕಾಲ ಗಳಲ್ಲಿಯೇ ನಿಯಾಮಕನು ಎಂದು ಪ್ರಾಪ್ತವಾದರೆ—ಒಬ್ಬ ಈಶ್ವರನೇ ಸ್ವಪ್ನಾದಿಗಳನ್ನು, ಮಾಡತಕ್ಕವನು. ದೇಶಾಂತರದಲ್ಲಿಯೂ ಕಾಲಾಂತರದಲ್ಲಿಯೂ ಮತ್ತೊಬ್ಬನಲ್ಲ ಎನ್ನುವ ಈ ಅರ್ಥವೇ ಈ ಸೂತ್ರದಲ್ಲಿ ಪ್ರತಿಪಾದಿತವಾಗುತ್ತದೆ. ಯಾರು ಸುಪ್ತನಾಗಿರುತ್ತಾನೋ ಅವನೇ ಏಳುತ್ತಾನೋ ಮತ್ತೊಬ್ಬನೋ ಎಂದು ಯಾರಿಗೂ ಸಂಶಯವು ಬರುವುದಿಲ್ಲ. ಸುಪ್ತನಿಗೆ ಬ್ರಹ್ಮನಿಂದ ಐಕ್ಯವು ಪ್ರಮಾಣದೃಷ್ಟವೂ ಅಲ್ಲ. ಪರರಿಗೆ ಇಷ್ಟವೂ ಅಲ್ಲ. ಆದುದರಿಂದ ಅದ್ವೈತಿ ಗಳ ವ್ಯಾಖ್ಯಾನವು ಅಯುಕ್ತವು ॥ ೧೦೮ ॥ ಸೂ. ೬, ೭, ೮, ೯, ೧೦ ॥ ಅಧಿ. ೪, ೫, ೬, ೭.॥

**ಸಂಪತ್ತ್ಯಧಿಕರಣವು ಸಮಾಪ್ತವಾಯಿತು.**

---

# ನಸ್ಥಾನತೋಽಸ್ಯಧಿಕರಣವು.

## "ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ"

॥ ಸೂ. ೧೧ ॥

ಸುರ-ನರ-ತಿರ್ಯಗಾದಿ ಪ್ರಾಣಿಭೇದವೂ ಅಕ್ಷ್ಯಾದಿ ಸ್ಥಾನಭೇದವೂ ಇದ್ದರೂ ಅಲ್ಲಿ ಅಲ್ಲಿ ನಿಯಾಮಕನಾಗಿರುವ ಶ್ರೀ ಹರಿಯ ರೂಪಗಳಿಗೆ ಭೇದವಾಗಲೀ ಸ್ಥಾನದೋಷಪ್ರಯುಕ್ತ ದೋಷಾದಿಗಳೂ ಇಲ್ಲ. ಏಕೆಂದರೆ— ಎಲ್ಲಾ ಸ್ಥಾನಗಳಲ್ಲಿಯೂ ಶ್ರೀ ಹರಿಯು ನಿರ್ದೋಷ ಗಳಾದ ಅಶೇಷಗುಣಗಳುಳ್ಳವನು, ಭೇದರಹಿತನು ಎಂದು **'ಸರ್ವಭೂತೇಷ್ವೇತಮೇವ ಬ್ರಹ್ಮೇ ತ್ಯಾಚಕ್ಷತೇ'** ಇತ್ಯಾದಿಗಳಲ್ಲಿ ಶ್ರುತನಾಗಿರುತ್ತಾನೆ.

**ಸ. ರ. ವಿ**— ಹಾಗಾದರೆ ಒಬ್ಬ ಪರಮಾತ್ಮನಿಗೂ ಜಾಗ್ರತ್-ಸ್ವಪ್ನ-ಸುಷುಪ್ತ್ಯಾದಿ ಸ್ಥಾನ ಭೇದದಿಂದ ಜ್ಞಾನ ಶಕ್ತ್ಯಾದಿಗಳಲ್ಲಿ ತಾರತಮ್ಯವು ಜೀವನಂತೆ ಏಕೆ ಆಗಲಾರದು? ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ 'ನ ಸ್ಥಾನತೋಽಪಿ ಪರಸ್ಯ' ಎನ್ನುವ ಸೂತ್ರದ ಅರ್ಥವನ್ನು ಹೇಳುತ್ತಾರೆ—

**ಮೂ ॥ ನ ಸ್ಥಾನಭೇದತೋಽಪ್ಯಸ್ಯ ಭೇದಃ ಕಶ್ಚಿತ್ಪರೇಶಿತುಃ ।**
**ಸರ್ವತ್ರಾಶೇಷದೋಷೋಜ್ಝಪೂರ್ಣಕಲ್ಯಾಣಚಿದ್ಗುಣಃ ॥ ೧೦೯ ॥**

ಅ ॥ ಸ್ಥಾನಭೇದತೋಽಪಿ=ಸುರ-ನರಾದಿಶರೀರಗಳಿಗೆ ಅದರಲ್ಲಿಯೂ ದಕ್ಷಿಣಾಕ್ಷ್ಯಾದಿ ಗಳಿಗೆ ಭೇದವಿದ್ದರೂ, ಅಸ್ಯ=ಅಲ್ಲಲ್ಲಿರತಕ್ಕ, ಪರೇಶಿತುಃ = ಸರ್ವೇಶ್ವರನಾದ ಶ್ರೀ ಹರಿಗೆ, ಕಶ್ಚಿತ್=ಯಾವುದೊಂದೂ ಇತರವಾದ, ಅನ್ಯೋನ್ಯಾಭಾವರೂಪವಾದ, ಹೀನಾದಿಕತ್ವರೂಪ ವಾದ ಅಥವಾ ಅನುಗ್ರಾಹ್ಯ-ಅನುಗ್ರಾಹಕತ್ವರೂಪವಾದ, ಭೇದಃ = ಭೇದವು, ನ=ಇಲ್ಲ. ಏಕೆಂದರೆ— ಸರ್ವತ್ರ=ಎಲ್ಲಾ ಸ್ಥಾನಗಳಲ್ಲಿ (ಪರಮಾತ್ಮನು) ಅಶೇಷದೋಷೋಜ್ಝಪೂರ್ಣ-ಕಲ್ಯಾಣಚಿದ್ಗುಣಃ, ಅಶೇಷ=ಎಲ್ಲಾ, ದೋಷ=ದೋಷಗಳಿಂದ, ಉಜ್ಝ = ರಹಿತನಾದವನು

ಪೂರ್ಣ = ಪರಿಪೂರ್ಣಗಳಾದ, ಕಲ್ಯಾಣ = ಮಂಗಲಕರಗಳಾದ, ವಿನಾಶಾದಿರಹಿತಗಳಾದ, ಚಿತ್=ಜ್ಞಾನಾತ್ಮಕವಾದ, ಗುಣಃ=ಗುಣಗಳುಳ್ಳವನು. (ನಿರ್ಭೇದಶ್ಚ=ಭೇದರಹಿತನೂ ಎಂದು 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಇತ್ಯಾದಿ ಶ್ರುತಿಗಳಲ್ಲಿ ಪ್ರಮಿತ ನಾಗಿರುತ್ತಾನೆ) ॥ ೧೦೯ ॥

ಈ ಅರ್ಥವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳುವುದಕ್ಕಾಗಿ ಸೂತ್ರವು—

**"ಓಂ ನ ಭೇದಾದಿತಿಚೇನ್ನ ಪ್ರತ್ಯೇಕಮತದ್ವಚನಾತ್ ಓಂ"**

॥ ಸೂ. ೧೨ ॥

'**ಕಾರ್ಯಕಾರಣಬದ್ಧೌ ತೌ**' ಎನ್ನುವ ಶ್ರುತಿಯಲ್ಲಿ ಜಾಗ್ರದ್ಬದ್ಧನು ವಿಶ್ವನು, ಸ್ವಪ್ನ ಬದ್ಧನು ತೈಜಸನು, ಅಜ್ಞಾನಬದ್ಧನು ಪ್ರಾಜ್ಞನು, ಇದು ಮೊದಲಾದ ಭೇದ-ದೋಷಾದಿಗಳನ್ನು ಪ್ರತಿಪಾದಿಸತಕ್ಕ ವಚನವಿದ್ದ ಪ್ರಯುಕ್ತ ಶ್ರೀಹರಿಗೆ ಸರ್ವರೂಪಗಳಲ್ಲಿ ಅಭೇದವಿಲ್ಲ ಎಂದರೆ— ಹೀಗೆ ಹೇಳಕೂಡದು. '**ಏಷ ತ ಆತ್ಮಾ ಅಂತರ್ಯಾಮ್ಯಮೃತಃ**' ಎನ್ನುವಲ್ಲಿ ಪೃಥಿವ್ಯಾ ದ್ಯಂತರ್ಯಾಮಿಯೇ ನಿನ್ನ ಅಂತರ್ಯಾಮಿಯು, '**ಅಯಮೇವ ಸ ಯೋಽಯಮಾತ್ಮಾ**' ಇತ್ಯಾದಿಗಳಲ್ಲಿ ಈಶರೂಪಗಳಿಗೆ ಪ್ರತ್ಯೇಕವಾಗಿ ಪರಸ್ಪರವಾಗಿ ಮೂಲರೂಪದಿಂದಲೂ ಅಭೇದ ಮತ್ತು ನಿರ್ದೋಷತ್ವಾದಿ ಪ್ರದಿಪಾದಕವಾದ ವಚನವಿದೆ.

**"ಓಂ ಅಪಿ ಚೈವ ಮೇಕೇ ಓಂ"** ॥ ಸೂ. ೧೩ ॥

ಕೆಲವು ಶಾಖಿಗಳು ಶ್ರೀ ಹರಿಗೆ 'ಅಮಾತ್ರೋಽನಂತಮಾತ್ರಶ್ಚ' ಎಂದು ಸರ್ವರೂಪಗಳಲ್ಲಿ ಅಭೇದವನ್ನೂ, ಅನಂತರೂಪತ್ವವನ್ನೂ ಹೇಳುತ್ತಾರೆ—

ಬ್ರಹ್ಮನು ಎಲ್ಲಾ ರೂಪಗಳಲ್ಲಿಯೂ ಭೇದರಹಿತನಾದವನು ಮತ್ತು ಸರ್ವ ದೋಷಗಳಿಂದ ದೂರನಾದವನು, ಸಕಲ ಗುಣಗಳಿಂದ ಪರಿಪೂರ್ಣನಾದವನು ಎಂದು ಹಿಂದೆ ಹೇಳಿದ್ದು ಕೂಡುವುದಿಲ್ಲ ಎಂದರೆ— '**ಕಾರ್ಯಕಾರಣಬದ್ಧೌ ತೌ**' ಇದುಮೊದಲಾದ ಶ್ರುತಿಪುರಾಣಾದಿ ವಾಕ್ಯಗಳಿಂದ ಭೇದ, ದೋಷ, ಅಲ್ಪಗುಣತ್ವ ಮೊದಲಾದುದು ಶ್ರೀ ಹರಿಗೆ ಉಕ್ತವಾಗಿದೆ ಎನ್ನುವ ಆಕ್ಷೇಪ ಪರಿಹಾರಕವಾದ ಸೂತ್ರಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ತದ್ವಿರುದ್ಧಂ ತು ಯತ್ತತ್ರ ಮಾನಂ ನೈವ ಕ್ವಚಿದ್ಭವೇತ್ (ಭವೇತ್ಕ್ವಚಿತ್)।**
**ಮಹಾತಾತ್ಪರ್ಯರೋಧೇನ ಕಥಂ ತನ್ಮಾನಮತ್ರ ತು ॥ ೧೧೦ ॥**

ಅ ॥ ಯತ್ತು=ಯಾವ ವಾಕ್ಯವು, ತದ್ವಿರುದ್ಧಂ=ಹಿಂದೆ ಹೇಳಿದ ಗುಣಪೂರ್ಣತ್ವಾದಿ ರೂಪವಾದ ಅರ್ಥಕ್ಕೆ ವಿರುದ್ಧಾರ್ಥಪ್ರತಿಪಾದಕವಾಗಿ, ಆಪಾತತಃ = ಪ್ರತೀತವಾಗುತ್ತದೋ, ತತ್=ಆ ವಾಕ್ಯವು, ತತ್ರ=ಹಿಂದೆ ಹೇಳಿದ ಅರ್ಥಕ್ಕೆ ವಿರುದ್ಧವಾದ ಅರ್ಥದಲ್ಲಿ, ಮಾನಂ= ಪ್ರಮಾಣವು, ನೈವ ಭವೇತ್=ಆಗಲಾರದು. (ಮತ್ತೆ ಆ ವಾಕ್ಯಕ್ಕೆ ಅವಿರುದ್ಧವಾದ ಅರ್ಥವನ್ನೇ ತಿಳಿಯಬೇಕು.) ಏಕೆಂದರೆ—ಮಹಾತಾತ್ಪರ್ಯರೋಧೇನ=ಎಲ್ಲಾ ಶ್ರುತಿ-ಸ್ಮೃತಿ-ಇತಿಹಾಸ-ಪುರಾಣಗಳಿಗೆ ಪರಮೇಶ್ವರನು ಅಶೇಷದೋಷದೂರನು, ಸಮಸ್ತ ಗುಣಪರಿಪೂರ್ಣನು ಎನ್ನುವ ಅರ್ಥದಲ್ಲಿಯೇ ಯಾವುದು ಮಹಾತಾತ್ಪರ್ಯವೋ ಅದರ ವಿರೋಧದಿಂದ, ತತ್=ಆ ವಾಕ್ಯವು, ಅತ್ರ = ಭಗವಂತನು ದೋಷಿಯು ಇದುಮೊದಲಾದ ಆಪಾತತಃ = ಪ್ರತೀತಗಳಾದವುಗಳಲ್ಲಿ, ಕಥಂ=ಹೇಗೆ, ಮಾನಂ=ಪ್ರಮಾಣವು, ಭವೇತ್=ಆಗುವುದು ॥ ೧೧೦ ॥

ಶ್ರೀ ಪರಮಾತ್ಮನು ಸಕಲಗುಣಪರಿಪೂರ್ಣನು, ಸರ್ವದೋಷ ವಿದೂರನು ಎನ್ನುವ ಅರ್ಥದಲ್ಲಿ ವೇದಾದಿಗಳಿಗೆ ಮಹಾತಾತ್ಪರ್ಯವಿದೆ ಎನ್ನುವಲ್ಲಿ ಪ್ರಮಾಣವಿರುತ್ತಿದ್ದರೆ ಆಗುತ್ತಿತ್ತು; ಅಂತಹ ಪ್ರಮಾಣವೇ ಇಲ್ಲ ಎಂದರೆ—

**ಮೂ ॥ ದುಃಖಾಪ್ಯಯಸುಖಾವಾಪ್ತಿ ಹೇತುತ್ವೇನೈವ ವೇದವಾಕ್ ।**
**ಭವೇನ್ಮಾನಂ ತದೀಶಾನಾತ್ ಪ್ರಸನ್ನಾದೇವ ನಾನ್ಯಥಾ ॥ ೧೧೧ ॥**

**ಅ ॥** ವೇದವಾಕ್=ವೇದ ವಚನವು, ದುಃಖಾಪ್ಯಯ ಸುಖಾವಾಪ್ತಿಹೇತುತ್ವೇನೈವ= ಆತ್ಯಂತಿಕ ದುಃಖನಿವೃತ್ತಿ-ನಿರತಿಶಯ-ಸುಖಾಭಿವ್ಯಕ್ತಿರೂಪವಾದ ಮುಕ್ತಿ-ಇವುಗಳ ಕಾರಣತ್ವದಿಂದಲೇ, ಮಾನಂ=ಪ್ರಮಾಣವು, ಭವೇತ್=ಆಗುವುದು. (ಅಂದರೆ ದುಃಖನಿವೃತ್ತಿ ಸುಖಪ್ರಾಪ್ತಿ ಕಾರಣತ್ವವು ಹೇಗೆ ನಿರ್ವಾಹವಾಗುವುದೋ, ಹಾಗೆಯೇ ಯಾವುದಾದರೊಂದರ್ಥವನ್ನು ಪ್ರತಿಪಾದಿಸತಕ್ಕದು ಆಗುವುದು.) ತತ್ = ದುಃಖಾಪ್ಯಯಾದಿರೂಪಕ್ಕೆವಲ್ಯವು, ಪ್ರಸನ್ನಾತ್= ಸಂತುಷ್ಟನಾದ, ಈಶಾನಾದೇವ=ವಿಷ್ಣುವಿನಿಂದಲೇ, ಭವೇತ್=ಆಗುವುದು. ಅನ್ಯಥಾ=ಬೇರೆ ಯಾವುದರಿಂದಲೂ, ನ=ಆಗಲಾರದು. (ಅಂದರೆ, ಶ್ರೀಹರಿಯೇ ಮೋಕ್ಷವನ್ನು ಕೊಡಲಿಕ್ಕೆ ಸಮರ್ಥನು; ಮತ್ತೊಬ್ಬನಲ್ಲ.)

**ತಾ ॥ ನ್ಯಾಯಸುಧಾ—** (1) ಶಾಸ್ತ್ರವು ಪ್ರಮಾಣವಾಗಿರುವುದರಿಂದಲೂ ಪರಾರ್ಥವಾಗಿರುವುದರಿಂದಲೂ ಅದಕ್ಕೆ ವಿಷಯಪ್ರಯೋಜನಗಳು ಬೇಕು. ಅದರಲ್ಲಿ ಯಾವಾಗ ವಿಷಯವು ಸಂದಿಗ್ಧವಾಗುತ್ತದೋ, ಪ್ರಯೋಜನವು ನಿಶ್ಚಿತವಾಗುತ್ತದೋ, ಆಗ ನಿಶ್ಚಿತವಾದ ಪ್ರಯೋಜನದಿಂದ ಅನಿಶ್ಚಿತವಾದ ವಿಷಯವನ್ನು ನಿಶ್ಚಯಿಸಬೇಕು. ಶಾಸ್ತ್ರವು ಸಾಕ್ಷಾತ್ತಾಗಿ ಪ್ರಯೋಜನವನ್ನು ಮಾಡತಕ್ಕದಲ್ಲ. ಮತ್ತೆ ವಿಷಯವನ್ನು ಪ್ರತಿಪಾದಿಸಿಯೇ ಆಗುವುದು. ತಥಾಚ ಯಾವುದನ್ನು ತಿಳಿಸಿದ ಮೇಲೆ ವಿಷಯವು ನಿಶ್ಚಿತವಾಗುತ್ತದೋ ಅದೇ ಪ್ರಯೋಜನವು. **'ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ'** ಇತ್ಯಾದಿ ಪ್ರಮಾಣಗಳಿಂದ ವೇದಾದಿಗಳಿಗೆ ಮೋಕ್ಷವೇ ಪ್ರಧಾನಪ್ರಯೋಜನವು. ಸ್ವರ್ಗಾದಿಗಳು ಅಪ್ರಧಾನಪ್ರಯೋಜನವು. ಯಾವುದು ಜ್ಞಾತವಾಗೋಣ ಮೋಕ್ಷಾದಿಗಳು ಉಂಟಾಗುವವೋ ಅದೇವೇ ವಿಷಯವೆಂದು ಕಲ್ಪಿಸಬೇಕು. ಅಂತಹ ಮುಕ್ತಿಯು ಪ್ರಸನ್ನನಾದ ವಿಷ್ಣುವಿನಿಂದಲೇ ಆಗುತ್ತದೆ. ಬೇರೆಯವರಿಂದ ಆಗಲಾರದು. ॥ ೧೧೧ ॥

ಅಂತಹ ಪ್ರಸನ್ನತೆಯಲ್ಲಿ ಗುಣೋತ್ಕರ್ಷಾದಿ ಜ್ಞಾನವೇ ಕಾರಣವೆನ್ನುತ್ತಾರೆ—

**ಮೂ ॥ ಪ್ರಸನ್ನತಾ ಗುಣೋತ್ಕರ್ಷ ಜ್ಞಾನಾದೇವ ಹಿ ಕೇವಲಂ ।**
**ನಿರ್ದೋಷತಾ ಪರಿಜ್ಞಾನಾದಪಿ ನಾನ್ಯೇನ ಕೇನಚಿತ್ ॥ ೧೧೨ ॥**

**ಅ ॥** ಪ್ರಸನ್ನತಾ=ಶ್ರೀ ವಿಷ್ಣುವಿನ ಪ್ರಸಾದವು, ಗುಣೋತ್ಕರ್ಷಜ್ಞಾನಾದೇವ=ಗುಣಗಳ ಉತ್ಕೃಷ್ಟತ್ವ ಜ್ಞಾನದಿಂದಲೇ, (ನಿರ್ಗುಣತ್ವಜ್ಞಾನದಿಂದ ಅಲ್ಲ.) ಕೇವಲಂ ನಿರ್ದೋಷತಾ ಪರಿಜ್ಞಾನಾದಪಿ = ನಿರ್ದೋಷತ್ವ ಪರಿಜ್ಞಾನದಿಂದಲೂ ಕೂಡ, ಭವತಿ = ಆಗುತ್ತದೆ. ಹಿ= ಪ್ರಮಾಣ ಪ್ರಸಿದ್ಧವು. ಅನ್ಯೇನ ಕೇನಚಿತ್=ಅಲ್ಪಗುಣತ್ವಾದಿ ಜ್ಞಾನದಿಂದಲಾಗಲೀ, ಕರ್ಮಾದಿಗಳಿಂದಲಾಗಲೀ, ನ=ಆಗಲಾರದು.

**ತಾ ॥** ಶ್ರೀ ಹರಿಯ ಪ್ರಸಾದದಿಂದ ಮೋಕ್ಷಾದಿ ಜ್ಞಾನವನ್ನು ಸಾಧಿಸಿಕೊಡತಕ್ಕ ವೇದಾದಿ ಶಾಸ್ತ್ರವು ಪ್ರಸಾದಕ್ಕೆ ಕಾರಣವಾದ ಭಗವದ್ಗುಣೋತ್ಕರ್ಷ ನಿರ್ದೋಷತ್ವ ಜ್ಞಾನವನ್ನೇ ಜೀವರಿಗೆ

ಪಟ್ಟಸಬೇಕಾದುದರಿಂದ ಅಂತಹ ಸರ್ವಗುಣಪರಿಪೂರ್ಣತ್ವ, ದೋಷಲೇಶರಹಿತತ್ವ ಮೊದಲಾದ ರ್ಥದಲ್ಲಿ ಸರ್ವ ಶಾಸ್ತ್ರಗಳಿಗೆ ಮಹಾತಾತ್ಪರ್ಯವೆಂದು ಅಂಗೀಕರಿಸಬೇಕಲ್ಲದೆ ದೋಷಾದಿ ಳನ್ನು ಪ್ರತಿಪಾದಿಸುತ್ತದೆ ಎಂದು ಹೇಳಕೂಡದು ॥ ೧೧೨ ॥

ಪ್ರಸನ್ನನಾದ ಶ್ರೀ ಹರಿಯೇ ಮೋಕ್ಷಾದಿ ಪುರುಷಾರ್ಥವನ್ನು ಕೊಡತಕ್ಕವನೆನ್ನುವ ಷಯದಲ್ಲಿ ಆಗಮವಾಕ್ಯಗಳನ್ನುದಾಹರಿಸುತ್ತಾರೆ.

**ಮೂ ॥ ಯೋ ಮಾಮಶೇಷದೋಷೋಜ್ಝಂ ಗುಣಸರ್ವಸ್ವಬೃಂಹಿತಂ ।**
**ಜಾನಾತ್ಯಸ್ಮೈ ಪ್ರಸನ್ನೋಽಹಂ ದದ್ಯಾಂ ಮುಕ್ತಿಂ ನ ಚಾನ್ಯಥಾ ॥೧೧೩॥**
**ಯೋ ಮಾಮಶೇಷಾಭ್ಯಧಿಕಂ ವಿಜಾನಾತಿ ಸ ಏವ ಮಾಂ ।**
**ವಿಜಾನಾತ್ಯಖಿಲಾಂಸ್ತಸ್ಯ ದದ್ಯಾಂ ಕಾಮಾನ್ ಪರಂ ಪದಂ ॥ ೧೧೪ ॥**
**ಯೋ ಮಾಮೇವಮಸಂಮೂಢಃ ಕಿಂ ಮಾಂ ನಿಂದಂತಿ ಶತ್ರವಃ ।**
**ಇತ್ಯಾದಿ ವೇದ ಸ್ಮೃತಿಗ ವಾಕ್ಯೈರೇವಾವಸೀಯತೇ ॥ ೧೧೫ ॥**

**ಅ ॥** ಯಃ = ಯಾರು, ಮಾಂ = ನನ್ನನ್ನು, ಅಶೇಷದೋಷೋಜ್ಝಂ = ಸರ್ವದೋಷ ಗಳಿಂದ ವಿರಹಿತನನ್ನಾಗಿಯೂ, ಗುಣಸರ್ವಸ್ವಬೃಂಹಿತಂ = ಪ್ರತ್ಯೇಕ ಪ್ರತ್ಯೇಕ ಗುಣ ಗಳಿಂದ ನಿರವಧಿಕನನ್ನಾಗಿಯೂ, ಜಾನಾತಿ= ತಿಳಿಯುತ್ತಾನೋ, ಅಹಂ=ನಾನು, ಅಸ್ಮೈ= ಈ ಜ್ಞಾನಿಗೋಸ್ಕರ, ಪ್ರಸನ್ನಃ = ಸಂತುಷ್ಟನಾಗಿ, ಮುಕ್ತಿಂ = ಮೋಕ್ಷವನ್ನು, ದದ್ಯಾಂ= ಕೊಡುವೆನು. ಅನ್ಯಥಾ=ಬೇರೆಪ್ರಕಾರ, ನ ಚ = ಕೊಡಲಾರೆನು. ಯಃ = ಯಾವಾತನು, ಮಾಂ=ನನ್ನನ್ನು, ಅಶೇಷಾಭ್ಯಧಿಕಂ=ಎಲ್ಲಾ ಗುಣಗಳು ಪೂರ್ಣಗಳಾಗಿ ಇದ್ದುದರಿಂದಲೂ, ನಿರ್ದೋಷನಾಗಿದ್ದುದರಿಂದಲೂ ಸರ್ವರಿಂದ ಉತ್ತಮನನ್ನಾಗಿ, ವಿಜಾನಾತಿ= ತಿಳಿಯುತ್ತಾನೋ, ಸ ಏವ=ಆತನೇವೇ, ಮಾಂ=ನನ್ನನ್ನು ಚೆನ್ನಾಗಿ, ವಿಜಾನಾತಿ=ತಿಳಿಯುತ್ತಾನೆ. ತಸ್ಯ=ಆತನಿಗೆ, ಅಖಿಲಾನ್ ಕಾಮಾನ್=ಎಲ್ಲಾ ಅಭೀಷ್ಟಗಳನ್ನೂ, ಪರಂ ಪದಂ=ಮುಕ್ತಿಯನ್ನು, ದದ್ಯಾಂ= ಕೊಡುವೆನು. ಯಃ=ಯಾವಾತನು, ಮಾಂ=ನನ್ನನ್ನು, ಏವಂ=ಹೀಗೆ, ಅಸಂಮೂಢಃ= ಮೋಹರಹಿತನಾಗಿ, (ಕ್ಷರಾಕ್ಷರ ಪುರುಷರಿಂದ ಉತ್ತಮನನ್ನಾಗಿ ತಿಳಿಯುತ್ತಾನೋ, '**ಸ ಸರ್ವ ವಿದ್ಭಜತಿ ಮಾಂ ಸರ್ವಭಾವೇನ ಭಾರತ । ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ । ಏತದ್ಬುಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ**' ಆತನು ನನ್ನನ್ನು ಹೊಂದುತ್ತಾನೆ, ಮುಕ್ತನೂ ಆಗುತ್ತಾನೆ.) (ಎನ್ನುವ ಪರ್ಯಂತ ಭಗವದ್ವಾಕ್ಯವನ್ನು ಇಟ್ಟುಕೊಳ್ಳಬೇಕು.) ಶತ್ರವಃ=ಶತ್ರುಗಳು, ಮಾಂ=ನನ್ನನ್ನು, ಕಿಂ=ಏನನ್ನು, ನಿಂದಂತಿ= ನಿಂದಿಸುತ್ತಾರೆ. ಇತ್ಯಾದಿ = ಇದುಮೊದಲಾದ, ವೇದಸ್ಮೃತಿಗವಾಕ್ಯೈರೇವ = ವೇದಗಳು ಸ್ಮೃತಿಗಳು—ಇವುಗಳಲ್ಲಿರತಕ್ಕ ವಾಕ್ಯಗಳಿಂದಲೇ, (ಪ್ರಸಾದೇನ = ಭಗವತ್ಪ್ರಸಾದದಿಂದ, ಮುಕ್ತಿಃ=ಮುಕ್ತಿಯು, ಸಃ=ಆ ಭಗವತ್ಪ್ರಸಾದವು, ಗುಣವೇದನಾತ್=ಗುಣೋತ್ಕರ್ಷಜ್ಞಾನ ದಿಂದ ಆಗುತ್ತದೆಂದು,) ಅವಸೀಯತೇ=ನಿಶ್ಚಿತವಾಗುತ್ತದೆ.

**ತಾ ॥** ನ್ಯಾಯಸುಧಾ—(1) 'ಕಿಂ ಮಾಂ ನಿಂದಂತಿ' ಎನ್ನುವುದರಿಂದ '**ಅಭೀ ಇದನೇಕಮೇಕೋ ಅಸ್ಮಿ ನಿಷ್ಷಾಳಭೀ ದ್ವಾ ಕಿಮುತ್ರ ಯಃ ಕರಂತಿ । ಖಲೇನ ಪರ್ಷಾನ್ ಪ್ರತಿಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ**' ಇದು ಒಂದು—

ಜಗತ್ತನ್ನು ಪ್ರತಿನಿತ್ಯವೂ ಒಬ್ಬನೇ ಅತ್ಯಂತವಾಗಿ ನಹಿಸುವೆನು; ಎರಡು— ಪ್ರಪಂಚಗಳನ್ನು ಪ್ರತಿನಿತ್ಯವೂ ಒಬ್ಬನೇ ಸಹಿಸುವೆನು; ಮೂರು— ಪ್ರಪಂಚಗಳೂ ನನಗೆ ಏನು ಅನಿಷ್ಟವನ್ನು ಮಾಡುತ್ತವೆ; ಏನೂ ನನಗೆ ಅನಿಷ್ಟವನ್ನು ಮಾಡಲಿಕ್ಕೆ ಸಮರ್ಥಗಳಲ್ಲ. ಮತ್ತೆ ನಾನೇ ಕಣಜದಲ್ಲಿರತಕ್ಕ ಧಾನ್ಯಗಳನ್ನೆಂಬಂತೆ ಬಹಳವಾಗಿ ನಿಷ್ಠುರರಾದ ನಿಂದಕರನ್ನು ಕೊಲ್ಲುವೆನು. ಆದಕಾರಣ ಅಸಮರ್ಥರಾದ ಆ ಶತ್ರುಗಳು ನನ್ನನ್ನು ಏನು ನಿಂದಿಸುತ್ತಾರೆ? ಇದು ಭಗವಂತನ ವಾಕ್ಯವು. ಇಲ್ಲಿ ನಿಂದಕರಲ್ಲಿ ಶ್ರೀ ಹರಿಯ ಅನುಗ್ರಹವಿಲ್ಲವೆನ್ನುವುದೂ ಅವರಿಗೆ ಅನಿಷ್ಟ ಪ್ರಾಪ್ತಿಯೂ ಶ್ರುತವಾಗುತ್ತದೆ ॥ ೧೧೩ ॥ ೧೧೪ ॥ ೧೧೫ ॥

ಈ ವಿಷಯದಲ್ಲಿ ಅನುಮಾನವನ್ನು ಹೇಳುತ್ತಾರೆ—

**ಮೂ ॥ ಲೋಕತಶ್ಚ ಪ್ರಸಾದೇನ ಮುಕ್ತಿಃ ಸ ಗುಣವೇದನಾತ್ ।**
**ಮಹಾತಾತ್ಪರ್ಯ ಮುಖ್ಯಸ್ಯ ವಿರೋಧಾದತ ಏವ ಹಿ ॥ ೧೧೬ ॥**
**ದೋಷಿತ್ವ ನಿರ್ಗುಣತ್ವಾಲ್ಪಗುಣತ್ವಾದಿ ಕಥಂಚನ ।**
**ನಾರ್ಥಃ ಶ್ರುತಿಪುರಾಣಾದೇಸ್ತದ್ವಿರುದ್ಧೋಽಖಿಲಸ್ಯ ಚ ।**
**ಅರ್ಥಃ ಸ್ವಯಂ ವಿನಿರ್ಣೀತೋ ವಾಸುದೇವೇನ ಸಾದರಂ ॥ ೧೧೭ ॥**

ಅ ॥ ಪ್ರಸಾದೇನ = ಭಗವತ್ಪ್ರಸಾದದಿಂದ, ಮುಕ್ತಿಃ = ಸಂಸಾರದಿಂದ ಮೋಕ್ಷವು, ಭವತಿ=ಆಗುತ್ತದೆ. ಸಃ = ಆ ಭಗವತ್ಪ್ರಸಾದವು, ಗುಣವೇದನಾತ್ = ಗುಣೋತ್ಕರ್ಷಜ್ಞಾನ ದಿಂದಲೂ, (ದೋಷಗಳು ಇಲ್ಲವೆನ್ನುವ ಜ್ಞಾನದಿಂದಲೂ) ಆಗುತ್ತದೆ ಎನ್ನುವ ಅರ್ಥವು, ಲೋಕತಶ್ಚ = ಲೋಕದೃಷ್ಟಾಂತೋಪೇತವಾದ ಅನುಮಾನದಿಂದಲೂ, ಅವಸೀಯತೇ = ನಿಶ್ಚಿತ ವಾಗುತದೆ. (ಮಹಾತಾತ್ಪರ್ಯರೋಧೇನ ಇತ್ಯಾದಿಗಳಿಂದ ಹೇಳಲ್ಪಟ್ಟದ್ದನ್ನುಪಸಂಹಾರ ಮಾಡುತ್ತಾರೆ) ಅತಃ=ಆದಕಾರಣ, ಮಹಾತಾತ್ಪರ್ಯಮುಖ್ಯಸ್ಯ=ಪರಮಮಹಾತಾತ್ಪರ್ಯದ, ವಿರೋಧಾದೇವ ಹಿ = ವಿರೋಧವಿದ್ದುದರಿಂದಲೇ, ಕಥಂಚನ = ಯಾವಪ್ರಕಾರದಿಂದಲೂ, ದೋಷಿತ್ವ ನಿರ್ಗುಣತ್ವಾಲ್ಪಗುಣತ್ವಾದಿ = ದೋಷವತ್ವವು, ಗುಣಾಭಾವವು, ಅಲ್ಪಗುಣತ್ವ ಮೊದಲಾದುದು, ಅರ್ಥಃ=ಅರ್ಥವು, ಶ್ರುತಿಪುರಾಣಾದೇಃ=ವೇದಪುರಾಣ ಮೊದಲಾದುದಕ್ಕೆ, ನ=ಅಲ್ಲ. (ಸಕಲ ವೇದಗಳಿಗೆ ಶ್ರೀ ಹರಿಯ ಗುಣೋತ್ಕರ್ಷಾದಿಗಳಲ್ಲಿ ಮಹಾತಾತ್ಪರ್ಯವು ಕೇವಲ ಆನುಮಾನಿಕವಲ್ಲ. ಮತ್ತೆ ವಚನವೃತ್ತಿಯಿಂದಲೂ ಸಿದ್ಧವಾಗಿದೆ ಎನ್ನುತ್ತಾರೆ.) ತದ್ವಿರುದ್ಧಃ=ದೋಷಿತ್ವಾದಿಗಳಿಗೆ ವಿರುದ್ಧವಾದ ಅರ್ಥವು, ಅಖಿಲಸ್ಯ ಚ=ಎಲ್ಲಾ ಶಾಸ್ತ್ರಕ್ಕೂ, ವಾಸುದೇವೇನ = ಶ್ರೀ ಕೃಷ್ಣನಿಂದ, ಸಾದರಂ = ತಾತ್ಪರ್ಯಪೂರ್ವಕವಾಗಿ, ಸ್ವಯಂ= ತನ್ನಿಂದಲೇ, ವಿನಿರ್ಣೀತಃ=ವಿಶೇಷವಾಗಿ ನಿಶ್ಚಯಿಸಲ್ಪಟ್ಟದೆ.

ತಾ ॥ **ನ್ಯಾಯಸುಧಾ**— (1) 'ಲೋಕತಶ್ಚ' ಎನ್ನುವುದರಿಂದ ಈ ಅನುಮಾನಗಳು ಉಕ್ತಗಳಾದುವು. ೧ 'ಸಂಸಾರಾನ್ಮುಕ್ತಿಃ ಸಮರ್ಥಪುರುಷಪ್ರಸಾದಸಾಧ್ಯಾ ಮುಕ್ತಿತ್ವಾತ್ ನಿಗಡಮುಕ್ತಿವತ್' ಸಂಸಾರದಿಂದ ಬಿಡುಗಡೆಯು ಸಮರ್ಥನಾದ ಪುರುಷನ ಅನುಗ್ರಹದಿಂದ ಸಾಧಿಸಲಿಕ್ಕೆ ಶಕ್ಯವಾದುದು, ಮುಕ್ತಿಯಾದುದರಿಂದ ನಿಗಡದಿಂದ ಬಿಡುಗಡೆಯಂತೆ. ೨ 'ವಿಮತಃ ಭಗವತ್ಪ್ರಸಾದಃ ಗುಣೋತ್ಕರ್ಷ ಜ್ಞಾನಸಾಧ್ಯಃ ಮಹಾಪ್ರಸಾದತ್ವಾತ್ ರಾಜಪ್ರಸಾದ ವತ್' ವಿವಾದವಿಷಯವಾದ ಭಗವತ್ಪ್ರಸಾವವು ಗುಣೋತ್ಕರ್ಷ ಜ್ಞಾನದಿಂದ ಸಾಧ್ಯವಾದುದ್ದು, ಮಹಾಪ್ರಸಾದವಾದುದರಿಂದ ರಾಜನ ಪ್ರಸಾದದಂತೆ. ॥ ೧೧೬ ॥ ೧೧೭ ॥

ಭಗವದ್ವಾಕ್ಯವನ್ನು ಹೇಳುತ್ತಾರೆ—

ಮೂ ॥ ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ॥ ೧೧೮ ॥
ಏತದ್ಬುಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ।
ಇತ್ಯತೋಽಖಿಲಸಚ್ಛಾಸ್ತ್ರ ವಿರುದ್ಧತ್ವೇನ ನಾನುಮಾ ॥
ವರ್ತತೇ ತತ್ರ ತೇನೇಶೋ ನಿರ್ಣೀತೋಽಖಿಲಸದ್ಗುಣಃ ॥ ೧೧೯ ॥

ಅ ॥ ಅನಘ=ಎಲೋ ನಿರ್ದೋಷನಾದ ಅರ್ಜುನನೇ, ಇತಿ = ಪೂರ್ವೋಕ್ತಪ್ರಕಾರ ನನ್ನಿಂದ ನಿನಗೆ ಯಾವುದು ಪುರುಷೋತ್ತಮತ್ವಾದಿಗಳು, ಉಕ್ತಂ=ಹೇಳಲ್ಪಟ್ಟವೆಯೋ, ಇದಂ ಗುಹ್ಯತಮಂ ಶಾಸ್ತ್ರಂ=ಇದು ಅತಿ ಗೋಪ್ಯವಾದ ಶಾಸ್ತ್ರವು. ಅಂದರೆ—ತಾತ್ಪರ್ಯದಿಂದ ಸರ್ವಶಾಸ್ತ್ರಗಳಿಂದ ಪ್ರತಿಪಾದ್ಯಮಾನವಾದ ಅರ್ಥವು. ಭಾರತ = ಭರತಕುಲೋತ್ಪನ್ನನಾದ ಎಲೋ ಅರ್ಜುನನೇ, ಏತತ್=ಇದನ್ನು, ಬುಧ್ವಾ = ತಿಳಿದು, ಬುದ್ಧಿಮಾನ್ = ಅಪರೋಕ್ಷ ಜ್ಞಾನಿಯು, ಸ್ಯಾತ್=ಆಗುವನು. ಕೃತಕೃತ್ಯಶ್ಚ=ಮುಕ್ತನೂಕೂಡ, ಸ್ಯಾತ್=ಆಗುವನು. ಇತ್ಯತಃ=ಈ ಕಾರಣದಿಂದ, ಅಖಿಲಸಚ್ಛಾಸ್ತ್ರವಿರುದ್ಧತ್ವೇನ=ಎಲ್ಲಾ ನಿರ್ದುಷ್ಟಗಳಾದ ಶಾಸ್ತ್ರಗಳಿಂದ ವಿರುದ್ಧವಾಗಿರುವುದರಿಂದ, ಅನುಮಾ = ('ಅಕ್ಷ್ಯಾದಿಸ್ಥಿತಾನಿ ಭಗವದ್ರೂಪಾಣಿ ಪರಸ್ಪರಂ ಭಿನ್ನಾನಿ ಯುಗಪದ್ಭಿನ್ನಸ್ಥಾನಸ್ಥಿತತ್ವಾತ್ ಘಟಾದಿವತ್' ಎನ್ನುವ) ಅನುಮಾನವು, ತತ್ರ=ಪರಮೇಶ್ವರರೂಪಭೇದಾದಿಗಳಲ್ಲಿ, ನ ವರ್ತತೇ=ಇರುವುದಿಲ್ಲ. ತೇನ=ಅದರಿಂದ, ಈಶಃ= ಶ್ರೀ ಹರಿಯು, ಅಖಿಲಸದ್ಗುಣಃ = ಸಮಸ್ತಗಳಾದ ನಿರ್ದುಷ್ಟಗಳಾದ ಗುಣಗಳುಳ್ಳವನೆಂದು, ನಿರ್ಣೀತಃ=ನಿಶ್ಚಯಿಸಲ್ಪಟ್ಟಿರುತ್ತಾನೆ. ॥ ೧೧೮ ॥ ೧೧೯ ॥ ಸೂ. ೧೧ ॥ ೨ ॥ ೩ ॥ ಅಧಿ. ೮ ॥

ನಸ್ಥಾನತೋಽಪ್ಯಧಿಕರಣವು ಸಮಾಪ್ತವಾಯಿತು.

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ
ದ್ವಿತೀಯಃಪಾದೇ ಅಷ್ಟಾಧಿಕರಣಾನಿ ಸಮಾಪ್ತಾನಿ ॥

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮತ್ ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ೩ನೇ ಅಧ್ಯಾಯದ ೨ನೇ ಪಾದದಲ್ಲಿ
ಎಂಟು (೮) ಅಧಿಕರಣಗಳು ಸಮಾಪ್ತಗಳಾದವು.

ಪದ್ಮಾಪದ್ಮಜವಂದ್ಯಾಯ ಪದ್ಮಪತ್ರನಿಭೇಕ್ಷಣ ।
ಪದ್ಮನಾಭಾಯ ರಾಮಾಯ ನಮಃ ಸತ್ಪದ್ಮಮಾಲಿನೇ ॥

